॥ ಶ್ರೀ ಹರಿಃ ಓಂ ॥

ಶ್ರೀ ಹರಿದಾಸ ಸಾಹಿತ್ಯ ಪ್ರಚಾರ ಗ್ರಂಥಮಾಲೆ

# ಭಜನ ಕೌಸ್ತುಭ

## ಸಂಪುಟ-೪

ಶ್ರೀಹರಿಯ ಪರವಾದ ಕೀರ್ತನ ಮಾಲೆ

ಪ್ರಕಾಶಕರು :

**ಪದ್ಮಾಮೂರ್ತಿ**

"ಶ್ರೀ ಉರಗಾದ್ರಿ", ನಂ. ೬೧, ೫ನೆಯ ಅಡ್ಡರಸ್ತೆ, (ಹೊಸ ನಂ. ೨೨)

ನರಸಿಂಹರಾಜ ಕಾಲೋನಿ, ಬೆಂಗಳೂರು-೫೬೦೦೧೯

ದೂರವಾಣಿ ಸಂಖ್ಯೆ : **6514555**

# BHAJANAKOUSTUBHA-VOLUME NO. FOUR

Crown 1/8 Size.

No. of Pages : 400+32

ಪ್ರಥಮ ಮುದ್ರಣ : ಜುಲೈ 13-07-99

ಪ್ರತಿಗಳ ಸಂಖ್ಯೆ : 1000

ಬೆಲೆ : ಎಪ್ಪತ್ತೈದು ರೂಪಾಯಿ

ಪ್ರತಿಗಳು ದೊರೆಯುವ ಸ್ಥಳ :

**ಪದ್ಮಾಮೂರ್ತಿ**
"ಶ್ರೀ ಉರಗಾದ್ರಿ" ನಂ. 61, (ಹೊಸ ನಂ. 22), 5ನೆಯ ಅಡ್ಡರಸ್ತೆ,
ನರಸಿಂಹರಾಜ ಕಾಲೋನಿ, ಬೆಂಗಳೂರು-560019
ದೂರವಾಣಿ ಸಂಖ್ಯೆ : 6514555

**ವೇದಾಂತ ಬುಕ್ ಹೌಸ್**
ಉಮಾ ಚಿತ್ರಮಂದಿರದ ಬಳಿ,
ಚಾಮರಾಜಪೇಟೆ, 6ನೇ ಮುಖ್ಯರಸ್ತೆ, ಬೆಂಗಳೂರು-550018
ದೂರವಾಣಿ ಸಂಖ್ಯೆ : 6507590

ಮುದ್ರಕರು : ಶಿಲ್ಪ ಪ್ರಿಂಟರ್ಸ್
ನಂ. 27, 1ನೇ ಕ್ರಾಸ್, ವಿದ್ಯಾಪೀಠ ರಸ್ತೆ
ಬೆಂಗಳೂರು-560028

ಮುಖಚಿತ್ರ : ಶ್ರೀ A.P.M. RAJURS
ಸರಸ್ವತೀ ನಗರ, ಬೆಂಗಳೂರು-560040

|| ಶ್ರೀ ಹರಿಃ ಓಂ ||

ಶ್ರೀ ಹರಿದಾಸ ಸಾಹಿತ್ಯ ಗ್ರಂಥಮಾಲೆ

# ಭಜನ ಕೌಸ್ತುಭ

## ಸಂಪುಟ ೪

ಕಲ್ಯಾಣಾದ್ಭುತಗಾತ್ರಾಯ ಕಾಮಿತಾರ್ಥಪ್ರದಾಯಿನೇ
ಶ್ರೀಮದ್ವೇಂಕಟನಾಥಾಯ ಶ್ರೀನಿವಾಸಾಯ ತೇ ನಮಃ ||



*This Book is published with the financial Assistance of Thirumala Thirupathi Devasthanams under Their Scheme "Aid to Public Religious Books"*

ಇಂತೀ ಸಾಷ್ಟಾಂಗ ಪ್ರಣಾಮಗಳು

**ಪದ್ಮಾಮೂರ್ತಿ**

# ಅರ್ಪಣೆ



ಎಚ್. ಎಸ್. ಶ್ರೀನಿವಾಸಮೂರ್ತಿ

ಜನನ - 25-9-1925

ನಿರ್ಯಾಣ - 13-7-1998

(ಶ್ರೀ ಕಾಂತವಿಠಲ)

"ಶ್ರೀ ಶ್ರೀನಿವಾಸಮೂರ್ತಿಗಳು ದೇಶೀಯ ವಿದ್ಯಾಶಾಲೆಯಲ್ಲಿ ಅಧ್ಯಾಪಕರಾಗಿದ್ದು ಮುಖ್ಯೋಪಾಧ್ಯಾಯರಾಗಿ ನಿವೃತ್ತಿ ಹೊಂದಿದರು. ಉತ್ತಮ ವರ್ಗದ ಅಧ್ಯಾಪಕರೆಂದು ಖ್ಯಾತಿ ಗಳಿಸಿದ್ದರು.

ಶ್ರೀ ಹರಿದಾಸ ಸಾಹಿತ್ಯಕ್ಕೆ ಅಪಾರ ಸೇವೆ ಸಲ್ಲಿಸಿದ್ದಾರೆ. ಈ ಸಂಪುಟವನ್ನು ಅವರ ಸ್ಮರಣಾರ್ಥವಾಗಿ ಪ್ರಕಟಿಸಲಾಗಿದೆ."

# SHRI SODE VADIRAJA MUTT

UDUPI–575 101
(UDUPI DIST) KARNATAKA
Phone : 24004


ಶ್ರೀ

**ವ್ಯಾಸಾಯ ಭವನಾಶಾಯ ಶ್ರೀಶಾಯ ಗುಣರಾಶಯೇ ।**
**ಹೃದ್ಯಾಯ ಶುದ್ಧವಿದ್ಯಾಯ ಮಧ್ವಾಯ ಚ ನಮೋ ನಮಃ ॥**

**ತಪೋವಿದ್ಯಾವಿರಕ್ತ್ಯಾದಿ ಸದ್ಗುಣೌಘಾಕರಾನಹಮ್ ।**
**ವಾದಿರಾಜಗುರೂನ್ ವಂದೇ ಹಯಗ್ರೀವದಯಾಶ್ರಯಾನ್ ॥**

ತತ್ವವಾದವನ್ನು ಅರ್ಥೈಸಿಕೊಳ್ಳುವಲ್ಲಿ ವ್ಯಾಸಸಾಹಿತ್ಯದಂತೆ ದಾಸ ಸಾಹಿತ್ಯವೂ ಬಹಳ ಪ್ರಮುಖವಾಗಿದೆ. ಅಪರೋಕ್ಷ ಜ್ಞಾನಿಗಳಾದ ಅನೇಕ ಪ್ರಾಚೀನ ಹರಿದಾಸರ ಕೃತಿಗಳು ಸಂಸ್ಕೃತ ಗ್ರಂಥಗಳಂತೆ ಪ್ರತಿನಿತ್ಯವೂ ಮನನ ಮಾಡಬೇಕಾದಷ್ಟು ಗಹನವಾದ ಪ್ರಮೇಯಗಳನ್ನು ತುಂಬಿಸಿ ಕೊಂಡಿವೆ. ವೇದಾಂತ ಶಾಸ್ತ್ರದಲ್ಲಿ ಬಹಳ ಶ್ರಮಪಟ್ಟವರು ಮಾತ್ರ ಪ್ರವೇಶಿ ಸಬಹುದಾದ ಗ್ರಂಥಗಳೂ ಹರಿದಾಸಸಾಹಿತ್ಯದಲ್ಲಿ ವಿಪುಲವಾಗಿವೆ. ಅಂತಹ ಗ್ರಂಥಗಳಲ್ಲಿ ಶ್ರೀ ಜಗನ್ನಾಥದಾಸವರೇಣ್ಯರಿಂದ ರಚಿಸಲ್ಪಟ್ಟ ಶ್ರೀಮದ್ಹರಿ ಕಥಾಮೃತಸಾರವೂ ಒಂದು. ಸಂಸ್ಕೃತ ಭಾಷೆಯಲ್ಲಿಯೇ ಪ್ರೌಢವಾದ ವ್ಯಾಖ್ಯಾನ ಗ್ರಂಥವನ್ನು ಬರೆಸಿಕೊಂಡಿದೆ ಎಂದ ಮೇಲೆ ಈ ಗ್ರಂಥದ ಹಿರಿಮೆಯ ಬಗ್ಗೆ ಮತ್ತೇನೂ ಹೇಳಬೇಕಾಗಿಲ್ಲ.

ಅಂತಹ ಗ್ರಂಥವನ್ನು ಪ್ರಾಚೀನ ವ್ಯಾಖ್ಯಾನಗಳೊಂದಿಗೆ ಪ್ರಕಟಿಸಿದ ಶ್ರೀಯುತ ಹೆಚ್. ಎಸ್. ಶ್ರೀನಿವಾಸಮೂರ್ತಿಯವರು ಸಮಗ್ರ ಮಾಧ್ವ ಜನತೆಯಿಂದ ಅಭಿನಂದನಾರ್ಹರು. ಆದರೆ ದುರದೃಷ್ಟವಶಾತ್ ಅವರ ಅಕಾಲಿಕ ನಿಧನ ಬಹಳ ಬೇಸರವನ್ನುಂಟುಮಾಡಿದೆ. ಆದರೂ ಈ ಪ್ರಕಟ ಣೆಯ ಕೆಲಸವನ್ನು ಅವರ ಧರ್ಮಪತ್ನಿಯವರು ಮುಂದುವರಿಸುವಲ್ಲಿ ಹೆಜ್ಜೆ

ಇರಿಸಿದ್ದು ಸ್ತುತ್ಯ ಕಾರ್ಯವಾಗಿದೆ. ಇದರಿಂದ ಅವರ ಆತ್ಮಕ್ಕೂ ಶಾಂತಿ ದೊರಕುತ್ತದೆ ಎಂದು ನಾವು ಭಾವಿಸುತ್ತೇವೆ. ಮುದ್ರಣಗೊಂಡಿರುವ 'ಭಜನಕೌಸ್ತುಭ'ದ ನಾಲ್ಕನೆಯ ಸಂಪುಟವು ಅನೇಕ ಕೀರ್ತನ ಪುಷ್ಪಗಳಿಂದ ತುಂಬಿಕೊಂಡು ಸೌರಭವನ್ನು ಎಲ್ಲೆಡೆಯೂ ಹರಡಲಿ, ಅದಕ್ಕೆ ಬೇಕಾದ ಸಕಲವಿಧ ಭಾಗ್ಯವನ್ನು ಸಮೀರಗುರುರಾಜವಂದಿತ ಶ್ರೀ ಭೂವರಾಹ ಶ್ರೀ ಹಯಗ್ರೀವಾತ್ಮಕ ಶ್ರೀ ವೇದವ್ಯಾಸರು ದಯಪಾಲಿಸಲೆಂದು ನಾವು ಹೃತ್ಪೂರ್ವಕವಾಗಿ ಪ್ರಾರ್ಥಿಸುತ್ತೇವೆ.

**ರಜತಪೀಠಪುರವ್**

**2–8–1999**

ಇತ್ಯನೇಕ ನಾರಾಯಣ ಸ್ಮರಣೆಗಳು

ಸಹಿ- ಶ್ರೀ ವಿಶ್ವೋತ್ತಮತೀರ್ಥ ಸ್ವಾಮಿಗಳು

ಅಧಿಪತಿ ಶ್ರೀ ಸೋದೆ ವಾದಿರಾಜ ಮಠ

ಉಡುಪಿ–576101. ದ. ಕ.

## ಶ್ರೀ ಹರಿದಾಸ ಸಾಹಿತ್ಯ ಪ್ರಚಾರ ಗ್ರಂಥಮಾಲಿ

# ನಮ್ಮಲ್ಲಿ ದೊರೆಯುವ ಪುಸ್ತಕಗಳು

ಶ್ರೀಮದ್ಹರಿಕಥಾಮೃತಸಾರ ಸಂಧಿ ಒಟ್ಟು 33 ಸಂಧಿಗಳಲ್ಲಿ 25 ಮಾತ್ರ ಲಭ್ಯ.

ಇದರಲ್ಲಿ 2, 3, 6, 7, 11, 12, 13 ಮತ್ತು 16 ಲಭ್ಯವಿಲ್ಲ. ಉಳಿದಿರುವ ಸಂಧಿಗಳಲ್ಲಿ ಐದು ವ್ಯಾಖ್ಯಾನಗಳನ್ನೊಳಗೊಂಡ ಸಂಧಿ 1ಕ್ಕೆ ಬೆಲೆ: 30 (ಮೂವತ್ತು ರೂಪಾಯಿಗಳು).

"ಶ್ರೀ ಮಧ್ವನಾಮ" ಬೆಲೆ: 25-00 ರೂಪಾಯಿ.

"ಶ್ರೀ ಜಯತೀರ್ಥ ವೈಜಯಂತಿ" ಬೆಲೆ 20-00 ರೂಪಾಯಿ.

ಕೆಳಗಿನ ವಿಳಾಸದಲ್ಲಿ ವಿಘ್ನೇಶ್ವರ ಸಂಧಿ-ಶ್ರೀಮದ್ಹರಿಕಥಾಮತಸಾರ ದಲ್ಲಿರುವ ಪದ್ಯಗಳು ಅನುವಾದದೊಂದಿಗೆ ಕ್ಯಾಸೆಟ್ ಮಾಡಿ, ಬೆಲೆ: 1ಕ್ಕೆ 30-00 ರೂ. ಹಾಡಿರುವ ಕಲಾವಿದರು ಶ್ರೀಮತಿ ರತ್ನಮಾಲ ಪ್ರಕಾಶ್ ಅನುವಾದಕರು: ದಿ|| ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿಗಳು.

ಪ್ರತಿಗಳು ದೊರೆಯುವ ಸ್ಥಳ ಪದ್ಮಾಮೂರ್ತಿ "ಶ್ರೀ ಉರಗಾದ್ರಿ" 61, 5ನೆಯ ಅಡ್ಡರಸ್ತೆ, ಎನ್.ಆರ್. ಕಾಲೋನಿ, ಬೆಂಗೂರು-19.



# ಪ್ರಸ್ತಾವನೆ

ಶ್ರೀ ಹರಿದಾಸ ಸಾಹಿತ್ಯ ಪ್ರಚಾರ ಗ್ರಂಥಮಾಲೆಯಲ್ಲಿ ಭಜನಕೌಸ್ತುಭ ಮೂರು ಭಾಗಗಳಲ್ಲಿ ಹೊರಬಂದಿತ್ತು.

ಭಾಗ ೧ ರಲ್ಲಿ (ದಾಸಕಕ್ಷ).

ಭಾಗ ೨ ರಲ್ಲಿ (ಯತಿ ಕಕ್ಷ ಮತ್ತು ವಾಯುದೇವರು ರಮಾದೇವಿಯರ ಮೇಲೆ ಕೃತಿಗಳು.)

ಭಾಗ ೩. ರಲ್ಲಿ ಶ್ರೀ ಹರಿಪರವಾದ ಕೀರ್ತನೆಗಳು.

ಹರಿದಾಸರುಗಳಿಂದ ರಚಿತವಾದ ದೇವರ ನಾಮಗಳು.

ರಾಮ ಮತ್ತು ಕೃಷ್ಣರ ಮೇಲೆ ”

ನಾಲ್ಕನೇ ಭಾಗ ಶ್ರೀ ಪಾಂಡುರಂಗ, ನರಹರಿ ಹಾಗೂ ಸುಳಾದಿ, ಉಗಾಭೋಗ ಮತ್ತು ಕೇಶವಾದಿ ಭಗವದ್‌ರೂಪಗಳನ್ನೊಳಗೊಂಡ ಶ್ರೀ ಕನಕದಾಸರು ಮತ್ತು ಪುರಂದರದಾಸರು ಮೊದಲಾದ ಹರಿದಾಸರು ರಚಿಸಿರುವ ದೇವರ ನಾಮಗಳ ಸಂಗ್ರಹ (ಅರ್ಥ ಸಹಿತ).

ಈ ಹೊತ್ತಿಗೆಯನ್ನು ತಮ್ಮ ಕೈಯಲ್ಲಿಡಲು ಪರಮ ಸಂತಸದ ಸಂಗತಿಯಾಗಿದೆ. ಇದರ ಉಪಯೋಗವನ್ನು ಪಡೆಯಬೇಕಾಗಿ ವಿನಂತಿ.

ಇಂತೀ ಪ್ರಣಾಮಗಳು

ಶ್ರೀ ಹರಿಪಾದ ಸೇವಕಿ ಪದ್ಮಾಮೂರ್ತಿ

# ಪ್ರಕಾಶಕರ ನುಡಿ

**ಆತ್ಮೀಯರಾದ ಹರಿದಾಸ ಬಂಧುಗಳಲ್ಲಿ, ಸವಿನಯ ಪೂರ್ವಕ ವಿನಂತಿ.**

ಶ್ರೀ ಹರಿವಾಯು ಗುರುಗಳ ಪರಮಾನುಗ್ರಹದಿಂದ ಇಲ್ಲಿಯ ಪರ್ಯಂತ ಕೀರ್ತಿ ಶೇಷರಾದ ಶ್ರೀ ಶ್ರೀನಿವಾಸಮೂರ್ತಿಗಳು, ಶ್ರೀ ಹರಿದಾಸರುಗಳ ಪರವಾದ ದೇವರ ನಾಮಗಳನ್ನು ಕುರಿತು ಅಂದರೆ ಶ್ರೀ ಮದ್ಧರಿಕಥಾಮೃತಸಾರದ ವಕ್ತಾರರಾದ ಶ್ರೀ ಜಗನ್ನಾಥ ದಾಸವರೇಣ್ಯರ ಪರವಾದ ಕೀರ್ತನೆ ಮತ್ತು ಅವರ ಭವ್ಯ ಜೀವನ ಚರಿತ್ರೆಯನ್ನೊಳಗೊಂಡ ಪ್ರಥಮ ಪುಷ್ಪ ಹೊರ ತಂದಿದ್ದರು.

ದ್ವಿತೀಯ ಪುಷ್ಪ ಶ್ರೀ ಗೋಪಾಲದಾಸರು ಮತ್ತು ಮೋಹನದಾಸರು. ತೃತೀಯ ಪುಷ್ಪ ಭೃಗಂಶ ಸಂಭೂತರಾದ ಶ್ರೀ ವಿಜಯದಾಸವರೇಣ್ಯರ ಮಹಿಮಾತಿಶಯಗಳು ಮತ್ತು ಅವರ ಪರವಾದ ಕೀರ್ತನೆಗಳು.

ಚತುರ್ಥ ಪುಷ್ಪ ನಾರದಾಂಶ ಸಂಭೂತರಾದ ಕರ್ಣಾಟಕ ಸಂಗೀತ ಪಿತಾಮಹರೆನಿಸಿದ ಶ್ರೀ ಪುರಂದರದಾಸರು ಮತ್ತು ಕನಕದಾಸರು ಈ ಸಂಯುಕ್ತ ಸಂಚಿಕೆ ಹೊರ ಬಂದಿತ್ತು.

ಶ್ರೀ ಹರಿದಾಸರಿಂದ ಪ್ರಾರಂಭವಾಗಿ ಯತಿ ಕಕ್ಷದಲ್ಲಿ ಕಲ್ಪವೃಕ್ಷ-ಕಾಮಧೇನುವೆಂದೆನಿಸಿರುವ ಶ್ರೀ ರಾಘವೇಂದ್ರ ಗುರು ಸಾರ್ವಭೌಮರ ಪರವಾಗಿ ಸುಮಾರು 300ಕ್ಕೂ ಹೆಚ್ಚಿನ ದೇವರ ನಾಮಗಳ ಸಂಗ್ರಹದ ಕೃತಿ ರತ್ನ ಭಕ್ತಾದಿಗಳ ಕೈ ಸೇರಿತು.

ಹೀಗೆ ಮುಂದುವರೆದು ಚಕ್ರಾಬ್ಜಮಂಡಲ ಈ ಹೊತ್ತಿಗೆ ಶ್ರೀ ಶ್ರೀ 108 ಶ್ರೀಪಾದರಾಜ ಮಠಾಧೀಶರಾದ ಶ್ರೀ ವಿಜ್ಞಾನ ನಿಧಿ ತೀರ್ಥ ಶ್ರೀಪಾದಂಗಳವರ ಸಹಕಾರದಿಂದ ಪ್ರಕಟಿಸಲಾಗಿತ್ತು.

ಈ ಚಕ್ರಾಬ್ಜಮಂಡಲದ ವಿವರಣೆ ಶ್ರೀ ವಿಜಯದಾಸವರೇಣ್ಯರ "ಕಂಕಣಾಕಾರ ಸುಳಾದಿ"ಯ ಆಧಾರದ ಮೇಲೆ ಪ್ರಕಟಿಸಲಾಗಿತ್ತು. (ಕ್ರಿ. ಶ. 1991).

ಈ ವಿವರಣೆಯಲ್ಲಿ ಮೇಷಾದಿ ರಾಶಿಗಳಲ್ಲಿ ಸೂರ್ಯನ ಸಂಚಾರ ದೃಷ್ಟಿಯಿಂದ ಮಂಡಲವನ್ನು ಅಪ್ರದಕ್ಷಿಣಾಕಾರವಾಗಿ ಪರಿಗಣಿಸಿ ವಿವರಿಸ ಲಾಗಿತ್ತು. ಇದು ಕೆಲವು ವೃತ್ತಗಳಿಂದ ಪ್ರತಿಕೂಲ ಪ್ರತಿಕ್ರಿಯೆಯನ್ನು ಶಂದಿತು.

ಇದನ್ನು ಪುನಃ ಕೂಲಂಕುಶವಾಗಿ ಪರಿಶೀಲಿಸಲಾಗಿ ಅಂತಿಮವಾಗಿ "ಕಂಕಣಾಕಾರ" ಪ್ರದಕ್ಷಿಣಾಕಾರವೇ ಸರಿ ಎಂದು ಪರಿಗಣಿಸಲಾಯ್ತು. ಈ ಪುಸ್ತಕವನ್ನು ಪಡೆದಿದ್ದವರು ಇದನ್ನು ಗಮನಿಸಬೇಕಾಗಿ ವಿನಂತಿ.

ಭಜನಕೌಸ್ತುಭ ಎಂಬ ಮಾಲೆ ಅಚ್ಚುಮೆಚ್ಚಿನ ಪುಷ್ಪವಾಗಿ 3 ಭಾಗ ಗಳಲ್ಲಿ ದಾಸಕಕ್ಷ ಯತಿಕಕ್ಷ ಮತ್ತು ದೇವತಾ ಕಕ್ಷಗಳಲ್ಲಿ ಹೊರ ಬಂದು ಜನರ ಅಚ್ಚುಮೆಚ್ಚಿನ ಕೃತಿಗಳಾದವು. ಈಗ ಅವರು ಬರೆದಿಟ್ಟಿದ್ದ ವಹಿಯ ಆಧಾ ರದ ಮೇಲೆ ನಾಲ್ಕನೇ ಭಾಗ ಹೊರ ಬಂದು ಸಜ್ಜನರ ಕೈ ಸೇರುತ್ತಿದೆ.

ಅಲ್ಪಾವಧಿಯಲ್ಲಿ ಮಧ್ವನಾಮ—ಶ್ರೀ ಜಯತೀರ್ಥ ವೈಜಯಂತಿ ಎಂಬ ಕೃತಿರತ್ನ ಹೊರ ಬಂದಿದ್ದಲ್ಲದೆ ಎರಡು ವರ್ಷಗಳ ಕಾಲ ಶ್ರೀ ಹರಿ ದಾಸ ಕೀರ್ತನಾ ತರಂಗಿಣಿ ಹರಿದು ಬಂತು, ಜನರ ಸಹಕಾರವಿಲ್ಲದೆ ನಿಲ್ಲಿಸ ಬೇಕಾದ ಪ್ರಸಂಗ ಒದಗಿ ಬಂತು, ಇದಕ್ಕೆ ಚಂದಾದಾರರಾದವರು ಮಾಸ ಪತ್ರಿಕೆ ಪಡೆಯದಿದ್ದಲ್ಲಿ ಈಗಲೂ ಮೇಲ್ಕಂಡ ವಿಳಾಸದಲ್ಲಿ ಪಡೆಯ ಬಹುದು.

ಇಂಥಹ ಬೃಹದಾಕಾರವಾದ ಯೋಜನೆಯಲ್ಲಿ ಶ್ರೀ ಜಗನ್ನಾಥ ದಾಸ ವರೇಣ್ಯರ ಮೇರುಕೃತಿ ಶ್ರೀ ಮದ್ಹರಿಕಥಾಮೃತಸಾರ 33 ಸಂಪುಟಗಳಲ್ಲಿ ಹೊರಬಂದು ಜನರ ಕೈಸೇರಿ ಹೆಚ್ಚಿನ ಉಪಯೋಗವಾಯಿತು, ಇದಕ್ಕೆ

ಜನರ ಸಹಕಾರ ಹಾಗೂ ದೈವಕೃಪೆಯಲ್ಲದೆ ಇಂಥಹ ಮಹತ್ಕಾರ್ಯ ಅಸಾಧ್ಯವೆಂದರೆ ಅತಿಸಯೋಕ್ತಿ ಯಾಗಲಾರದು.

ಇದರಲ್ಲಿ ಅನೇಕ ಸಂಧಿಗಳು ಪುನಃ ಮುದ್ರಿಸಿದರೂ ಶರವೇಘದಲ್ಲಿ ಖರ್ಚಾಗಿ ಕೆಲವು ಸಂಪುಟಗಳು ಮತ್ತೆ ಮತ್ತೆ ದೊರೆಯದಾಗಿದೆ, ಪುನಃ ಮುದ್ರಿಸಲು ಒಂದು ಸಂಪುಟದ ಬೆಲೆ 30,000ದವರೆಗೂ ಆಗುವುದು. ಇಂದಿನ ಬೆಲೆ ಏರಿರುವುದರಿಂದ ಈ ಕಾರ್ಯ ನಿಲ್ಲಿಸಲಾಗಿದೆ, ಕೆಲವು ಭಕ್ತಾಧಿಗಳಿಗೆ ಕೆಲವೊಂದು ಸಂಪುಟ ಇನ್ನು ಕೈ ಸೇರಿಲ್ಲ. ಅವರಿಗೆ ದೇಹಾಲಸ್ಯವಾದ ಕಾರಣ ತಲುಪಿಸುವುದು ಕಷ್ಟ ಸಾಧ್ಯವಾಗಿ ಕೆಲವರ ಕೈ ಮುಟ್ಟಿಲ್ಲದೇ ಇರಬಹುದು, ಇದಕ್ಕಾಗಿ ವಿಷಾಧಿಸುತ್ತೇನೆ.

ಉಳಿದಿರುವ ಸಂಪುಟಗಳನ್ನು ಖುದ್ದಾಗಿ ಸಂಪರ್ಕಿಸಿ ಪಡೆಯಬಹುದು, ದಾನಿಗಳು ಮುಂಪೆ ಬಂದಲ್ಲಿ ಹರಿ ಇಚ್ಛೆಗೆ ಬಂದರೆ ಧನ ಸಹಾಯ ದೊರೆತರೆ ಮತ್ತೆ ಉಳಿದ 8 ಸಂಪುಟ ಪುನಃ ಮುದ್ರಿಸಬಹುದು.

ಶ್ರೀ ಹರಿದಾಸ ವಾಙ್ಮಯಕ್ಕೆ ಚಿರ ಸ್ಮರಣೀಯವಾದ ಕಾರ್ಯವನ್ನು ಮಾಡಿ ಹರಿ ಪಾದವನ್ನು ಸೇರಿದ ಕೀರ್ತಿ ಶೇಷರಾದ ಪೂಜ್ಯ ಶ್ರೀ ಉರಗಾದ್ರಿವಾಸ ವಿಠಲದಾಸರಿಂದ "ಶ್ರೀಕಾಂತ ವಿಠಲ" ಎಂಬ ಅಂಕಿತವನ್ನು ಪಡೆದು ಹರಿದಾಸರಾಗಿದ್ದ ಶ್ರೀ ಶ್ರೀನಿವಾಸಮೂರ್ತಿಗಳ ಆತ್ಮ ಶಾಂತಿ ಹಾಗೂ ಅವರಿಗೆ ಅಳಿಲು ಸೇವೆ ಸಲ್ಲಿಸುವ ಉದ್ದೇಶ ಈ ಹೊತ್ತಿಗೆ ಅವರ ಧರ್ಮಪತ್ನಿಯಾದ (ಪದ್ಮಾಮೂರ್ತಿ) ನಾನು ಹರಿ ಪ್ರೇರಣಾನುಸಾರ ಈ ನಾಲ್ಕನೇ ಭಾಗ ಭಜನಕೌಸ್ತುಭ ಹೊರ ತಂದಿದ್ದೇನೆ. (ಪಹಿಯ ಆಧಾರದ ಮೇಲೆ) ಇದರಲ್ಲಿ ಲೋಪ ದೋಷಗಳು ಕಂಡುಬಂದಲ್ಲಿ ಕ್ಷಮಾ ಕೋರಲಾಗಿದೆ.

ಈ ಹೊತ್ತಿಗೆ ಹೊರ ಬರಲು ಪ್ರತ್ಯಕ್ಷವಾಗಿ ಪರೋಕ್ಷವಾಗಿ ಅನೇಕರ ಸಲಹೆ ದೊರೆತ ಕಾರಣ ನನ್ನೀ ಕಾರ್ಯ ಸಫಲವಾಗಿದೆ.

ಅತಿ ಮುಖ್ಯವಾಗಿ (Proof Reading) ಬೇಸರವಿಲ್ಲದೆ ಹರಿಸೇವೆಯೆಂದು ಭಾವಿಸಿ ತಿದ್ದುಪಡಿ ಇತ್ಯಾದಿ ಕಾರ್ಯವನ್ನು ಮಾಡಿಕೊಟ್ಟ ಶ್ರೀ

(S. G.) ರಾಮಚಂದ್ರರಾಯರಿಗೆ ನಾನು ಚಿರಋಣಿ. ಈ ಹೊತ್ತಿಗೆ ಹೊರ ತರಲು ಪ್ರೋತ್ಸಾಹ ನೀಡಿದ ಮೈಸೂರಿನ ನಿವಾಸಿಗಳಾದ ಶ್ರೀಯುತರಾದ ಶ್ರೀ ರಾಘವೇಂದ್ರರಾವ್‌ರವರಿಗೆ ನನ್ನ ಹೃತ್ಪೂರ್ವಕ ವಂದನೆಗಳು.

ಹಿರಿಯರಾದ ಶ್ರೀ ಆದ್ಯ ರಾಮಾಚಾರ್ ಮತ್ತು ಶ್ರೀ ಅಪ್ಪಣ್ಣಾಚಾರ್‌ರವರು ಸಕಾಲಕ್ಕೆ ಸರಿಯಾದ ಸಲಹೆಯನ್ನು ಕೊಟ್ಟು ಈ 'ಹೊತ್ತಿಗೆ' ಹೊರ ಬರಲು ಅವಕಾಶ ಮಾಡಿಕೊಟ್ಟಿದ್ದಕ್ಕಾಗಿ ಅವರಿಗೆ ನನ್ನ ಅನಂತಾನಂತ ವಂದನೆಗಳು.

ಈ ಗ್ರಂಥ ಪ್ರಕಟಣೆಗೆ ಸ್ಫೂರ್ತಿ ನೀಡಿರುವ ಹಾಗೂ ಧನ ಸಹಾಯ ಮಾಡಿರುವ ಖ್ಯಾತ ಕೈಗಾರಿಕೋದ್ಯಮಿ ಹಾಗೂ ಹೃದಯ ವೈಶಾಲ್ಯ ಕವಿ ಶ್ರೀಯುತ ಶ್ರೀ ಹರಿ ಖೋಡೆಯವರಿಗೆ ನನ್ನ ಅನಂತಾನಂತ ಧನ್ಯವಾದಗಳು

ವಿದೇಶದಲ್ಲಿರುವ ಶ್ರೀಯುತ ನಟರಾಜ್‌ರವರು ಈ ಪುಸ್ತಕದ ಮುದ್ರಣಕ್ಕೆ ಧನ ಸಹಾಯ ಮಾಡಿದ್ದಾರೆ. ಮತ್ತು ಅಸುಗೋಡು ಪ್ರಹ್ಲಾದ ರಾಯರು ಹಾಗೂ ಯುವಕರಾದ ಕುಂಭಕೋಣಂ ಮನೆತನಕ್ಕೆ ಸೇರಿದ ನಮ್ಮ ಶ್ರೀ K. S. ವೆಂಕಟೇಶ್ ಇವರುಗಳಿಗೆ ನನ್ನ ಅನೇಕಾನೇಕ ವಂದನೆಗಳು. ಶ್ರೀಮತಿ ಅಂಜನಾ ದಾವಣಗೆರೆ ಇವರೂ ಸಹ ನೆರವು ನೀಡಿದ್ದಾರೆ. ಶ್ರೀ ಮದಾನಂದ ತೀರ್ಥ ಸೇವಾ ಸಂಘದಲ್ಲಿ ಉಳಿದಿದ್ದ 250/–ರೂ.ಗಳನ್ನು (ಕೋಶಾಧಿಕಾರಿಗಳ ಅಪ್ಪಣೆ ಮೇರೆಗೆ) ಉಪಯೋಗಿಸಲಾಗಿದೆ. ಇದಕ್ಕಾಗಿ ಶ್ರೀಮತಿ ಸುಶೀಲ ಶ್ರೀ ರಂಗನಾಥ ಸದಸ್ಯರೆಲ್ಲರಿಗೂ ವಂದನೆಗಳು.

ಶ್ರೀಯುತ ಎ. ಭೀಮರಾವ್‌ರವರು ಸಕಾಲಕ್ಕೆ ನೆರವು ನೀಡಿದ್ದಕ್ಕಾಗಿ ಅವರಿಗೂ ಸಹ ಧನ್ಯವಾದಗಳು.

ಎಲ್ಲಕ್ಕೂ ಮಿಗಿಲಾಗಿ ಧೈರ್ಯ ತುಂಬಿ ಮುದ್ರಣಕ್ಕೆ ಹೆಚ್ಚಿನ ಸಹಕಾರ ಕೊಟ್ಟ "ಶಿಲ್ಪ ಪ್ರಿಂಟರ್ಸ್" ಮಾಲೀಕರಾದ ಶ್ರೀ ಎಸ್. ಎಲ್. ಗುರುಶಾಂತಮೂರ್ತಿ ಇವರಿಗೆ ಮತ್ತು ಉತ್ತಮ ಬೈಂಡಿಂಗ್ ಮಾಡಿಕೊಟ್ಟಿರುವ ಶ್ರೀ ಬಾಲಕೃಷ್ಣರವರಿಗೂ ಹಾಗೂ ಸಕಾಲದಲ್ಲಿ ಸೂಕ್ತ ಸಲಹೆಗಳನ್ನು

ಕೊಟ್ಟು ಈ ಹೊತ್ತಿಗೆ ಹೊರ ಬರಲು ಸಹಕಾರ ನೀಡಿದ ಶ್ರೀಯುತರಾದ ಅನಂತಸ್ವಾಮಿರಾವ್ ಮತ್ತು ಡಾ॥ ಮಾಧವರಾವ್ ಇವರುಗಳಿಗೂ ನನ್ನ ಕೃತಜ್ಞತೆಗಳು.

ಅಲಸೂರಿನ ವಯೋವೃದ್ಧರು, ಜ್ಞಾನವೃದ್ಧರೂ ಆದ ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಮಠದ ಶ್ರೀಯುತರಾದ ಎ. ಭೀಮಾಚಾರ್ ನನ್ನ ಯಾವುದೇ ಕೆಲಸಕ್ಕೂ ಪ್ರೋತ್ಸಾಹ ಕೊಡುತ್ತಿದ್ದು ಈ ಮುದ್ರಣಕ್ಕಾಗಿ ಧನ ಸಹಾಯ ನೀಡಿದ್ದಕ್ಕಾಗಿ ನನ್ನ ಅನಂತಾನಂತ ಪ್ರಣಾಮಗಳು.

ನನ್ನಲ್ಲಿ ಅಧ್ಯಾತ್ಮದ ಒಲವು ಮೂಡಿಸಿದ (ಶ್ರೀ ಹರಿದಾಸ ವಾಙ್ಮಯಕ್ಕೆ ಸತತವಾಗಿ ಕಾರ್ಯ ನಿರ್ವಹಿಸುತ್ತಿರುವ) ಶ್ರೀ ಹಾವನೂರುರವರಿಗೂ ಮತ್ತು ನನಗೆ ಸಕಾಲಕ್ಕೆ ಸಲಹೆಯನ್ನು ನೀಡಿದ ನನ್ನ ಆತ್ಮೀಯ ಗೆಳತಿ ಶ್ರೀಮತಿ ರುಕ್ಮಿಣಿ ಗಿರಿಮಾಜಿಯವರಿಗೂ ನನ್ನ ಕೃತಜ್ಞತೆಗಳು.

ಮುಖ್ಯವಾಗಿ ನಮ್ಮ ಕುಟುಂಬ ವರ್ಗದವರ ಸಹಕಾರದಿಂದ ನನ್ನ ಕೆಲಸ ಸಫಲವಾಗಿ ಅವರಿಗೆ ನನ್ನ ಆಶೀರ್ವಾದದೊಂದಿಗೆ ಕೃತಜ್ಞತೆಗಳು.

ಶ್ರೀಯುತರಾದ ಪ್ರಕಾಶ್ ಮತ್ತು ಶ್ರೀಮತಿ ರತ್ನಮಾಲರವರು ಹಾಡಿರುವ 'ಶ್ರೀ ವಿಘ್ನೇಶ್ವರ ಸಂಧಿ' ಕ್ಯಾಸೆಟ್ಟಿನ ಮೂಲಕ ಬಂದ ಹಣವನ್ನು ಇದಕ್ಕೆ ವಿನಿಯೋಗಿಸಲಾಗಿದೆ. ಅದಕ್ಕಾಗಿ ಅವರಿಗೂ ಮತ್ತು ಅವರ ಸ್ನೇಹಿತರಾದ ರಾಜುರವರಿಗೂ ನನ್ನ ಹೃತ್ಪೂರ್ವಕ ವಂದನೆಗಳು.

ಶ್ರೀ ಸೋದೆ ವಾದಿರಾಜ ಮಠ (ಉಡುಪಿ) ಶ್ರೀಪಾದಂಗಳವರಿಂದ ಆಶೀರ್ವಚನ ಪಡೆದಿರುವುದು ನಮ್ಮ ಭಾಗ್ಯ ಅವರಿಗೆ ನನ್ನ ಸಾಷ್ಟಾಂಗ ಪ್ರಣಾಮಗಳು,

ಶ್ರೀಗಳವರ ಭೇಟಿಗೆ ಅನುವು ಮಾಡಿಕೊಟ್ಟ ಶ್ರೀ ಪುರಾಣಿಕ್‌ರವರಿಗೂ ಹಾಗೂ ಶ್ರೀಯುತರಾದ ಸಂಗೀತ ವಿದ್ವಾನ್ ನಾಗರಾಜ್ ಹವಾಲ್ದಾರ್ ನನ್ನ ಧನ್ಯವಾದಗಳು.

ಈ 'ಭಕ್ತಿ ಕುಸುಮ'ವನ್ನು ಪರಮ ಪೂಜ್ಯರೂ ಹಾಗೂ ಶ್ರೀ ಹರಿ ದಾಸ ಸಾಹಿತ್ಯದಲ್ಲಿ ಅಪಾರ ಶ್ರದ್ಧೆ ಭಕ್ತಿ ಇದ್ದ ಶ್ರೀ 'ಉರಗಾದ್ರಿ' ವಾಸ ವಿಠ್ಠಲರ ಶಿಷ್ಯರಾದ ಶ್ರೀಕಾಂತ ವಿಠ್ಠಲ ದಾಸರ (ಕೀರ್ತಿ ಶೇಷರಾದ ಶ್ರೀ ಶ್ರೀನಿವಾಸಮೂರ್ತಿಗಳ) ಪಾದಾರವಿಂದಗಳಲ್ಲಿ ಅರ್ಪಿಸುತ್ತಿದ್ದೇನೆ.

ಇಂತೀ ಪ್ರಣಾಮಗಳು

**ಪದ್ಮಾಮೂರ್ತಿ**

# ಕೀರ್ತನಾನುಕ್ರಮಣಿಕೆ

★

॥ ಶ್ರೀ ಪಾಂಡುರಂಗವಿಠ್ಠಲಾಯ ನಮಃ ॥

# ಧ್ಯಾನ ಶ್ಲೋಕ

ಸಮಚರಣಸರೋಜಂ ಸಾಂದ್ರ ನೀಲಾಂಬುದಾಭವತ್ ।
ಜಘನನಿಹಿತ ಪಾಣಿಂ ಮಂಡನಂ ಮಂಡನಾನಾಂ ॥
ತರುಣತುಲಸೀಮಾಲಾಕಂಧರಂ ಕಂಜನೇತ್ರವ್ ।
ಸದಯಧವಲಹಾಸಂ **ವಿಠ್ಠಲಂ ಚಿಂತಯಾಮಿ** ॥

## (ಪುರಂದರ ವಿಠಲಾಂಕಿತ)

**ರಾಗ–ತೋಡಿ** **ಛಾಪು–ತಾಳ**

ಕಟಿಯಲ್ಲಿ ಕರವಿಟ್ಟನು–ಜಗದೀಶನು ॥ ॥ಪ॥

ರಾಜಸೂಯಯಾಗದಲ್ಲಿ ರಾಜೇಶ್ವರ
ರಾಜರು ಮೊದಲಾದ ಸುರರೆಲ್ಲರು
ಭೋಜನವನ್ನೆ ಮಾಡಿದೆಂಜಲು ಮೊದಲಾದ್ದ
ರಾಜೀವಾಕ್ಷನು ಎತ್ತಿದಾಯಾಸದಿಂದಲೋ ॥ ॥೧॥

ಗೊಲ್ಲಬಾಲಕರೊಡಗೂಡಿ ತಾಬಂದು
ಗೊಲ್ಲತೇರ ಮನೆಪೊಕ್ಕು ಬೆಣ್ಣೆ ತಿಂದು
ಬಲ್ಲಿದ ತೃಣಾವರ್ತ ಮೊದಲಾದಸುರರನು
ಎಲ್ಲರನು ಕೊಂದ ಆಯಾಸದಿಂದಲೋ ॥ ॥೨॥

ಧರಣಿಯನು ತಂದ ದನುಜ ಹಿರಣ್ಯಕನ
ಕೋರೆದಾಡಿಯಿಂದ ಸೀಳಿದರಿಂದಲೋ

ವಾರಿಜಮುಖಿ ಸರ್ವಕಾಲದಲಿನಿಂತು
ಸೇರಿ ಸುರತಮಾಡಿದಾಯಾಸದಿಂದಲೋ ॥ ॥೩॥

ಸುರಪತನಯಗೆ ಸಾರಥ್ಯವನೆ ಮಾಡಿ
ಭರದಿಂದ ಚಕ್ರವಪಿಡಿದದರಿಂದಲೋ
ಪರಿಪರಿವಿಧದಿಂದ ಕುದುರೆಗಳನು ತೊಳೆದು
ಪರಿಪರಿ ಕೆಲಸದ ಆಯಾಸದಿಂದಲೋ ॥ ॥೪॥

ಮುದದಿಂದ ವ್ರಜದ ಹದಿನಾರು ಸಾವಿರ
ವನಿತೆಯರಾಳಿದ ಮದದಿಂದಲೋ
ಮದಗಜವಗಮನೇರ ಮಧುರಾಂತಕನ
ಒದಗಿ ಮಾವನ ಕೊಂದ ಆಯಾಸದಿಂದಲೋ ॥ ॥೫॥

ಮಮತೆಯಿಂದಲಿ ಭಕ್ತ ಜನರು ನಿಮ್ಮ ಚರಣ
ಕಮಲಯುಗವನು ಸ್ತುತಿಸುತಿರಲು
ಮಮತೆಯಿಂದಲಿ ಬಂದು ಅಭಯಗಳನೆ ಕೊಟ್ಟು
ಕಮಲನಾಭ ಶ್ರೀ ಪುರಂದರ ವಿಠ್ಠಲ ಕಟಿಯಲ್ಲಿ ಕರವಿಟ್ಟನು ॥೬॥



**ಅರ್ಥ ವಿವರಣೆ :**

ಶ್ರೀ ಪುರಂದರದಾಸವರ್ಯರು ನಾದಬ್ರಹ್ಮನೆಂದು ಖ್ಯಾತನಾಮನಾದ ಪಾಂಡುರಂಗನ ಕ್ಷೇತ್ರವಾದ ಪಂಡರಾಪುರಕ್ಕೆ ಆಗಮಿಸಿದ್ದಾರೆ. ಸೊಂಟದ ಮೇಲೆ ಕೈಯಿಟ್ಟು ದಿಟ್ಟ ಭಾವಭಂಗಿಯ.ಲ್ಲಿ ನಿಂತಿರುವ ರಖುಮಾಸಮೇತ ಪಾಂಡುರಂಗನನ್ನು ಸಂದರ್ಶಿಸಿದ್ದಾರೆ, ಯಾದವಕುಲಲಲಾಮನಾದ ಶ್ರೀಕೃಷ್ಣನೇ ಪಾಂಡುರಂಗನು. ಭಕ್ತ ಪುಂಡಲೀಕನ ಭಕ್ತಿ ಭಾವಕ್ಕೆ ಮೆಚ್ಚಿ ಅವನು ಎಸೆದ ಇಟ್ಟಿಗೆಯ ಮೇಲೆ ನಿಂತಿದ್ದಾನೆ. ಸೊಂಟದಲ್ಲಿ ತನ್ನ ಎರಡು ಹಸ್ತಗಳನ್ನು ಇಟ್ಟಿದ್ದಾನೆ,

**ಕಟಿಯಲ್ಲಿ** = ಸೊಂಟದ ಮೇಲೆ, **ಕರವಿಟ್ಟನು** = ತನ್ನ ಕೈಯ್ಗಳನ್ನು ಇಟ್ಟುಕೊಂಡು ಇಟ್ಟಿಗೆಯು ಮೇಲೆ ನಿಂತಿದ್ದಾನೆ, **ಜಗದೀಶನು** = ಜಗತ್ತಿಗೇ ಒಡೆಯನಾದ ಜನಾರ್ದನನು.

**ರಾಜಸೂಯಯಾಗದಲ್ಲಿ** = ಧರ್ಮರಾಯನು ಶ್ರೀಕೃಷ್ಣನಿಗೆ ಅಗ್ರ ಪೂಜೆಯನ್ನು ಮಾಡಿ, ಸುಪ್ರಸಿದ್ಧ ರಾಜಸೂಯಯಾಗವನ್ನು ಮಾಡಿದನು, **ರಾಜೇಶ್ವರ** = ಸರ್ವ ರಾಜರಿಗೂ ಪ್ರಭುವಾದ ಸರ್ವೇಶನು, **ರಾಜೀವಾಕ್ಷನು** = ಕಮಲ ಪುಷ್ಪದ ದಳಗಳಂತೆ ವಿಶಾಲ ನೇತ್ರವುಳ್ಳ ಶ್ರೀಕೃಷ್ಣನ ಯಾಗಕ್ಕೆ ಬಂದಿದ್ದ ಸರ್ವರೂ ಭೋಜನಮಾಡಿದನಂತರ, ಅವರ ಎಂಜಲೆಲೆಗಳನ್ನು ತೆಗೆದನು. ಅದರಿಂದ ಉಂಟಾದ ಆಯಾಸದಿಂದ ಕಟಿಯಲ್ಲಿ ಕರವನ್ನಿಟ್ಟಿದ್ದಾನೇನೋ ಎಂದು ದಾಸರು ಉತ್ಪ್ರೇಕ್ಷೆ ಮಾಡಿದ್ದಾರೆ.

ಎನೆಯ ನುಡಿಯಲ್ಲಿ, ಶ್ರೀಕೃಷ್ಣನು ತನ್ನ ಬಾಲ್ಯದಲ್ಲಿ ಗೋಗೋಪಾಲರೊಡಗೂಡಿ, ಲೀಲಾವಿನೋದಗಳನ್ನು ತೋರಿಸುತ್ತಾ, ಗೊಲ್ಲತಿಯರ ಮನೆಗಳಲ್ಲಿ ಹಾಲು, ಮೊಸರು, ಬೆಣ್ಣೆ, ಮೆದ್ದು. ತೃಣಾವರ್ತ ಮೊದಲಾದ ಬಲಿಷ್ಠ ದೈತ್ಯರನ್ನು ಕೊಂದ ಆಯಾಸದಿಂದಲೋ ಕಟಿಯಲ್ಲಿ ಕರವಿಟ್ಟದ್ದಾನೆ ಎಂದು ಉದ್ಗಾರ

**ದನುಜ ಹಿರಣ್ಯಕನ** = ದೈತ್ಯನಾದ ಹಿರಣ್ಯಾಕ್ಷನನ್ನು, **ವಾರಿಜಮುಖಿ** = ಕಮಲ ಪುಷ್ಪದಂತೆ ದುಂಡಾದ ಸುಂದರವಾದ ವದನವುಳ್ಳ ಶ್ರೀ ಲಕ್ಷ್ಮೀದೇವಿಯು, **ಸುರತ** = ಭೋಗ

**ಸುರಪತನಯಗೆ** = ಇಂದ್ರನ ಪುತ್ರನಾದ ಅರ್ಜುನನಿಗೆ, **ಚಕ್ರಪಿಡಿದರಿಂದಲೋ** = ಭೀಷ್ಮಾಚಾರ್ಯರು ರಣರಂಗದಲ್ಲಿ ಅರ್ಜುನನನ್ನು ಬಾಣಗಳಿಂದ ಬಾಧಿಸಲಾಗಿ, ಕೋಪಗೊಂಡ ಶ್ರೀಕೃಷ್ಣನು ಚಕ್ರದನ್ನು ಧರಿಸಿ, ಮುನ್ನುಗಿದ ಪ್ರಸಂಗ

**ಕುದುರೆಗಳ ತೊಳೆದು** = ಪಾಂಡವರಲ್ಲಿ ಕುದುರೆಗಳನ್ನು (ರಥದ) ತೊಳೆದು, ಹುಲ್ಲು ಹಾಕಿದ ಆಯಾಸ, **ವ್ರಜದ** = ನಂದಗೋಕುಲದ, **ಮಧುರಾಂತಕನ** = ಮಧುರಾನಗರಾಧಿಪತಿ ಕಂಸಾಸುರ

## ೨

## (ಪುರಂದರ ವಿಠ್ಠಲಾಂಕಿತ)

**ರಾಗ–ಪೂರ್ವಿ** **ಅಟತಾಳ**

ಮುಯ್ಯಕ್ಕೆ ಮುಯ್ಯ ತೀರಿತು–ಜಗ
ದಯ್ಯ ವಿಜಯ್ಯಸಾಹಯ್ಯ ಪಂಢರಿರಾಯ ॥ ॥ಪ॥

ಸಣ್ಣವನೆಂದು ನಾ ನೀರು ತಾರೆಂದರೆ
ಬೆಣ್ಣೆಗಳ್ಳ ಕೃಷ್ಣ ಮರೆಯ ಮಾಡಿ
ಚಿನ್ನದ ಪಾತ್ರೆಯ ನೀರ ತಂದಿತ್ತರೆ
ಕಣ್ಣಕಾಣದೆ ನಾನು ಕೊಣೆದೆ ಪಂಢರಿರಾಯ ॥೧॥

ಎನ್ನಪೆಸರಪೇಳಿ ಸೂಳೆಗೆ ಕಂಕಣ
ವನ್ನು ನೀನು ಕೊಟ್ಟು ನಿಜವ ಮಾಡೆ
ಎನ್ನ ನೋಯಿಸಿ ಅಪರಾಧ ಭಂಡನಮಾಡಿ
ನಿನ್ನ ಮುಯ್ಯಕ್ಕೆ ಮುಯ್ಯ ತೋರಿದೆ–ಪಂಢರಿರಾಯ ॥೨॥

ಭಕ್ತವತ್ಸಲನೆಂಬ ಬಿರುದು ಬೇಕಾದರೆ
ಕಿತ್ತು ಈಡಾಡೊ ಇನ್ನೊಂದು ಕಂಕಣವ
ಮುಕ್ತಿಗೆ ನೀನಲ್ಲ ದಾರನು ಕಾಣೆನು
ಮುಕ್ತೀಶ ಪುರಂದರವಿಠ್ಠಲ–ಪಂಢರಿರಾಯ ॥ ॥೩॥

*

**ಅರ್ಥವಿವರಣೆ :**

**ಪ್ರಸಂಗ :** ಒಂದು ದಿನ ಬೆಳಗಿನ ಝಾವದಲ್ಲಿ ಎದ್ದ ಪುರಂದರದಾಸ ವರ್ಯರು, ತಾವು ಬಹಿರ್ದೇಶಕ್ಕೆ ಹೋಗಬೇಕಾಗಿದ್ದ ಕಾರಣದಿಂದ, ತಮ್ಮ ಶಿಷ್ಯರಲ್ಲಿ ಒಬ್ಬನಾಗಿದ್ದ ಅಪ್ಪಣ್ಣಭಾಗವತನನ್ನು ನೀರು ತಾರೆಂದು ಹೇಳಿ ಕಳು ಹಿಸಿದರು. ಅವನು ನಿದ್ರಾವಸ್ಥೆಯಲ್ಲಿದ್ದುದರಿಂದ, ಏಳಲೇ ಇಲ್ಲ. ಆಗ ಭಕ್ತವತ್ಸಲನಾದ ಪಾಂಡುರಂಗನೇ ಅಪ್ಪಣ್ಣನ ವೇಷದಿಂದ ನೀರನ್ನು ದಾಸರಿಗೆ ತಂದು ಕೊಟ್ಟನು. ತಡವಾಯಿತೆಂಬ ಕೋಪದಿಂದ ದಾಸರು ಆ ಗಿಂಡಿಯಿಂದ ಪಾಂಡುರಂಗನ ಹಣೆಗೆ ಹೊಡೆದರು.

ಬಹಿರ್ದೇಶ ಮುಗಿಸಿಕೊಂಡು ಬಂದು ನೋಡುತ್ತಾರೆ ! ಅಪ್ಪಣ್ಣ ಭಾಗವತನು ಇನ್ನೂ ಮಲಗಿಯೇ ಇದ್ದಾನೆ. ಪಶ್ಚಾತ್ತಾಪದಿಂದ ಅವನನ್ನು ಎಬ್ಬಿಸಿ, "ಕೋಪದಿಂದ ನಿನ್ನನ್ನು ನಾನು ಹಣೆಗೆ ಮೆಟ್ಟಿಸಿದೆ, ನನ್ನನ್ನು ಕ್ಷಮಿಸು"– ಎಂದು ಕೇಳಿದ್ದಾರೆ. ಅಪ್ಪಣ್ಣನಿಗೆ ಅತ್ಯಾಶ್ಚರ್ಯ. ತಾನು ನಿದ್ದೆ ಯಲ್ಲಿದ್ದೆನೆಂದೂ, ತಾನು ನೀರನ್ನು ತರಲಿಲ್ಲವೆಂದೂ ಹೇಳಿದ್ದಾನೆ. ಅದರ ಪರಿಣಾಮ ದಾಸರ ಮೇಲೆ ಅತ್ಯದ್ಭುತ! ಶ್ರೀಪಾಂಡುರಂಗನೇ ಅಪ್ಪಣ್ಣನ ವೇಷ ದಿಂದ ಬಂದಿದ್ದನೆಂಬ ವಿಷಯ ತಿಳಿಯಿತು. ಬೆಳಗ್ಗೆ ದೇವಸ್ಥಾನಕ್ಕೆ ಧಾವಿಸಿ ಬಂದರು. ಶ್ರೀಪಾಂಡುರಂಗನ ವಿಗ್ರಹದ ಹಣೆಯ ಮೇಲೆ ಬೇಡು ಬಂದಿದ್ರೆ ತಮ್ಮ ಅಪರಾಧಕ್ಕಾಗಿ ಅಂಗಲಾಚಿದರು ಆ ನಾದ ಬ್ರಹ್ಮನಲ್ಲಿ.

ಅದೇ ದಿನ ಪಾಂಡುರಂಗನು ಪುರಂದರದಾಸರ ವೇಷದಲ್ಲಿ ಪಂಢರಾ ಪುರದ ಪ್ರಸಿದ್ಧ ವೇಶ್ಯೆಯ ಮನೆಗೆ ಆಗಮಿಸಿದ್ದಾನೆ. ಆ ನರ್ತಕಿಯು ಆದರ ದಿಂದ ಬಂದ ಪಾಂಡರಂಗನನ್ನು ಸ್ವಾಗತಿಸಿದ್ದಾಳೆ. ರಾತ್ರಿ ಇಡೀ ಅವಳ ನರ್ತನ ನೋಡಿ. ಸಂಗೀತ ಸುಧೆಯನ್ನು ಸವಿದು, ವೇಷಧಾರಿ ಪಾಂಡುರಂಗನು ಚಿನ್ನದ ಕಂಕಣವನ್ನು ಪಾರಿತೋಷಕವಾಗಿ ನೀಡಿದ್ದಾನೆ.

ಮಾರನೆಯ ದಿನ ಅರ್ಚಕರು ನೋಡುತ್ತಾರೆ! ಪಾಂಡುರಂಗನ ಕೈಯಲ್ಲಿದ್ದ ಸುವರ್ಣ ಕಂಕಣ ಮಾಯವಾಗಿದೆ. ದೇವಸ್ಥಾನದ ಅಧಿಕಾರಿಗಳು ತನಿಖೆಗೆ

ಆರಂಭಿಸಿದ್ದಾರೆ. ಆ ಸಮಯಕ್ಕೆ ಅದೇ ನರ್ತಕಿಯು ದೇವಸ್ಥಾನಕ್ಕೆ ಬಂದು, ದೇವರ ದರ್ಶನಕ್ಕೆ ನಿಂತಿದ್ದಾಳೆ. ಅವಳ ಕೈಯಲ್ಲಿ ಕಂಕಣ. ಅಧಿಕಾರಿಗಳು ಅವಳನ್ನು ವಿಚಾರಿಸಿದರು. ನರ್ತಕಿಯು ನಡೆದ ವಿಷಯ ತಿಳಿಸಿದ್ದಾಳೆ. ಆ ಸಮಯದಲ್ಲಿ ಪುರಂದರದಾಸರು ಸ್ವಗೃಹದಲ್ಲಿ ಪತ್ನಿಪುತ್ರರೊಡನೆ ಕುಳಿತು ಶ್ರೀಹರಿನಾಮ ಸಂಕೀರ್ತನೆಯಲ್ಲಿ ತನ್ಮಯರಾಗಿದ್ದಾರೆ. ಅಧಿಕಾರಿಯು ದಾಸರನ್ನು ಕರೆತರಿಸಿ, ದೇವಸ್ಥಾನದ ಕಂಬಕ್ಕೆ ಕಟ್ಟಿ, ಪ್ರಹರಿಸಿದ್ದಾರೆ. ಆಗ ದಾಸರ ಬಾಯಿಂದ ಹೊರಟ ಕೀರ್ತನ ಸಾಹಿತ್ಯವಿದು. "ಎಲೈ ಪಾಂಡುರಂಗ, ನಾನು ಮಾಡಿದ ಅಪರಾಧಕ್ಕೆ ಮುಯ್ಯಿ ತೀರಿಸಿಕೊಂಡೆಯಾ ಪ್ರಭುವೇ" ಎಂದು ಮೊರೆ ಇಟ್ಟಿದ್ದಾರೆ.

**ಮುಯ್ಯಿ** = ಅಪರಾಧಕ್ಕೆ ಪ್ರತೀಕಾರ, **ಜಗದಯ್ಯ** = ಜಗತ್ತಿಗೇ ಪ್ರಭುವಾದ ಶ್ರೀ ಪರಮಾತ್ಮ, **ವಿಜಯ ಸಾಹಯ್ಯ** = ಪಾರ್ಥಸಖ (ವಿಜಯ–ಅರ್ಜುನ), **ಸಣ್ಣವನೆಂದು** = ತಮ್ಮ ಶಿಷ್ಯನಾದ ಅಪ್ಪಣ್ಣ ಭಾಗವತನಿಗೆ, **ಮರೆಯಮಾಡಿ** = ಶಿಷ್ಯನ ವೇಷಧಾರಿಯಾಗಿ. **ಕಣ್ಣು ಕಾಣದೆ** = ಬೆಳಗಿನ ಝಾವದಲ್ಲಿ ಪಾಂಡುರಂಗನನ್ನೇ ಶಿಷ್ಯನೆಂದು ಭಾವಿಸಿ **ಕೊಣೆದೆ** = ಹಣೆಯ ಮೇಲೆ ಗಿಂಡಿಯಿಂದ ಹೊಡೆದೆ.

**ಎನ್ನ ಹೆಸರ ಪೇಳಿ** = ಪುರಂದರದಾಸರೇ ನಾನೆಂದು ಹೇಳಿ, **ಕಂಕಣ** = ಪಾಂಡುರಂಗನ ಕೈಯಿನ ಸುವರ್ಣ ಕಂಕಣ, **ಅಪರಾಧ ಭಂಧನ ಮಾಡಿ** = ದೇವಸ್ಥಾನನ ಅಧಿಕಾರಿಗಳು ದಾಸರೇ ಅಪರಾಧಿ ಎಂದು ರುಜುವಾತು ಪಡಿಸಲಾಗಿ, **ಕಿತ್ತು ಈಡಾಡೋ ಇನ್ನೊಂದು ಕಂಕಣವ** = ಸಂಸಾರವೆಂಬ ಕಟ್ಟು (ಶ್ರೀಹರಿ ಜೀವರಿಗೆ ಲಿಂಗೋಪದಾನ ದ್ವಾರ ಮಾಡಿರುವ ಈ ಕರ್ಮ ಬಂಧನ ರೂಪವಾದ ಕಂಕಣ) ಇದನ್ನು ಬಿಡಿಸೆಂದು ಪ್ರಾರ್ಥಿಸಿದ್ದಾರೆ ಆ ಕರ್ಮ ವಿಮೋಚಕನಲ್ಲಿ, **ಮುಕ್ತಿಗೆ** = ಮುಕ್ತಿಪ್ರದನು ನೀನಲ್ಲದೆ ಇತರ್ಯಾರನ್ನು ನಾ ಕಾಣೆ, **ಮುಕ್ತೇಶ** = ಮುಕ್ತರಿಗೆ ಪ್ರಭುವಾದ ಮುಕುಂದ ನಾಮಕ ಶ್ರೀ ಪರಮಾತ್ಮ.

★

# ಪದ್ಯ ೩

## (ವಿಜಯವಿಠ್ಠಲಾಂಕಿತ)

ರಾಗ– ತೋಡಿ ಆದಿತಾಳ

ವಿಠ್ಠಲ ವಿಮಲ ಶೀಲ– ಬಾಲಗೋಪಾಲ
ದಿಟ್ಟ ಮಾರುತಿ ಶ್ರೀಲೋಲ ॥ ॥ಪ॥

ಅಟ್ಟುವ ಖಳರೆದೆ ಕುಟ್ಟಿ ಕೆಡಹಿ ಮತಿ
ಗೊಟ್ಟು ಸಲಹೊ ಜಗಜಟ್ಟಿ ಪಂಢರಿರಾಯ ॥ ॥ಅ॥

ಯದುವಂಶೋದ್ಭವ ಕೇಶವ– ಹೇ ಏಕಮೇವ
ಮಧುವೈರಿ ಮಹಾವೈಭವ
ಸದಮಲಾನಂದ ಸ್ವಭಾವ– ಮತ್ಕುಲದೈವ
ಹೃದಯಾಬ್ಜ ಇನ ಭಾಂಧವ ॥

ವಿಧಿನದಿಪಿತ ನಾರದಮುನಿ ಸನ್ನುತ
ಕದನ ಕರ್ಕಶವೈರಿ ಸದಮಲಗಾತುರ
ಪದೆಪದೆಗೆ ಸಂಪದವಿಯ ಬಯಸುವ
ಮೃದು ಮನದೊಳು ನಿಲ್ಲು ಪದುಮಿನಿ ವಲ್ಲಭ ॥ ॥೧॥

ಶ್ರುತಿಪರ ದೇವ ಪ್ರಾರ್ಥಿವ– ನಿತ್ಯಪ್ರಭಾವ
ಪತಿತಪಾವನ ಸುರಜೀವ
ಅತಿಶಯ ಲೀಲಾಮಾನವ ನರಕಂಠೀರವ
ಚ್ಯುತಿದೂರಾನಾದಿ ಗುರುಗೋಪ ॥

ರತಿಪತಿಪಿತ ಶತಕ್ರತುಸುತ ಸಾರಥಿ
ತುತಿಸುವೆ ಗತಿಪಥಹಿತನಾಗಿ ತೋರೊ ವಾ–

ಝಿತಮಾತ ಶ್ರಿತಜನ ಚತುರರ ಸತತ ಸಂ-
ಗತಿಕೊಡು ಮುಕುತಿಗೆ ದಿತಿಸುತಮಥನ ॥ ॥೨॥

ಶರಣು ಶರಣು ಸರ್ವೇಶ- ಇಟ್ಟಿಗೆವಾಸ
ದುರುಳರ ಸಂಗವಿನಾಶ
ಪರಮಪುರುಷ ವಿಲಾಸ- ನಿರವಕಾಶ
ವರಪ್ರದ ಪೂರ್ಣಪ್ರಕಾಶ

ಮೊರೆಹೊಕ್ಕೆನೊ ನಿನ್ನ ಚರಣಸರಸಿಜವ
ಹರಿಯನ್ನೊಳಗಿಪ್ಪ ಮರವೆ ಕಳೆದು ನಿನ್ನ
ಸ್ಮರಣೆಮಾಡುವಂತೆ ಕರುಣದಿಂದಲಿ ನೋಡು
ಧೊರೆ **ವಿಜಯವಿಠ್ಠಲ** ಪುರಂದರ ಪ್ರಿಯ ॥೩॥

ಭೃಗ್ವಂಶ ಸಂಭೂತರಾದ **ಶ್ರೀ ವಿಜಯ ದಾಸವರೇಣ್ಯರು** ನಾದ ಬ್ರಹ್ಮನೆಂದು ಜಗತ್ಪ್ರಸಿದ್ಧನಾದ **ಶ್ರೀಪಾಂಡುರಂಗನ** ಕ್ಷೇತ್ರವಾದ ಪಂಢರಾಪುರಕ್ಕೆ ಬಂದಿದ್ದಾರೆ. ರಖುಮಾ ಸಹಿತನಾದ ಆದರೂ ರಮಣನನ್ನು ನೋಡಿ, ಆನಂದತುಂದಿಲರಾಗಿ, ನರ್ತನಮಾಡುತ್ತಾ, ಭಕ್ತಿಯ ಉದ್ರೇಕದಿಂದ **ಹೊರಹೊಮ್ಮಿದ** ಕೀರ್ತನ ಸಾಹಿತ್ಯವಿದು.

**ವಿಠ್ಠಲ**=ಪ್ರತಿಹರಿದಾಸರ ಅಂಕಿತನಾಮ ಪ್ರತೀಕ. ಪಾಪಹರನಾದ ಜ್ಞಾನಪ್ರದನಾದ ಭಗವನ್ಮೂರ್ತಿ. **ವಿಮಲ**=ನಿರ್ದೋಷ ವಸ್ತು. **ದಿಟ್ಟ ಮೂರುತಿ**= ವೈಭವದಿಂದ ಮೆರೆಯುವ ನಿತ್ಯಮಂಗಳ ವಿಗ್ರಹ. **ಶ್ರೀ ಲೋಲ**=ರಮಾರಮಣನು.

**ಅಟ್ಟುವ**=ಹಿಂಸಕರಾದ (ಲೋಕಕಂಟಕರಾದ) **ಕುಟ್ಟಿಕೆಡಹಿ**= ದೈತ್ಯರ ಎದೆಯನ್ನು ಸೀಳಿ ಸಂಹರಿಸುವ, **ಮತಿಗೊಟ್ಟು**= ನಿನ್ನಲ್ಲಿ ಸಮೀಚೀನವಾದ ಮನಸ್ಸನ್ನು ನೀಡಿ, **ಜಗಜಟ್ಟಿ**= ಜಗತ್ತಿನಲ್ಲೆಲ್ಲಾ ಅತ್ಯಂತ

ಪರಾಕ್ರಮಶಾಲಿ (ಸತ್ಯ ಸಮರ್ಥ ಶಕ್ತ) **ಪಂಢರಿರಾಯ** = ಪಂಢರಾಪುರ ಕ್ಷೇತ್ರನಿವಾಸಿ ಶ್ರೀಪಾಂಡುರಂಗ ಮೂರ್ತಿ.

**ಯದುವಂಶೋದ್ಭವ** = ಯದುಕುಲದಲ್ಲಿ ಅವತಾರಮಾಡಿದ ಶ್ರೀ ಕೃಷ್ಣ. **ಏಕಮೇವ** = ಅವನೊಬ್ಬನೇ ಸರ್ವೋತ್ತಮ, ಸಮಾಭ್ಯಧಿಕಶೂನ್ಯ (ಏಕಮೇವ ಅದ್ವಿತೀಯ) **ಮಧುವೈರಿ** = ಮಧುದೈತ್ಯನ ಸಂಹಾರಿ, **ಸದಮಲಾನಂದ ಸ್ವಭಾವ** = ಆತನ ಸ್ವರೂಪವೇ ಅತ್ಯಂತ ಶುದ್ಧವಾದ (ದೋಷರಹಿತವಾದ) ಪೂರ್ಣಾನಂದದಿಂದ ಕೂಡಿದ್ದು (ಆನಂದಮಯ ಸ್ವರೂಪಿ) **ಮತ್ಕುಲದೈವ** = ಹರಿದಾಸಕುಲಕ್ಕೆ ಅಧಿದೇವತೆ– ಶ್ರೀವಿಠ್ಠಲ ಮೂರ್ತಿ. **ಹೃದಯಾಬ್ಜ ಇನ ಬಾಂಧವ** = ಹೃತ್ಕಮಲಕ್ಕೆ ಸೂರ್ಯ ಸದೃಶನು (ಹೃದಯ ಅಬ್ಜ = ಹೃತ್ಪದ್ಮ, ಇನ = ಸೂರ್ಯ ಭಾಂಧವ = ಆಪ್ತಬಂಧು, ಬಿಂಬರೂಪೀ) **ವಿಧಿ ನದಿಪಿತ** = ಬ್ರಹ್ಮ, ಗಂಗಾಪಿತನು. **ಕದನ ಕರ್ಕಶ ವೈರಿ** = ಕಾಳಗದಲ್ಲಿ ಅತಿಕ್ರೂರರಾದ ದೈತ್ಯರ ಶತ್ರು, (ದೈತ್ಯಾರಿ) **ಸದಮಲ** = ಸದಾಕಲ್ಯಾಣಗುಣಗಣ ಪರಿಪೂರ್ಣ ವಸ್ತು. **ಆತುರ ಪದೆ ಪದೆಗೆ** = ಅತ್ಯಂತ ಉತ್ಸಾಹದಿಂದ ಬಾರಿಬಾರಿಗೆ ದೈವೀ ಸಂಪತ್ತನ್ನು (ಸಂಪದವಿಯ) ಅಪೇಕ್ಷಿಸುತ ಭಕ್ತರ ಪಾಲಿಗೆ **ಮೃದು** = ಅತ್ಯಂತ ವಾತ್ಸಲ್ಯಮಯನು (ಮೃದು ಹೃದಯೀ) **ಪದುಮಿನಿವಲ್ಲಭ** = ಪದ್ಮಾವತೀಪತಿಯಾದ ಶ್ರೀನಿವಾಸ.

**ಪ್ರಾರ್ಥಿವ** = ಭಕ್ತರಿಂದ ಸಂಸ್ತುತ್ಯಮಾನನಾದ, **ನಿತ್ಯ ಪ್ರಭಾವ** = ಸದಾಸರ್ವಕಾರ್ಯಗಳಲ್ಲಿಯೂ ಪ್ರಭಾವಶಾಲಿಯಾದ ಬಿಂಬಮೂರ್ತಿ. **ಪತಿತ ಪಾವನ** = ದೀನರನ್ನು ಪವಿತ್ರೀಕರಿಸುವ ಪಾವನ ವಿಗ್ರಹನು. **ಸುರಜೀವ** = ದೇವತೆಗಳಿಗೆ ಪ್ರಾಣನು. **ಅತಿಶಯ ಲೀಲಾಮಾನವ** = ಲೀಲಾಮಾನುಷ ವಿಗ್ರಹನು. ಮಾನವರಂತೆ ನಟಿಸುವ ಲೀಲಾವಿನೋದಿಯು **ನರಕಂಠೀ ರವ** = ನರಸಿಂಹರೂಪೀ **ಚ್ಯುತಿದೂರ** = ಚತುರ್ವಿದ ನಾಶರಹಿತನಾದ ನಿತ್ಯಶಾಶ್ವತನು (ಶಶ್ವದೇಕ ಪ್ರಕಾರನು) **ಅನಾದಿ** = ಅನಾದಿನಿತ್ಯನು, **ಗುರುಗೋಪ** = ಜಗದಾದಿಗುರುವು. **ರತಿಪತಿಪಿತ** = ರತಿಯಪತಿಯಾದ

ಮನ್ಮಥನ ತಂದೆ ಶ್ರೀಹರಿ, **ಶತಕ್ರತು ಸುತಸಾರಥಿ** = ಶತಕ್ರತುವಾದ ಇಂದ್ರ ದೇವರ ಪುತ್ರನಾದ ಅರ್ಜುನನಿಗೆ ಸಾರಥಿಯಾದ ಶ್ರೀಕೃಷ್ಣ, **ಗತಿಪಥಹಿತ ನಾಗಿ** = ಅತ್ಯಂತ ಪ್ರಸಾದ ರೂಪವಾದ ಮುಕ್ತಿ ಮಾರ್ಗಕ್ಕೆ (ಗತಿಪಥ) ಅನುಗ್ರಹ ಮಾಡುವ. (ಶ್ರೀಹರಿಯ ಪ್ರಸಾದದಿಂದಲೇ ಮುಕ್ತಿ ಪ್ರಾಪ್ತಿ), **ಮಾರುತ ಮತಾಶ್ರಿತ** = ಶ್ರೀ ವಾಯುದೇವರ ತೃತೀಯಾವತಾರ ಭೂತವಾದ ಶ್ರೀ ಗುರು ಮಧ್ವರ ಮತಾನುಯಾಯಿಗಳಾದ ಸಜ್ಜನರಾದ, **ಚತುರರ** = ಜ್ಞಾನಿಗಳ, **ಸತತ ಸಂಗತಿ ಕೊಡು** = ನಿರಂತರವೂ ಅವರ ಸತ್ಸಂಗವನ್ನು ನೀಡು, **ದಿತಿಸುತಮಥನ** = ದಿತಿಯಮಕ್ಕಳಾದ ದೈತ್ಯರ ಸಂಹಾರಿ.

**ಸರ್ವೇಶ** = ಸರ್ವರಿಗೂ ಮುಖ್ಯ ನಿಯಾಮಕನೂ, **ಇಟ್ಟಿಗೆವಾಸ** = ಭಕ್ತ ಪುಂಡರೀಕನು ಎಸೆದ ಇಟ್ಟಿಗೆಯ ಮೇಲೆ ಈಗಲೂ ನಿಂತಿದ್ದಾನೆ. ಆ ಸ್ವಯಂವ್ಯಕ್ತ ಪಾಂಡುರಂಗವಿಠ್ಠಲನು (ಇಟ್ಟಿಗೆ ಇಂದ್ರ ಮತ್ತು ಕಾಮರು ಪಾಂಡುರಂಗನ ಪೀಠವಾದ ಇಟ್ಟಿಗೆಯ ರೂಪದಲ್ಲಿದ್ದಾರೆ), **ನಿರವಕಾಶ** = ಅವಕಾಶವಿಲ್ಲದಂತೆ ಸರ್ವತ್ರ ಪರಿಪೂರ್ಣ ವ್ಯಾಪ್ತನಾದವನು, **ವರಪ್ರದ** = ಭಕ್ತರಾಭೀಷ್ಟೆಗಳನ್ನು ಕೊಡುವವನು, **ಪೂರ್ಣಪ್ರಕಾಶ** = ಅನಂತಕೋಟಿ ಸೂರ್ಯಕಾಂತಿಯುಕ್ತನಾದ ಸ್ವಯಂ ಜ್ಯೋತಿ ಸ್ವರೂಪನು, **ಮರಸೆ** = ಎನ್ನಲ್ಲಿರುವ ಅಜ್ಞಾನ, **ಪುರಂದರ ಪ್ರಿಯ** = ನನ್ನ ಗುರುಗಳಾದ ಶ್ರೀ ಪುರಂದರ ದಾಸವರ್ಯರಿಗೆ ಅತ್ಯಂತ ಪ್ರಿಯನಾದವನು ನೀನು ಎಂದಿದ್ದಾರೆ ಪುರಂದರ ಶಿಷ್ಯೋತ್ತಮರಾದ **ಶ್ರೀವಿಜಯದಾಸವರೇಣ್ಯರು.**



೪

## (ಗೋಪಾಲವಿಠ್ಠಲಾಂಕಿತ) (ಸುಳಾದಿ)

### ॥ ಧ್ರುವತಾಳ ॥

ನೀಲಕುದುರೆಯನೇರಿ ಶಾಲು ಟೊಂಕಕೆ ಸುತ್ತಿ
ಕಾಲು ಕುಪ್ಪುಸ ತೊಟ್ಟು ಮೇಲೆ ಮೋಹನ್ನ ಹಾಕಿ
ಓಲ್ಯಾಡಿಸುತ್ತ ಒಂಟಿ ಢಾಳಾಗಿ ಶೋಭಿಸಲು
ಸಾಲು ಬೆರಳುಂಗುರ ಕೈಲಿ ಖಡ್ಗವ ಪಿಡಿದು
ತೋಳುತಾಯಿತ ಶಿರಕೆ ಮೇಲಾದ ವಸ್ತ್ರಸುತ್ತಿ
ಫಾಲಕಸ್ತೂರಿನಿಟ್ಟು ಮೈಲಿ ಗಂಧವ ಪೂಸಿ
ಪಾಲಾಯನದಿ ಅಶ್ವವೇರಿ ಓಲ್ಯಾಡಿಸುತ್ತ
"ಅಲೇನಾಹಿ"–ಎಂದು ಕೇಳಿದವನಾರವ್ವ
ವೇಳೆಸಾಲದ್ಹೋಯಿತು ಕೇಳುವುದಕ್ಕೆನಗೆ
ಹೇಳುವುದಕ್ಕೆ ವಚನಗದ್ಗದದಿ
ಏಳದು ವಚನ ಉಚ್ಚರಿಸುವೆನೆನಲು
ಆಲೋಚನೆಗೆ ಅತಿವಿಚಿತ್ರವು
ಕೇಳಿಲ್ಲ ಕಂಡಿಲ್ಲ ಇಂಥ ಪುರುಷನ್ನ ಎಂದೆಂದೂ
ಕುಳಗತ್ತಲು ಅಲ್ಲ ಅತ್ತ ನೋಡಲು ಹಗಲು
ಕೇಳು ತಗ್ಗುವಿಟ್ಟೆ ಮೇಲೆ ಮುಂಜೇರವಲ್ಲ
ಹೇಳಲೇನಿದು ಒಂದು ಸೋಜಿಗವು ಕಾಲು
ಏಳವು ಮುಂದೆ ನಡೆಯಲು ಎನಗಿನ್ನು
ಆಲೋಚನೆಯಿಲ್ಲ ಅತ್ತಲಾಗಿ ಎನ್ನ
ಕೇಳಿದನಲ್ಲೆ ಆರೆಮಾತಿಸಿಂದಲಿ ಎನ್ನ
ಹೇಳುವ ಪುರುಷನು ಆವನಾಗುವನು
ಆಲೋಚನೆಗೆ ಎನಗೆ ತೋರುತಲಿದೆ ತುಲಸಿ

ಮಾಲೆ ಪರಿಮಳಗಂಧ ಕುರುಹದಿಂದ
ಶೀಲಮೂರುತಿ ಪಂಢರಿರಾಯ ಗೋಪಾಲವಿಠ್ಠಲ
ಓಲ್ಯಾಡಿ ಕೊದೂರೆ ಓಲ್ಯಾಡಿಸುತ್ತ ಪೋದನಲ್ಲೇ ॥ ॥೧॥

॥ ಮಠ್ಯತಾಳ ॥

ಕಂಡಿರ್‍ಯಾ ಕಂಡಿರಾಖಂಡ ವ್ಯಾಪ್ತನೀತ
ಕಂಡಿರ್‍ಯಾ ಕಂಡಿರ್‍ಯಾ ಬೊಮ್ಮಾಂಡದೊಡೆಯನ
ಕಂಡಿರ್‍ಯಾ ಕಂಡಿರ್‍ಯಾ ಅಜಭವಾದಿಗಳ
ತೊಂಡರಮಾಡಿ ಬಿಡದೆಖಂಡ ಪೊರೆವನ
ಕಂಡಿರ್‍ಯಾ ಕಂಡಿರ್‍ಯಾ ಸರ್ವಜೀವರ ಪಶು
ಹಿಂಡುಮಾಡಿ ಬಿಡದೆ ಕಾಯ್ವ ಗೋಪಾಲನ
ಕಂಡಿರ್‍ಯಾ ಕಂಡಿರ್‍ಯಾ ಮಣಿಮೌಳಿಮಲ್ಲಿಗೆ ದಂಡೆ
ಮಂಡೆಯು ಶೋಭಿಸೆ ಮುದ್ದು ಮೊಗದೆ ಚೆಲುವ
ಪುಂಡರೀಕದಳನಯನ ಕಸ್ತೂರಿತಿಲಕ
ಕುಂಡಲಕರ್ಣ ಕಪೋಲ ತತ್ತಳಿಸುತ್ತ
ಪುಂಡರೀಕ ತುಲಸಿ ದಂಡೆಯು ಕೊರಳೊಳುಲಿಯ
ಚೆಂಡು ಬುಗುರಿ ಚಿಣ್ಣಿ ಕೋಲುಗಳಾಡುತ್ತ
ಪುಂಢರೀಕನ ಭಕುತಿಗೊಲಿದು ಬಂದು ನಿಂದ
ಪಂಢರಿಕಪುರಿರೇಯ ಗೋಪಾಲವಿಠ್ಠಲನ್ನ
ಕಂಡಿರ್‍ಯಾ ಕಂಡಿರ್‍ಯಾ ಕಪಟನಾಟಕ ಹರಿಯ ॥ ॥೨॥

॥ ರೂಪಕ ತಾಳ ॥

ಆವರೂಪದಲ್ಲಿ ಗೋವು ಕಾಯಿದ ರೂಪ
ಆವ ಈ ರೂಪವೇ ಮತ್ಸ್ಯಾದಿರೂಪವು
ಆವ ಈ ರೂಪವೇ ಆತ್ಮಾದಿರೂಪವು
ಆವ ಈ ರೂಪವೇ ಅನಂತಾತ್ಮಕ

ಶ್ರೀವಿಷ್ಣುರೂಪವು ಮಂತ್ರಿಪನೆ ಸಾಕ್ಷಾತ್ ನೋಡು
ಈ ವಿಧ ರೂಪವು ಅನಂತಾನಂತವಿರಲು
ಆವ ರಾಹುತನಂತೆ ಅಶ್ವವೇರಿ ಎನ್ನ
ಈ ವಿಧದಲ್ಲಿ ಕಾವಳಗೊಳಿಸಿದುದು ಏನೋ
ನಾ ಒಂದರಿತವನಲ್ಲ ನಿನ್ನ ಲೀಲೆ
ಆವ ಬಗೆಯೋ ನಾನರಿಯೆ ಈ ವಿಧ ತೋರಿದ್ದು
ಸೇವಕಸ್ಥಿತಿ ನೀನೆ ಬಲ್ಲೆಯೋ
ಗೋವರ್ಧನೋದ್ಧಾರ ಗೋಪಾಲವಿಠ್ಠಲ
ದೇವ ಪಂಢರಿರಾಯ ಶ್ರೀವಿಜಯದಾಸರ ಪ್ರಿಯ ॥ ॥೩॥

|| ರೂಪಕ ತಾಳ ||

ನೋಡದಂತೆನ್ನನು ನೋಡುತ್ತಿದ್ದರೆ ಕೊನೆಗೆ
ಮಾಡಿಕೊಂಬೆ ಮನಕೆ ಆವನಾದನೆಂದು
ನೋಡಿದಾಕ್ಷಣದಲ್ಲಿ ಕಾಣದ್ಹೋದುದರಿಂದ
ನೋಡಬೇಕಾಯಿತು ಆವಾವನೋ ಎಂದು
ನೋಡಾ ನೋಡಾ ಅದೃಶ್ಯನಾದಕಾರಣ ಮನಕೆ
ನೋಡು ಎಂತಿಪ್ಪುದು ನೋಡುವವರಿಗೆ
ಆಡುವ ಮಾತಿಲ್ಲ ಕಂಡುಕಂಡಂತಿನ್ನು
ನೋಡಬಾರದೆ ಒಂದು ಘಳಿಗೆ ನಿಂತು
ನೋಡಿದಾಕ್ಷಣ ನಿಂದು ಬೇಡುವುದಿನ್ನೇನು
ನೋಡೋ ಯೋಗ್ಯತೆಯನರಿತು ನೋಡು ಧೊರೆಯು
ಆಡಿದ್ದೆಲ್ಲ ಬರಲಿ ಇಲ್ಲವೆಂದು ಎನ್ನ
ನೋಡು ಆವ ಸ್ಥಳಕೆ ಬರಲಿ ನಾನು
ನೋಡು ತಿಳಿಯದು ಸ್ವಾಮಿ ಗೋಪಾಲವಿಠ್ಠಲ
ನೋಡು ಪಂಢರಿರಾಯ ಮಾಡುದಯವ ॥ ॥೪॥

|| ತ್ರಿಪುಟ ತಾಳ ||

ಆವದೇಶಕೆ ಬರಲಿ ಆವ ಕ್ಷೇತ್ರವ ನೋಡಲಿ
ಆವ ಸಂಗವು ಬಿಡಲಿ ಆವ ಪಿಡಿಯಲಿ ಸಂಗ
ಆವ ವ್ರತಗಳನು ಮಾಡಲಿ ಆವ ಶ್ರವಣವ ಕೇಳಲಿ
ಆವ ಧೈರ್ಯವು ಇರಲಿ ಆವುದಾವುದು ತಿಳಿಯಲಿ
ಆವಸಾಧನ ಮಾಡಲಿ ಆವುದಾವುದು ಕೂಡಲಿ
ಆವುದಾವುದು ಉಣಲಿ ಆವುದಾವುದು ಹೊದೆಯಲಿ
ಆವುದಾವುದು ನೋಡಲಿ ಆವುದಾವುದು ಬಿಡಲಿ
ಆವುದಾವುದು ತಡೆಯಲಿ ಆವುದಾವುದು ಜಡಿಯಲಿ
ಆವುದಾವುದರ್ಚಿಸಲಿ ಆವುದಾವುದು ಕೇಳಲಿ
ಆವುದಾವುದು ನುಡಿಯಲಿ ಆವುದಾವುದು ಜಪಿಸಲಿ
ದೇವನೀನಲ್ಲದಿಲ್ಲ ಇದರೊಳಗೊಂದು
ಆವಲ್ಲಿಗೋ ನಾನರಿಯೋ ಬರಹೇಳಿದ್ದು ಎನ್ನ
ಪಾಪನ್ನಮಾಳ್ಪ ಶಕ್ತ ನೀನೆ ಎನ್ನ
ಆವಲಿದ್ದರು ಎನಗೆ ಅನುಭೋಗ ಈಗಲೆ
ಕಾವಲಿ ಬಹು ಇರಲಿ
ಕಾಕುಜನರಿಂದ ಬಂದ ಸೊಲ್ಲಿಗೆ ಮನ ಒ-
ಲಿದು ವಶವ ಮಾಡಲಿಬ್ಯಾಡ
ನಾನೊಬ್ಬನೇ ಅಲ್ಲ ನಿನ್ನಪೊಂದಿನಡೆವ ಸಿ-
ರಿ ವಿಜಯರಾಯರ ಸಹವಾಸದಲಿಪ್ಪ
ಜೀವರುಗಳಿಗೆ ನೋವುಯೆಂಬುದು ಬ್ಯಾಡ
ದೇವ ಪಂಢರಿರಾಯ ಗೋಪಾಲವಿಠ್ಠಲ
ನೀ ಒಲಿದುದಕ್ಕಿಂತ ಈ ವರವ ನೀಡು || ||೫||

## ಅಟ್ಟ ತಾಳ ||

ಶರಣು ಗೋವಳರಾಯ ಶರಣು ನಿರ್ಜಿತಮಾಯ
ಶರಣು ಮುಕ್ತಾಶ್ರಯ ಶರಣಾನಂದಮಯ
ಶರಣು ದೋಷವಿದೂರ ಶರಣು ನಿರ್ವಿಕಾರ
ಶರಣು ಭಕ್ತರ ಪಾಲ ಶರಣು ಲೀಲಾವತಾರ
ಶರಣು ಅವ್ಯಕ್ತಕಾಯ ಶರಣು ಅಪ್ರಾಕೃತಕಾಯ
ಶರಣು ಜ್ಞಾನಪೂರ್ಣ ಶರಣು ಮೂಲಕಾರಣ
ಶರಣು ಅಖಂಡೇಶ ಶರಣು ಅನಾದಿದೇವ
ಶರಣು ನಿತ್ಯತೃಪ್ತ ಶರಣು ನಿರಂಜನ
ಶರಣು ಅಘಟಿತಘಟಿತಾನಂತ ಐಶ್ವರ್ಯ
ಶರಣು ಅಗಮ್ಯ ಅಲೌಕಿಕ ಐಶ್ವರ್ಯ
ಶರಣು ಮಹಾಪ್ರಭೋ ಹೇ ರಾಜಾಧಿರಾಜಾ
ಶರಣು ಅಯ್ಯಾ ಅಯ್ಯಾ ಪೂತುರೆ ಪೂತುರೆ
ಶರಣು ಶರಣು ಸಿರಿ ಅಜಭವಾದಿಗಳೀಶಾ
ಶರಣು ಪಂಢರಿರಾಯಾ ಗೋಪಾಲವಿಠ್ಠಲಾ
ಶರಣು ಶರಣು ನಿನ್ನ ಪರಿವಾರ ಸಹ ನಿತ್ಯ ||

## ಆದಿತಾಳ

ಮಾನಿಸ ರೂಪದಿ ಮಹಿಮೆಯ ತೋರ್ಪನೆ
ಮಾನಿಸ ರೂಪದಿ ಮನೆಮನ ಪೊಕ್ಕನೆ
ಮಾನಿಸ ರೂಪದಿ ಮಣ್ಣನೆ ಮೆದ್ದನೆ
ಮಾನಿಸ ರೂಪದಿ ಮುನಿಮುಖ ಶೆಳೆವನೆ
ಮಾನಿಸ ರೂಪದಿ ಮಾನಿನಿಗೊಲಿದನೆ
ಮಾನಿಸ ರೂಪದಿ ದನುಜರ ಕೊಂದನೆ
ಮಾನಿಸ ರೂಪದಿ ಧನುವನು ಮುರಿದನೆ

ಮಾನಿಸ ದೃಷ್ಟಿಗೆ ಮಾನುಷ್ಯನಂತೆ ಈ
ಮಾನುಷ್ಯ ಮಹಿಮನೆ ಮರೆಮೋಸಮಾಡೋದು
ಮಾನಿತವೇನಯ್ಯಾ ಮಾನವಂತನೆ ಹೀಗೆ
ಮಾನಿಸಾನ್ನವನುಂಬ ಮನುಜನಾದುದರಿಂದ
ಮಾನುಶ್ಯನಂತೆ ನಿನ್ನ ಮನದಿ ನಿಶ್ಚಯಿಸಿದೇ
ಮಾನಸಗುಣಾಂಬುಧಿ ಗೋಪಾಲವಿಠ್ಠಲ
ಮಾನಸಾವಾಚಾ ಕಾಯಾ ಮೊರೆಹೊಕ್ಕೆ ಮನ ನೀಡು ॥

ಜತೆ

ಎಲ್ಲಿ ನೋಡಲೂ ಮತ್ತಲ್ಲಿ ನೀನಿರೆ ಬರ
ಲಿಲ್ಲ ವೆಂಬುದೇನೋ ಗೋಪಾಲ ವಿಠಲಾ ॥

**ಅರ್ಥವಿವರಣೆ :**

ಒಮ್ಮೆ ಶ್ರೀಗೋಪಾಲದಾಸರು ಉತ್ತನೂರಿನಲ್ಲಿ ಪ್ರಾತರ್ವಿಧಿಗಳನ್ನು ಮುಗಿಸಿ ಶ್ರೀಹರಿಯ ಪೂಜೆಗೆಂದು ಹೂವು ತುಲಸಿಗಳನ್ನು ಸಂಗ್ರಹಿಸಲು ತೆರಳಿದ್ದಾರೆ. ಸ್ವಲ್ಪ ದೂರ ಸಾಗಿದ್ದಾರೆ. ಇದ್ದಕ್ಕಿಂದಂತೆಯೇ ಕುದುರೆಯ ಖುರಪುಟ ಧ್ವನಿ ಕೇಳಿಸಿತು. ಅದೇನೆಂದು, ಹಿಂತಿರುಗಿ ನೋಡಿದ್ದಾರೆ ದಾಸರಾಯರು ! ಎದ್ದ ಕೆಂಧೂಳಿ ಮುಗಿಲು ಮುಗಿಲಾಗಿ ಆಕಾಶವನ್ನು ಆಡರುತ್ತಿದೆ. ಆಗ ಓರ್ವ ರಾಹುತನು ನೀಲಿವರ್ಣದ ಕುದುರೆಯನ್ನೇರಿ ಧಾವಿಸಿ ಬರುತ್ತಿದ್ದಾನೆ. ದಾಸರ ಸಮೀಪಕ್ಕೆ ಬಂದವನೇ ಆ ರಾಹುತ **"ಆಲೇನಾಹಿ"** – **"ಬರುವುದಿಲ್ಲವೇನು?"** – ಎಂದು ಮರಾಠೀ ಭಾಷೆಯಲ್ಲಿ (ಅರೆ ಮಾತಲಿ) ಅರುಹಿ. ತನ್ನೊಡನೆ ಪಂಢರಾಪುರ ಕ್ಷೇತ್ರಕ್ಕೆ ಕರೆದೊಯ್ದಿದ್ದಾನೆ. ದಾಸರ ಮೈ ಮೇಲೆ ಪರಿವೇ ಇಲ್ಲ. ರಾಹುತನು ದಾಸಾರ್ಯರನ್ನು ಪಾಂಡುರಂಗನ ಮುಂದೆ ನಿಲ್ಲಿಸಿ. ಅದೃಶ್ಯನಾದನು. ಆಗ ಭಕ್ತ್ಯುದ್ರೇಕದಿಂದ ದಾಸರ ವದನಾರವಿಂದದಿಂದ ಸ್ತೋತ್ರರೂಪವಾಗಿ ಹೊರಹೊಮ್ಮಿದ **ಸುಳಾದಿಯ ಸಾಹಿತ್ಯವಿದು.**

**ನೀಲಕುದುರೆಯನೇರಿ** = ನೀಲಿವರ್ಣದ ಕುದುರೆಯಮೇಲೆ ಕುಳಿತು, **ಶಾಲು** = ತನ್ನ ಸೊಂಟಕ್ಕೆ ಶಾಲು ಸುತ್ತಿ ಕೊಂಡಿದ್ದಾನೆ ಆ ವಿಚಿತ್ರ ರಾಹುತ, **ಕಾಲುಕುಪ್ಪಸ** = ಅಂಗಿಯ ಮೇಲೆ ಕಸಿ ಅಂಗಿಯನ್ನೇ ಧರಿಸಿದ್ದಾನೆ, **ಮೋಹನ್ನ ಹಾಕಿ** = ತಲೆಗೆ ಮುಂಡಾಸನ್ನು ಸುತ್ತಿ, **ಓಲ್ಯಾಡಿಸುತ್ತ** = ಕುದುರೆಯನ್ನು ಧಾವಿಸುತ್ತಾ, **ಢಾಳಾಗಿ** = ಪ್ರಕಾಶಮಾನವಾಗಿ, **ತೋಳು ತಾಯಿತ** = ಬಾಹುಗಳಿಗೆ ತಾಯಿತ ಕಟ್ಟಿದ್ದಾನೆ, **ಅಲೇನಾಹಿ** = ಮರಾಠೀ ಭಾಷೆಯಲ್ಲಿ "ಬರುವುದಿಲ್ಲವೇ"–ಎಂಬರ್ಥದಲ್ಲಿ, **ಕಾಳಗತ್ತಲು ಅಲ್ಲ** = ರಾತ್ರಿಯ ಕಗ್ಗತ್ತಲಲ್ಲ, ಬೆಳಗಿನ ಬಿಸಿಲಿನ ಕಾಂತಿಯ ಹೊತ್ತು, **ತಗ್ಗುವಿಟ್ಟೆ ಮೇಲೆ** = ಬೆಟ್ಟದ ಇಳಿಜಾರು ಪ್ರದೇಶದ ಮೇಲೆ ಹರಡಿರುವ, **ಮಂಜುರ ವಲ್ಲ** = ಮಂಜಿನ ಮುಸುಕೂ ಇಲ್ಲ, **ಸೋಜಿಗವು** = ಆಶ್ಚರ್ಯವು, **ಅರೆ ಮಾತಿನಿಂದಲಿ** = ಮರಾಠೀ ಭಾಷೆಯಲ್ಲಿ, **ಕುರುಹದಿಂದ** = ರಾಹುತನು ಧರಿಸಿದ್ದ ತುಳಸೀಮಾಲೆ, ಪೂಸಿದ್ದ ಗಂಧದ ಮಾಹಿತಿಯಿಂದ, **ಶೀಲ–ಮೂರುತಿ** = ಪರಮಪಾವನ ಚರಿತನು

**ಕಂಡಿರ್ಯಾ** = ಅಂತಹ ಅಸದೃಶ ಪುರುಷನನ್ನು ನೀವು ಎಂದಾದರೂ ನೋಡಿದ್ದೀರಾ? ಎಂದು ಪ್ರಶ್ನಿಸುತ್ತಾರೆ–ದಾಸವರ್ಯರು, **ಬೊಮ್ಮಾಂಡ ದೊಡೆಯನ** = ಬ್ರಹ್ಮಾಂಡದ ಪ್ರಭು **ಅಜಭವಾದಿಗಳ** = ಬ್ರಹ್ಮರುದ್ರಾದಿ ದೇವತೆಗಳನ್ನು, **ತೊಂಡರ ಮಾಡಿ** = ತನ್ನ ದಾಸರನ್ನಾಗಿ ಮಾಡಿಕೊಂಡು, **ಪಶುಹಿಂಡುಮಾಡಿ** = ಸರ್ವಜೀವರನ್ನು ಸೃಷ್ಟಿಸಿ, ಅವರನ್ನು ಹಸುಗಳ ಹಿಂಡಿನಂತೆ ಸಂರಕ್ಷಿಸುವ, **ಮಣಿಮೌಳಿ** = ತಲೆಯಲ್ಲಿ ಧರಿಸಿದ ಮಲ್ಲಿಗೆಯ ದಂಡೆ. ರೂಪಕತಾಳದ ಸುಳಾದಿಯ ವಿಭಾಗದಲ್ಲಿ ಸ್ವಗತಭೇದವಿವಜೀವತನ ರೂಪವಿಶೇಷಗಳನ್ನು ತಿಳಿಸುತ್ತಾರೆ. ಗೋಪಾಲನಾಗಿ ಗೋವುಗಳನ್ನು ಕಾಯ್ದ ರೂಪವೇ ಮತ್ಸ್ಯಾದಿ ದಶಾವತಾರ ರೂಪವು. **ಕುಂಡಲ ಕರ್ಣಕಪೋಲ** = ನುಣುಪಾದ ಕೆನ್ನೆಗಳ ಮೇಲೆ ಓಲ್ಯಾಡುತ್ತಿರುವ ಕರ್ಣಕುಂಡಲಗಳು. **ಅಜಾದಿ ರೂಪವು** = ಈ ರೂಪವೇ ಅಜಾದಿ ಏಕೋತ್ತರ ಪಂಚಾಶಿಂಶತಿ

(೫೧) ರೂಪಗಳ ಸಮೂಹವು, **ಆತ್ಮಾದಿ ರೂಪವು** = ಆತ್ಮ-ಅಂತರಾತ್ಮ-ಜ್ಞಾನಾತ್ಮ-ಪರಮಾತ್ಮ-ಎಂಬ ರೂಪ ಚತುಷ್ಟಯವು, **ಅನಂತಾತ್ಮಕ** = ಅಜಿತ್ಯಾದಿ ಅನಂತಾನಂತ ರೂಪಗಳು, **ಆವ ರಾಹುತನಂತೆ** = ಹೀಗೆ ಶ್ರೀಹರಿಯ ರೂಪಗಳು ಅನಂತಾನಂತವಿರಲು, ಇದ್ಯಾವ ರಾಹುತನ ರೂಪವೆಂದು ಉದ್ಗಾರ ತೆಗೆದಿದ್ದಾರೆ ಆಶ್ಚರ್ಯದಿಂದ ದಾಸರಾಯರು! **ಕಳವಳಗೊಳಿಸಿದುದು** = ನನ್ನ ಮನಸ್ಸು ಅಲ್ಲೋಲಕಲ್ಲೋಲವಾದದ್ದು, **ನಾ ಒಂದವರಿತವನಲ್ಲ** = ನಾನು ಮೂಢ. ನಿನ್ನ ಲೀಲಾಮಹಿಮೆಗಳನ್ನು ನಾನೆಂತು ಅರಿಯುವೆ? **ಸೇವಕಜನಸ್ಥಿತಿ** = ನಿನ್ನ ಭೃತ್ಯಜನರ ದೀನಾವಸ್ಥೆಯನ್ನು ತಿಳಿದ ಸರ್ವಜ್ಞ ನೀನು, **ಶ್ರೀ ವಿಜಯದಾಸರ ಪ್ರಿಯ** = ಅಸ್ಮದ್ಗುರುಗಳಾದ ಶ್ರೀವಿಜಯದಾಸರ ಇಷ್ಟದೈವ ನೀನು ಹೇ ಪಾಂಡುರಂಗ!

**ನೋಡಾ ನೋಡಾ ಅದೃಶ್ಯನಾದ ಕಾರಣ** = ನನ್ನನ್ನು ಪಂಢರಾಪುರದ ದೇಗುಲದಲ್ಲಿ ಬಿಟ್ಟು ನೀನು ಅದೃಶ್ಯನಾದೆ. ನೀನು ಹಾಗೆಯೇ ನಿಂತಿದ್ದರೆ, ನಿನ್ನನ್ನು ಕಣ್ತುಂಬಾ ನೋಡುತ್ತಿದ್ದೆ ಎಂದು ತಮ್ಮ ಮನಸಿನ ಅಳಲನ್ನು ತೋಡಿಕೊಳ್ಳುತ್ತಾರೆ, **ನಿಂದು ಬೇಡುವದಿನ್ನೇನು** = ನಿನ್ನನ್ನು ನೋಡಿದಾಕ್ಷಣ ಬೇಡುತ್ತಿದ್ದೆನೇ? ಬೇಡುವುದಾದರೂ ಏನು? ನಿನ್ನಲ್ಲಿ!

**ಆವ ದೇಶಕೆ ಬರಲಿ** = ನಿನ್ನ ಸಂಕಲ್ಪವಿದ್ದಂತೆ ಸರ್ವಕಾರ್ಯಗಳೂ ನಡೆಯುತ್ತವೆ. ದೇಶ-ಕ್ಷೇತ್ರ-ಸಂಗ-ವ್ರತಾಚರಣೆ-ಶ್ರವಣ-ಧೈರ್ಯ-ಸಾಧನೋಪಾಯಗಳು - ದಾನ-ಉಂಬುವುದು-ತೊದೆಯುವುದು - ನೋಡುವುದು-ಬಿಡುವುದು-ತಡೆಯುವುದು-ಅರ್ಚನೆ-ನುಡಿಯುವುದು - ಜಪ-ಎಲ್ಲವೂ ನಿನ್ನ ಚಿತ್ತದಂತೆ ಆಗುವುವು. ನಾನು ಅಸ್ವತಂತ್ರ. ನಿನ್ನ ಅಧೀನ-ಎನ್ನುತ್ತಾರೆ ದಾಸವರ್ಯರು, **ಆವಲ್ಲಿಗೋ ನಾನರಿಯೆ** = ನೀನು ನನ್ನನ್ನು ಕುರಿತು "ಅಲೇನಾಹಿ"-ಎಂದೆಯಲ್ಲ? ಎಲ್ಲಿಗೆ ಬರಹೇಳಿದ್ದು. ನಾನೊಂದನೂ ಅರಿಯೆ. **ಕಾಕುಜನರಿಂದ** = ದುರ್ಜನರ ದೂಷಣೆಗೆ ನನ್ನನ್ನು ಗುರಿ ಮಾಡಬೇಡ, **ವಿಜಯರಾಯರ ಸಹವಾಸದಲಿಪ್ಪ** = ನನ್ನ ಗುರುಗಳಾದ ಶ್ರೀವಿಜಯದಾಸರು ಮಹಾಜ್ಞಾನಿಗಳು-ಯೋಗಿಗಳು-ಸಿದ್ಧ ಪುರುಷರು. ಅವರ ಸಂಗ

ದಲ್ಲಿಪ್ಪ ಜೀವಂಗೆಲ್ಲಾ ನೋವು ಒಂಬುಂದೇ ಬೇಡ–ಎಂದು ಮೊರೆ ಇಟ್ಟಿದ್ದಾರೆ. ಇದು ದಾಸರಾಯರ ಅಂತರಂಗದ ಔದಾರ್ಯಕ್ಕೆ ದೃಷ್ಟಾಂತ.

**ಗೋವಳರಾಯ** = ಗೋಪಾಲಕನಾಗಿ ನಂದಗೋಕುಲದಲ್ಲಿ ಗೋವುಗಳನ್ನು ಕಾಯ್ದ ರೂಪ, **ನಿರ್ಜಿತಮಾಯಾ** = ಮಾಯಾತೀತನು, **ಮುಕ್ತಾಶ್ರಯ** = ಮುಕ್ತರಿಗೆಲ್ಲ ಆಶ್ರಯಪ್ರದನು, **ದೋಷವಿದೂರ** = ನಿರ್ದೋಷವಸ್ತು. ಅನಂತ ಕಲ್ಯಾಣಗುಣಗಣ ಪರಿಪೂರ್ಣವಸ್ತು, **ನಿರ್ವಿಕಾರ** = ವಿಕಾರವಾದ, ರೂಪವಿಲ್ಲದವನು ಪರಮಸುಂದರಮೂರ್ತಿ ಆ ರೂಪವೇ ಅಜಾದಿ ಕ್ಷರಾಂತ ಲಕ್ಷ್ಮೀನರಸಿಂಹ ಪರ್ಯಂತ ಏಕೋತ್ತರ ಪಂಚಾಷದ್ವರ್ಣ ರೂಪವು (ಅಕ್ಷರಾತ್ಮಕ ೫೧ ರೂಪಗಳು). ಆ ರೂಪವೇ ಅಜಿತ್ಯಾನಂತರೂಪಗುಣಗಳು. ಸಾಕ್ಷಾತ್ ವಿಷ್ಣು ರೂಪವೇ ಅದು. ಆತ್ಮ, ಅಂತರಾತ್ಮ, ಪರಮಾತ್ಮ, ಜ್ಞಾನಾತ್ಮ ಎಂಬ ಚತುರಾತ್ಮಕ ರೂಪವು ಆ ರೂಪವೇ ಶ್ರೀಪರಮಾತ್ಮನ ಇಷ್ಟು ಅನಂತಾನಂತ ರೂಪಗಳಿದ್ದರೂ, ರಾಹುತರೂಪದಿಂದ ಅಶ್ವವನ್ನು ಏರಿ ಬಂದ ಈ ರೂಪದ ವೈಶಿಷ್ಟ್ಯವೇನು–ಎಂದು ಅಚ್ಚರಿಯಿಂದ ಉದ್ಗರಿಸಿದ್ದಾರೆ ಶ್ರೀಭಾಗಣ್ಣ ದಾಸರಾಯರು. ನಿನ್ನ ಲೀಲೆ ನನ್ನಂಥ ಅರಿಯಲಾಗದು. ನಾನು ಕೇವಲ ನಿನ್ನ ದಾಸ. ಅಜ್ಞಾನಿಯಾದ ನನ್ನನ್ನು ಈ ರೀತಿ ಕಳವಳಪಡಿಸುವುದು ನಿನಗೆ ಉಚಿತವೇ ? ಸ್ವಾಮಿ–ಸೇವಕನ ಸ್ಥಿತಿ ನೀನು ಬಲ್ಲೆ ಹೇ ಸರ್ವಜ್ಞ ಶಿಖಾಮಣಿ ಗೋವರ್ಧನ ಗಿರಿಯನ್ನೆತ್ತಿ ಗೋಗೋಪಾಲಕರನ್ನು ಉದ್ಧರಿಸಿದ ಹೇ ದೇವ ಪಂಢರಾಪುರದ ಪಾಂಡುರಂಗ, ಅಸ್ಮದ್ಗುರುಗಳಾದ ಶ್ರೀವಿಜಯದಾಸರಿಗೆ ಅತ್ಯಂತ ಪ್ರಿಯನೇ !

**ನೋಡದಂತೆನಗೆ** = ನೀನು ಅದೇ ರೂಪದಲ್ಲಿದ್ದಿದ್ದರೆ, ನಿನ್ನನ್ನು ಕಣ್ತುಂಬಾ ನೋಡಿ ಆನಂದಿಸುತ್ತಿದ್ದೆ. ಏಕೆ ಅದೃಶ್ಯನಾದೆ ಪ್ರಭುವೇ?-ಎಂದು ಮೊರೆ ಇಡುತ್ತಾರೆ. ಒಂದು ಘಳಿಗೆ ಅದೇ ರೂಪದಲ್ಲಿ ದರ್ಶನ ಕೊಡುತ್ತಿದ್ದರೆ, ನಿನ್ನನ್ನು ನಾನು ಬೇಡುತ್ತಿದ್ದೆನೋ ಹೇ ದಯಾಸಾಗರ. ಸಕಲ ಕಾಮಿತಾರ್ಥಪ್ರದನೇ–ಎಂದು ಕಳವಳಿಸುತ್ತಾರೆ ದಾಸರಾಯರು ನನಗೇನು ತಿಳಿಯದು. ಹೇ ಪಂಢರಿರಾಯಾ ಅಸ್ಮತ್ಪ್ರಭುವೇ !

ಯಾವ ಸ್ಥಳಕ್ಕೆ ಬರಲಿ? ಯಾವ ಕ್ಷೇತ್ರ ಯಾತ್ರೆ ಮಾಡಲಿ? ಯಾವ ಸಹವಾಸದಲ್ಲಿ ಇರಲಿ? ಯಾವ ವ್ರತಾದಿಗಳನ್ನು ಆಚರಿಸಲಿ? ಯಾವ ವಿಷಯವನ್ನು ಕೇಳಲಿ? ಆವ ಸಾಧನವ ಮಾಡಲಿ? ಯಾವು ದನ್ನು ಭುಂಜಿಸಲಿ? ಯಾವ ವಸ್ತ್ರವನ್ನು ಹೊದೆಯಲಿ? ಯಾವ ದೃಶ್ಯ ವನ್ನು ನೋಡಲಿ? ಯಾರನ್ನು ಅರ್ಚಿಸಲಿ? ಆವ ಮಂತ್ರವನ್ನು ಜಪಿಸಲಿ ಹೇಳು ಹೇ ದೇವಾ!

ನೀನು ಇಲ್ಲದಿರುವ ಸ್ಥಳವು ಯಾವುದಿದೆ? ತಿಳಿಸು. ನೀನು "ಆಲೇ ನಾಹಿ" ಎಂದು ಹೇಳಿದ್ದು ಯಾವ ಸ್ಥಳಕ್ಕೆ ನಾನು ಬರಲೆಂದು? ಹೇ ದಯಾಬ್ಧಿ, ಕುಟಿಲ ಮಾನವರ ವಶವ ಮಾಡಲಿಬೇಡ ಎನ್ನನ್ನು. ನನ್ನ ಗುರು ಗಳಾದ ಶ್ರೀವಿಜಯದಾಸವರ್ಯರು ಮಹಾತ್ಮರು ಅವರ ಸಂಗಸುಖವನ್ನು ಹೊಂದಿರುವ ಸಜ್ಜೀವರಿಗೆಲ್ಲಾ ನೋವೆಂಬುದೇ ಬೇಡ-ಎಂದು ಅಂತಃಕರಣ ಹೃದಯರಾಗಿ ಪಂಢರೀರಾಯನಲ್ಲಿ ಪ್ರಾರ್ಥಿಸಿದ್ದಾರೆ ಭಕ್ತ ಶಿಖಾಮಣಿ ಭಾಗಣ್ಣ ದಾಸರು! ನೀನು ಒಲಿದಿದ್ದೇ ಆದರೆ, ಇದೇ ವರವನ್ನು ನನಗೆ ದಯಪಾಲಿಸು.

**ಶರಣು ಗೋವಳರಾಯ** = ಹೇ ಗೋಪಾಲಬಾಲಕನೇ ನಿನಗೆ ಶರಣು, **ನಿರ್ಜಿತಮಾಯಾ** = ಮಾಯಾ ರಹಿತನಾದ ಹೇ ಮಾರಮಣನೇ ನಿನಗೆ ಶರಣು, **ಮುಕ್ತಾಶ್ರಯಾ** = ಸಕಲ ಮುಕ್ತ ಜೀವರಿಗೂ ಆಶ್ರಯ ಪ್ರದನಾದವನೇ ನಿನಗೆ ಶರಣು. **ಆನಂದಮಯ** = ಪರಮಾನಂದ ಸ್ವರೂ ಪಿಯೇ, **ಶರಣು ಅವ್ಯಕ್ತಕಾಯಾ** = ಅಪ್ರಾಕೃತ ಜ್ಞಾನಾನಂದಾದಿ ಗುಣ ಪರಿಪೂರ್ಣ ಸ್ವರೂಪಿಯು, **ಮೂಲಕಾರಣ** = ಜಗತ್ತಿನ ಸೃಷ್ಟ್ಯಾದಿ ವ್ಯಾಪಾರಗಳಿಗೆ ಪ್ರಧಾನ ಕಾರಣನು, **ಅಖಂಡೇಶ** = ಸಮಗ್ರ ಸರ್ವತ್ರ ವ್ಯಾಪ್ತವಾಗಿರುವ ಪೂರ್ಣವಸ್ತು, **ಅನಾದಿದೇವ** = ಆದಿಯಿಲ್ಲದವನು, ನಿತ್ಯ ಶಾಶ್ವತ ಸ್ವರೂಪನು, **ನಿತ್ಯ ತೃಪ್ತಾ** = ಸ್ವರಮಣನಾದ ಆಪ್ತಕಾಮನು **ನಿರಂಜನಾ** = ಸರ್ವದೋಷ ವಿವರ್ಜಿತನು, **ಘಟಿತಾಘಟಿತಾನಂತ** = ನಡೆಯುತ್ತಿರುವ ಕಾರ್ಯಗಳು, ನಡೆಯದಿರುವ ಕ್ರಿಯಾವಿಶೇಷಗಳು, ಸರ್ವಕ್ಕೂ ಮೂಲ ಕಾರಣನಾಗಿರುವ ಅನಂತ ಮಹಿಮೋಪೇತನು, **ಐಶ್ವರ್ಯ**

ಪರಮವಿಭೂತಿ ಸಂಪನ್ನನು, **ಅಗಮ್ಯ** = ಸಾಕಲ್ಯೇನ ಯಾರೂ ಅರಿಯದಿರುವ ಅಪ್ರಾಪ್ಯವಸ್ತು, **ಅಲೌಕಿಕ** = ಪಾರಮಾರ್ಥಿಕ, **ಪೂತುರೆ** = ಪಲೈ. ಆಶ್ಚರ್ಯಕರನಾದವನೇ!, **ಅಜಭವಾದಿಗಳಿಗೀಶಾ** = ಬ್ರಹ್ಮರುದ್ರಾದಿ ಸಮಸ್ತ ದೇವತೆಗಳಿಗೆ ನಿಯಾಮಕನು, **ಮಾನಿಸರೂಪದಿ** = ನರವೇಷಧರನಾಗಿ (ಲೀಲಾಮಾನುಷ ವಿಗ್ರಹ). **ಮಾನಿಸರೂಪದಿ ಮನೆಮನೆ** = ಸಣ್ಣ ಬಾಲಕ ರೂಪದಿಂದ ಗೋಪಸ್ತ್ರೀಯರುಗಳ ಮನೆಮನೆಗಳಲ್ಲಿ ಸಂಚರಿಸಿದವನೆ, **ಮಣ್ಣನಮೆದ್ದನೆ** = ಮಣ್ಣುತಿಂದು, ಲೀಲೆತೋರಿ, ತದ್ವಾರಾ ಯಶೋದೆಗೆ ತನ್ನ ಪುಟ್ಟ ಬಾಯಿಯಲ್ಲಿ ವಿಶ್ವರೂಪ ತೋರಿಸಿದವನೆ, **ಮಾನಿನಿಗೆ ಒಲಿದನೆ** = ಗೋಪಿಕಾಸ್ತ್ರೀಯರಿಗೆ ಅನುಗ್ರಹಿಸಿದವನೇ, **ದನುಜರ ಕೊಂದನೆ** = ಕೃಷ್ಣರೂಪದಿಂದ ಪೂತನೀ ಕಂಸಾಸುರಾದಿಗಳನ್ನು ಸಂಹರಿಸಿದವನೇ, **ಧನುವನು** = ಬಿಲ್ಲುಹಬ್ಬದಲ್ಲಿ ಧನುಸ್ಸಿನ ಭಂಗ ರಾಮಾವತಾರದಲ್ಲಿ ಶಿವಧನುವಿನ ಭಂಗ. **ಮಾನುಷ್ಯನಂತೆ** = ನರವೇಷರೂಪನಾಗಿ ಮಾನವರಂತೆಯೇ ಲೀಲೆ ತೋರ್ದವನೇ, **ಮಾನಿತವೇನಯ್ಯ** = ಹೀಗೆ ರಾಹುತ ವೇಷದಿಂದ ನನ್ನನ್ನು ಮಾನವನಂತೆ ಮೋಸ ಮಾಡುವುದು ನಿನಗೆ ಉಚಿತವೇನು? ಹರಿಯೇ, **ಮಾನಸನ್ನವನುಂಬ** = ಮಾನುಷಾನ್ನವನ್ನು ಉಣ್ಣುವ ನನ್ನನ್ನು ನೀನು ಮಾನವವೇಷದಿಂದ ಮರುಳುಗೊಳಿಸಬಹುದೇ? **ಮಾನಗುಣಾಂಬುಧಿ** = ಅನಂತ ಕಲ್ಯಾಣ ಗುಣಶಾಲಿಗಳನಾದ ನೀನು, **ಮನಸಾವಾಚಾಕಾಯಾ** = ತ್ರಿಕರಣಶುದ್ಧನಾಗಿ.

**ಒಳಿತೆಲ್ಲವಿರಲು** = ನೀನು ಸರ್ವತ್ರ ವ್ಯಾಪ್ತ, ಹೀಗಿದ್ದರೂ, "ಆಲೇ ನಾಹಿ"–ಎಂದು ಈ ಸ್ಥಳಕ್ಕೆ (ಪಂಢರಾಪುರಿ) ಬರ ಹೇಳಿದ ಕಾರಣವೇನು? ಎಂದು ಉದ್ಗರಿಸಿದ್ದಾರೆ ಭಕ್ತ ಭಂಡಾರಿ ಭಾಗಣ್ಣನವರು,

*

೫

(ಜಗನ್ನಾಥ ವಿಠ್ಠಲಾಂಕಿತ)

ರಾಗ–ಘರಜು ಆದಿತಾಳ

ಪಾಲಿಸೋ ಪಂಡರಿಪುರರಾಯಾ–ಪಾವನ ಕಾಯಾ
ಭೀಮರಥಿಕೂಲ ನಿಲಯಾ ॥ ॥ಪ॥

ಶ್ಲೋಕ

ತರುಣತುಲಸಿಮಾಲಾ ತಪ್ತಗಾಂಗೇಯ ಚೇಲಾ
ಶರಧಿತನಯಲೋಲಾ ಶಕ್ವರೀಕಾರಿಪಾಲ
ಸಿರಿ ಅಜ ಭವ ಮೂಲಾ ಶುದ್ಧ ಕಾರುಣ್ಯ ಲೀಲಾ
ಪುರಹರಸಖ ಲೀಲಾ ಪಾಹಿ ಗೋಪಾಲಬಾಲಾ ॥

ಪದ

ನವಜಲಧರನಿಭ ಶಾಮಲಾವಪು ಕೋಮಲ ವೈಜಯಂತಿಮಾಲಾ
ರವಿಯಂತೆ ಪೊಳೆವ ಕುಂಡಲ ಹಾರಾಧೃತ ಕೇಯೂರ ಕೌಸ್ತುಭ
ಮಣಿರುಚಿರಾ ದಿವಿ ಭೂ ಪಾತಾಳಲೋಕದಿ ವ್ಯಾಪ್ತಾ–ದೋಷ ನಿರ್ಲಿಪ್ತ
ವಿಪಶ್ಚಿತಜನರಾಪ್ತಾ ಭವವನಿಧಿಗೆ ಕುಂಭಸಂಭವ
ದೇವರದೇವಾ ಧರುಮಾದ್ಯರ ಭಾವಾ ॥ ॥೧॥

ಶ್ಲೋಕ

ಅಮಿತಸುಗುಣಧಾಮಾ ಆತ್ಮಭೂಪೂರ್ಣಕಾಮಾ
ಅಮರಕುಲಲಲಾಮ ಅಬ್ಜಧಾಮಾಭಿರಾಮಾ
ಯದುಕುಲೋದಧಿ ಸೋಮಾ ಯಜ್ಞಭೃದ್ಯಜ್ಞನಾಮಾ
ಸಮರವಲಯ ಭೀಮಾ ಸಾತ್ವತಾಂ ಸಾರ್ವಭೌಮಾ ॥

## ಪದ

ದಿತಿಜಮರ್ದನ ದೀನರಕ್ಷಕಾ ಕರ್ಮಸಾಕ್ಷಿಕಾ ಸಂರಕ್ಷಿತ ಸರ್ವಲೋಕಾ
ವಿತತಮಹಿಮ ವಿಶ್ವನಾಟಕ ವಕ್ತ್ರಘೋಟಕಾ ಶೋ
ಭಿತ ರತ್ನಕಟಕಾ ನತಿಸುವೆ ನಳಿನಜಾಂಡೋದರಾ ಸರ್ವಾಧಾರಾ
ಸಂತತ ನಿರ್ವಿಕಾರಾ ಮತಿಮಂದನಾಗಿ ನಿನ್ನನು ಬಿಟ್ಟೆ ಮ
ಮತೆಯು ತೊಟ್ಟೆ ಕಾಣೆನೋ ಪುಣ್ಯ ಬಟ್ಟೆ ॥ ॥೨॥

## ಶ್ಲೋಕ

ಜನನಮರಣದೂರ ಜಂಗಮಾಚಾರ ವಿಹಾರಾ
ದನುಜವನಕುಠಾರಾ ದೀನಜನಮಂದಾರ ಧೀರಾ
ಪ್ರಣತಭಯವಿದಾರಾ ಪ್ರಾಕೃತಾತೀತ ಸಾರಾ
ದಿನಪನಿಭಶರೀರಾ ದುಃಖ ವಾರಿಹ ಸಮೀರಾ ॥

## ಪದ

ವನಧಿಬಂಧನ ವನೌಕಸನಾಥ–ಜಿತಾಸುರಯೂಥ–ನಿರ್ಮಲ ಶ್ರುತಿಗಾಥಾ
ಅನುದಿನದಲ್ಲಿ ನಂಬಿದೆ ನಿನ್ನ ಪಾಲಿಸು ಎನ್ನ–ಸಂತತ ಸಂಪ್ರಸನ್ನಾ
ಮನೋವಾಕ್ಕಾಯದಿ ಮಾಡಿದ ಕ್ರಿಯಾ–ನಿನ್ನದು ಜೀಯಾ–ಕರುಣದಿ
ಪಿಡಿಕೈಯಾ
ಪೆಸೆಯೊ ನೀನಲ್ಲದೆ ಅನ್ಯರೆ ದುರ್ಜನರ ದೂರಾ–ನಂದಗೋಪಕುಮಾರಾ ॥
॥೩॥

## ಶ್ಲೋಕ

ಶಫರ ಕಮಠ ಕೋಲಾ ಶತ್ರುಕಾಶ್ಯಪಿ ಬಾಲಾ
ನೃಪಕುಲ ಈರವಾಳಾ ನೀಲಕಂಠಾಸ್ತ್ರ ಕಾಲಾ
ದ್ರುಪದತನಯೆ ಪಾಲಾ ದೂರವರ್ಜಿತರ್ದುಕೂಲಾ
ರಿಪುದಿತಿಸುರ ಬಾಲಾ ರಕ್ತಪದ ಭೇದ ಸಾಲಾ ॥

ಪದ

ಕ್ಷೇತ್ರಜ್ಞಾ ಕ್ಷೇತ್ರನಾಮಕ ಕ್ಷೀರಾ ಅಬ್ಧಿ ನಿಜಾಗಾರನಿರ್ಮಲ ಓಂಕಾರದಿ
ಮಾತೃಪ್ರತಿಪಾದ್ಯಸ್ವರೂಪಾ ವರ್ಜಿತಪಾಪ ಗುರುವೆನಿಪ ಸಾಂದೀಪ
ಪುತ್ರನ ತಂದ ಪರಾಕ್ರಮಿ ಎಲ್ಲರ ಸ್ವಾಮಿ–ಪರಮಪ್ರಿಯಾ ಜಾಮಿ
ಭಕ್ತಗೊಲಿದು ವಿಶ್ವರೂಪವಾ–ತೋರಿ ಚಾಪವಾ–ಕೊಟ್ಟು ಕಳೆದ್ಯೊ ತಾಪವಾ॥
॥೪॥

ಶ್ಲೋಕ

ನಗಧರ ನಳಿನಾಕ್ಷ ನಾಕನಾಥಾದ್ಯಪಕ್ಷ
ನೃಗ ನಗಪತಿ ಶಾಪಾ ನಿರ್ವಹಕಾರ ಶ್ರೀಪಾ
ಭೃಗುಮುನಿಗೇಯಾ ಭೂತನಾಥ ಸಹಾಯು
ಅಗಣಿತ ಸುಮಹಾತ್ಮ ಸರ್ವಜೀವಾಂತರಾತ್ಮಾ ॥

ಪದ

ರಜನೀಶಬಿಂಬವನಿಳುಹಿದಾ–ಮಾವನ ಕಳುಹಿದಾ–ಅಹಿತರನಳುಹಿದಾ
ದ್ವಿಜನ ಸಾಹ ನಂತಾಸನ–ಪುರಾವೈದೆ ಸತ್ವರಾ–ತೋರಿದೆ ಸತ್ಪುತ್ರರು
ಭುಜಗಮಾರ್ಗಣ ರವಿನಂದನು–ಬಿಡೆ ಶಂದೆನಾ–ಒತ್ತಿ ಕುಂತಿನಂದನಾ
ನಿಜಭಾವುರೆ ಕಾಯ್ದೆ–ರಣದೊಳು ಬಾಣನ–ತೋಳು ಖಂಡ್ರಿಸಿದ್ಯೊ ಕೃಪಾಳು॥
॥೫॥

ಶ್ಲೋಕ

ಶುಭತಮ ಸುಖತೀರ್ಥಾರಾಧ್ಯ ಸದ್ಧ್ಯಾನಪಾತ್ರಾ
ಇಭವರರಿಪು ಹತಾನ ವಿಶ್ವಜನಸ್ಮಾವಿಕರ್ತಾ
ಅಭಯದ ತವಪದಾಂಭೋಜಾತಯುಗ್ಮ ಪ್ರಸಾದಾ
ನಭದನುಪಿತ ದೇಹಿ ನಿಶ್ಚಲಾನಂತ ಪಾಹಿ ॥

ವಸುಪತಿಸುತ ನಳಕೂಬರಾ–ಮಣಿಗ್ರೀವರಾ–ಶರಣಜನ್ಮವಿದೂರಾ
ವೃಷಭ ಶಕಟ ಬಕ ಭಂಜನಾ–ಜನರಂಜನಾ–ನಿರ್ಗುಣ ನಿರಂಜನಾ
ವಸುದೇವನಿಗೆ ಮಗನಾಗಿದ್ದ–ಬೆಣ್ಣೆಯ ಕದ್ದ–ಗೋಪರೊಡಗೂಡಿ ಮೆದ್ದ
ಬಿಸಜಾಂಡನ ವದನದೊಳಿಗಾ–ಸಜ್ಜನಬಂಧೂ–ತೋರಿದೆ ದಯಸಿಂಧೂ ॥
॥6॥

## ಶ್ಲೋಕ

ಅತಿವಿಮಲಸುಗಾತ್ರ ಅಖಿಳಲೋಕೈಕ ಪಾತ್ರಾ
ಪ್ರತತಿಜಗಳ ನೇತ್ರಾ ವ್ಯಕ್ತಹಾರ್ದ್ಯಮಾರಪುತ್ರಾ
ಶ್ರುತೀ ಕಮಲಜ ಸೂತ್ರಾ ಸ್ತುತ್ಯ ಪಾವನ ಪವಿತ್ರಾ
ಪ್ರತಿಹಯ ಸುಚರಿತ್ರಾ ಪಾತು ಲಕ್ಷ್ಮೀಕಳತ್ರ

## ಪದ

ಏಳುಗೂಳಿಯ ಗೆದ್ದ ಯದುಪತಿ–ಸುಪರಂಜ್ಯೋತಿ–ನಿನ್ನಯ ದಿವ್ಯಖ್ಯಾತಿ ಈ
ರೇಳು ಜಗದೊಳು ನುತಿಸೋರು–ನಿತ್ಯಸುಖಿಸೋರು–ಆನಂದಾಬ್ಧಿ ಸನ್ನುತರೋ
ಕೀಳುಮಾನವ ನಾ ಬಲ್ಲೆನೆ ನಿನ್ನ–ಸುರುತಾಪಸನ್ನ–ಜನಕ್ಲೇಶಭಂಜನಾ
ತಾಳಿದೆ ನರರೊಳು ನರವೇಷಾ–ಮಂಜುಳ ಭಾಷಾ–ನಿನ್ನಯ ಅಭಿಲಾಷಾ ॥
॥೭॥

## ಶ್ಲೋಕ

ವನರುಹಭವ ತಾತಾ ಪೀತ ತನ್ಮಾತ್ರಭೂತ
ದ್ಯುನದಿ ಜಲವಿಧೂತ ದಿವ್ಯ ಪಾದಾಂಬುಜಾತಾ
ಅನಿಲತನಯ ಪ್ರೀತಾ ಅತ್ರಿಸದ್ವಂಶ ಜಾತಾ
ಅನಿಮಿಷಜಯಸೂತಾ ಜನತೇಷ್ಟ ಪ್ರದಾತಾ ॥

## ಪದ

ಕರದಂಡಧರ ಕಟಿಸ್ಥಿತಪಾಣಿ–ಮಂಗಳ ಶ್ರೇಣಿ–ಲೋಕೈಕ ಸತ್ರಾಣಿ
ಶರಣುಹೊಕ್ಕವರ ಕಾಯುವ ಬಿರುದಾಂಕಾ–ಕಾಳಿಂಗನಬಿಂಕಾ–ಬಿಡಿಸಿದ್ಯೊ
ನಿಷ್ಕಳಂಕಾ
ಮುರ ಶಿಶುಪಾಲ ಧೇನುಕಾ ಹಂಸಾ ವತ್ಸಾಸುರ ಕಂಸಾ ದಂತವಕ್ತ್ರಾದ್ಯರ ಹಿಂಸಾ
ಪರನಾಗಿ ಕೊಟ್ಟೆ ಧಾರಿಣೆಪ್ಪಾ–ಸುಜನರ ಕಷ್ಟಾ–ಬಿಡಿಸಿದ್ಯೋ ಓಜಪ್ಪಾ ॥
॥೮॥

## ಶ್ಲೋಕ

ಹನುಮಂನತಪಾದಾಜ್ಜ ಹಂಸ ಸಂಪಕ್ತ್ರ ಕುಬ್ಜ
ತನುವಿಕೃತ ವಿನಾಶಂ ಕಾಳಿ ಜಿಹ್ವಾಶುದೇಶಂ
ದನುಜದಿವಿಕರಾಳ ಮತ್ತ ಪೌಂಡ್ರೇ ಶೃಗಾಲಂ
ಹನನ ವಿದುರವಂದ್ಯ ಹೈಮಗೇಭಾಂಡ ವಂದ್ಯಂ ॥

## ಪದ

ಇಟ್ಟಿಗೆಪೀಠ ಸಂಸ್ಥಿತ ಪಾದಾ–ಮಂಗಳಪ್ರದಾ–ಶಾಶ್ವತಮೋದಾ–ಸುಪದ
ಕೊಟ್ಟುಪಾಲಿಸೋ–ಅನಿಮಿಷರು ನಿನ್ನಯ ಚಾರು–ಮೂರುತಿಯನ್ನು ತೋರು
ಪುಟ್ಟಲಾರೆನೋ ಜಗದೊಳು ದಾತಾ– ಎನ್ನಯ ಮಾತಾ–ಲಾಲಿಸು ಜಗನ್ನಾಥ
ವಿಠ್ಠಲ ವೃಂದಾರಕರರಸಾ–ಸಂತತಲೇಸಾ–ನಿನ್ನವರಿಗೀಯೋ ಶ್ರೀಶಾ ॥
॥೯॥



**ಅರ್ಥವಿವರಣೆ :**

ಶ್ರೀಜಗನ್ನಾಥದಾಸವರ್ಯರಿಂದವಿರಚಿತವಾದ ಈ ವೃತ್ತನಾಮ ಕೀರ್ತನೆಯ ಸಾಹಿತ್ಯವು ಒಂದು ಶ್ಲೋಕ ಒಂದು ಪದ, ಹೀಗೆ ಕ್ರಮವಾಗಿ,

ಪಂಢರಾಪುರದಲ್ಲಿ ಭೀಮಾನದಿ ತೀರಸ್ಥನಾದ ನಾದಬ್ರಹ್ಮನಾದ **ಶ್ರೀಪಾಂಡು ರಂಗನ** ಸ್ತೋತ್ರರೂಪವಾದ ಪಾರಿಜಾತವು.

**ಪಂಢರಿಪುರರಾಯ** = ಪಂಢರಾಪುರಕ್ಷೇತ್ರಸ್ಥನಾದ ಶ್ರೀಪಾಂಡುರಂಗನೇ **ಪಾವನಕಾಯಾ** = ಪರಮ ಪವಿತ್ರ ಶರೀರವುಳ್ಳವನು, **ಭೀಮರಥಿ ಕೂಲನಿಲಯ** = ಭೀಮರಥೀನದಿಯ ತೀರದಲ್ಲಿಪ್ಪ (ಕೂಲ–ದಡ, ತೀರ) ಪಂಢರಾಪುರದಲ್ಲಿರುವ ಭೀಮರಥಿಯ ಈ ಭಾಗಕ್ಕೆ "ಚಂದ್ರಭಾಗಾ"– ಎಂದು **ಹೆಸರು. ಚಂದ್ರನ ಶಕಲದಂತೆ ಬಿಲ್ಲಿನಂತೆ ಬಾಗಿ ಹರಿಯುತ್ತದೆ.**

**ತರುಣತುಲಸಿಮಾಲಾ** = ಎಳೆಯ ತುಳಸಿಯ ಹಾರ, **ತಪ್ತ ಗಾಂಗೇಯ ಚೇಲಾ** = ಕಾದ (ಪುಟವಿಟ್ಟ) ಭಂಗಾರದ ವರ್ಣದ ವಸ್ತ್ರ (ಪೀತಾಂಬರ), **ಶರಧಿತನಯೆಲೋಲಾ** = ಶ್ರೀ ಲಕ್ಷ್ಮೀಲೋಲನು (ಶರಧಿ–ಕ್ಷೀರ ಸಮುದ್ರ. ತನಯೆ–ಕ್ಷೀರ ಸಮುದ್ರದಲ್ಲಿ ಜನಿಸಿದ ಶ್ರೀಲಕ್ಷ್ಮೀ)

**ಶಕ್ವರೀ** = ಹಸು (ಎತ್ತು) – **ಗೋಪಾಲಕನು. ಸಿರಿ ಅಜಭವ** = **ಲಕ್ಷ್ಮೀ–ಬ್ರಹ್ಮ**–ರುದ್ರ ಇವರುಗಳಿಗೆ ಮೂಲಕಾರಣನು. **ಪುರಹರ ಸಖ** = ತ್ರಿಪುರಸಂಹಾರಿಯಾದ ರುದ್ರದೇವರ ಮಿತ್ರನು,

**ನವಜಲಾಧರನಿಭ** = ನೂತನವಾದ ಮೇಘದಂತೆ ಶ್ಯಾಮಲವರ್ಣ ಶರೀರನು (ನವ–ನೂತನ, ಆಗತಾನೇ ಕೂಡುತ್ತಿರುವ, ಜಲಾಧರ-ಮೇಘ **ನಿಭ–ಕಾಂತಿ)**

**ವಪು** = ಶರೀರವುಳ್ಳವನು, **ಕುಂಡಲ** = ಸೂರ್ಯನ ಕಾಂತಿಯಂತೆ **(ರವಿಯಂತೆ)** ಹೊಳೆಯುವ ಕರ್ಣಾಭರಣಗಳು, **ಮಣಿರುಚಿರಾ** = ಕಂಠ ದಲ್ಲಿ ಧರಿಸಿರುವ ಕೌಸ್ತುಭಮಣಿಯ ಕಿರಣಗಳ ಕಾಂತಿ, **ದಿವಿ ಭೂ ಪಾತಾಳ**

= ಸ್ವರ್ಗ-ಭೂಮಿ-ಪಾತಾಳ ಎಂಬ ಲೋಕತ್ರಯಗಳು, **ವಿಪಶ್ಚಿತ** = ದುಃಖಿತಪ್ತರಾದ ಭಕ್ತಜನರಿಗೆ ಪರಮಾಪ್ತನು, **ಭವವನಧಿಗೆ ಕುಂಭ ಸಂಭವ** = ಸಂಸಾರವೆಂಬ ಸಮುದ್ರಕ್ಕೆ ಅಗಸ್ತ್ಯ. (ಭವ-ಸಂಸಾರ, ವನಧಿ-ಸಮುದ್ರ ಕುಂಭಸಂಭವ-ಅಗಸ್ತ್ಯ ಋಷಿ. ಅಗಸ್ತ್ಯರು ಇಡೀ ಸಮುದ್ರವನ್ನು ಏಕಾಪೋಶನವಾಗಿ ಕುಡಿದರು), **ದೇವರದೇವಾ** = ದೇವತಾ ಸಾರ್ವಭೌಮ (ಸರ್ವೋತ್ತಮ ದೇವತಾ),

**ಅಮಿತಸುಗುಣಧಾಮ** = ಅನಂತಾನಂತ ಮಂಗಳ ಗುಣಗಳಿಗೆ ಧಾಮನು, **ಆತ್ಮಭೂ** = ಆತ್ಮಾನಂದನು (ಸ್ವಾನಂದ ಪರಿಪೂರ್ಣ), **ಪೂರ್ಣ** = ಸರ್ವವಿಧಗಳಲ್ಲಿಯೂ ಪರಿಪೂರ್ಣನು, **ರಾಮಾ** = ಸರ್ವಜೀವರಲ್ಲಿ ರಮಣ (ಕ್ರೀಡೆ) ಮಾಡುವವನು, **ಅಮರಕುಲಲಲಾಮ** = ದೇವತಾವರ್ಗದಲ್ಲಿ ಅತ್ಯಂತ ಶ್ರೇಷ್ಠ (ದೇವೋತ್ತಮನು), **ಅಬ್ಜಧಾಮಾ** = ಕ್ಷೀರಸಮುದ್ರ (ಅಬ್ಜ-ಕ್ಷೀರಸಮುದ್ರ. ಧಾಮ-ಮಂದಿರ), **ಅಭಿರಾಮಾ** = ಸರ್ವಕರ್ತನು, **ಯಮಿಕುಲೋದಧಿ ಸೋಮ** = ಯತಿಗಳಕುಲವೆಂಬ ಸಮುದ್ರಕ್ಕೆ ಚಂದ್ರ ಸದೃಶ್ಯನು. (ವೇದವ್ಯಾಸ-ಕಪಿಲಾವತಾರ ವಿಶೇಷಗಳು), **ಯಜ್ಞಭೃತ್** = ಯಜ್ಞದ ಹವಿಸ್ಸನ್ನ ಸ್ವೀಕರಿಸುವವನು. (ಸರ್ವಸಾರಭೋಕ್ತ), **ಯಜ್ಞನಾಮ** = ಯಜ್ಞನಾಮಕ ಶ್ರೀಹರಿ (ಅವತಾರಗಳಲ್ಲಿ ಒಂದು, **ಸಮರ ವಲಯಭೀಮ** = ಸುತ್ತುವರಿದ ರಣರಂಗದಲ್ಲಿ ಅಮಿತ ಪರಾಕ್ರಮಿ. (ರಣ ಭಯಂಕರ), **ಸಾತ್ವತಾಂ ಸಾರ್ವಭೌಮ** = ದೇವತೆಗಳಿಗೆ (ಸಜ್ಜನರಿಗೆ) ಪ್ರಭುವು (ಚಕ್ರವರ್ತಿ)

**ದಿತಿಜಮರ್ದನ** = ದೈತ್ಯಸಂಹಾರಿ (ದಿತಿಜ-ದಿತೀ ದೇವಿಯ ಪುತ್ರರು ದೈತ್ಯರು), **ಕರ್ಮಸಾಕ್ಷಿಕಾ** = ಜೀವದ ಸರ್ವಕರ್ಮಗಳಿಗೆ ಸಾಕ್ಷಿಯು, **ವಿತತಮಹಿಮಾ** = ಪ್ರಕಟ ಮಹಾಮಹಿಮಾ ಸಂಪನ್ನ (ವಿತತ-ವ್ಯಾಪ್ತವಾದ), **ವಿಶ್ವನಾಟಕ** = ಜಗನ್ನಾಟಕ ಸೂತ್ರಧಾರೀ, **ವಕ್ತ್ರಘೋಟಕಾ** = ಹಯವದನ ಮೂರ್ತಿ (ವಕ್ತ್ರ-ವದನ, ಘೋಟಕಾ-ಕುದುರೆ-ಹಯ), **ರತ್ನ ಕಟಕಾ** = ರತ್ನಖಚಿತವಾದ ನಡುವಟ್ಟಿಯಿಂದ ಶೋಭಿತನಾದವನು, **ನಲಿನ**

**ಜಾಂಡೋದರಾ** = ತನ್ನ ಉದರದಲ್ಲಿಸಕಲ ಬ್ರಹ್ಮಾಂಡಗಳನ್ನು ಧರಿಸಿರುವವನು (ನಳಿನ–ಕಮಲ, ನಳಿನಜ–ಕಮಲಸಂಭವರಾದ ಬ್ರಹ್ಮದೇವರು. ಅಂಡ–ಬ್ರಹ್ಮಾಂಡ), **ಸರ್ವಾಧಾರ** = ಸಕಲ ಜಗತ್ತಿಗೂ ಆಧಾರನು, **ನಿರ್ವಿಕಾರ** = ಅನಾದ್ಯನಂತಕಾಲಕ್ಕೂ ಯಾವ ವಿಕಾರಗಳೂ ಇಲ್ಲದವನು (ಶಶ್ವದೇಕಪ್ರಕಾರನು). **ಪುಣ್ಯಬಟ್ವೆ** = ಪುಣ್ಯದ ಹಾದಿ, **ಜಂಗಮಾಚಾರಾ** = ಜೀವ ಜಡರುಗಳಲ್ಲಿ ವಿಹರಿಸುವವನು. **ದನುಜವನಕುಠಾರ** = ದೈತ್ಯರೆಂಬ ಅರಣ್ಯಕ್ಕೆ ಕೊಡಲಿಯು ಸದೃಶನು. **ಪ್ರಣತಭಯಪರಿಹಾರ** = ಶರಣಾಗತರ ಭಯಪರಿಹಾರಕನು, **ಪ್ರಾಕೃತಾತೀತ** = ಪ್ರಾಕೃತಗುಣಗಳಿಂದ ವಿದೂರನು. **ಸಾರಾ** = ಸರ್ವವಸ್ತು ಗತಸಾರರೂಪನು, **ದಿನಪನಿಭಶರೀರಾ** = ಸೂರ್ಯಕಾಂತಿಯಂತೆ ಹೊಳೆಯುವ ಶರೀರವುಳ್ಳವನು. (ಕೋಟಿ ಸೂರ್ಯಪ್ರಕಾಶ) (ದಿನಪ–ಸೂರ್ಯ, ನಿಭ–ಕಾಂತಿ), **ದುಃಖವಾರಿಹಸಮೀರಾ** = ದುಃಖವೆಂಬ ಮೇಘಗಳಿಗೆ ಗಾಳಿಸದೃಶನು. (ವಾರಿಹ–ನೀರನ್ನು ಧರಿಸಿರುವ ಮೇಘಗಳು ಸಮೀರಾ–ವಾಯು ಅಥವಾ ಗಾಳಿ). ಗಾಳಿ ಬೀಸಿದರೆ ಮೋಡಗಳು ಚದುರುವಂತೆ, ಭಗವದನುಗ್ರಹದಿಂದ ದುಃಖ ನಿವೃತ್ತಿ.

**ವನಧಿ ಬಂಧನ** ದಕ್ಷಿಣ ಸಮುದ್ರಕ್ಕೆ ಸೇತು ನಿರ್ಮಾಣ ಮಾಡಿಸಿದ ಶ್ರೀ ರಾಮ (ವನಧಿ ಸಮುದ್ರ, ಬಂಧನ ಸೇತು ನಿರ್ಮಾಣ), **ವನೌಕನಾಥ** = ವನವಾಸಿಗಳಾದ ಮುನಿ ಋಷಿಗಳಿಗೆ ರಕ್ಷಕನು, **ಜಿತಾಸುರಯೂಥ** = ಅಸುರರ ಸೈನ್ಯವನ್ನು ಗೆದ್ದ ಪರಾಕ್ರಮಿ (ಜಿತ + ಅಸುರ + ಯೂಥ). **ನಿರ್ಮಲ** = ನಿರ್ದೋಷನು, **ಶ್ರುತಿಗಾಥ** = ವೇದಗಳಿಂದ ಸ್ತುತ್ಯನು, **ಮನೋವಾಕಾಯದಿ** = ಮನಸ್ಸು–ವಾಕ್ಕು–ಶರೀರ, ಈ ತ್ರಿಕರಣಗಳಿಂದ, **ನಿನ್ನದುಜೀಯಾ** = ತ್ರಿಕರಣಗಳ ಕಾರ್ಯವೆಲ್ಲವೂ ನಿನ್ನ ಬಿಂಬ ಕ್ರಿಯಾನಾ ನಡೆಯುವುವು.

**ಶಫರ** = ಮೀನು (ಮತ್ಸ್ಯಾವತಾರ), **ಕಮಠ** = ಆಮೆ (ಕೂರ್ಮಾವತಾರ), **ಕೋಲಾ** = ಹಂದಿ (ವರಾಹಾವತಾರ), **ಶತ್ರು ಕಾಶ್ಯಪಿ** = ಹಿರಣ್ಯಕಶಿಪು ಸಂಹಾರಕ ಶ್ರೀ ನರಸಿಂಹ (ಕಾಶ್ಯಪಿ = ಕಶ್ಯಪರ ಸುತನಾದ

ಹಿರಣ್ಯಕಶಿಪು), **ಬಾಲಾ** = ವಟುರೂಪೀ ವಾಮನ, **ನೃಪಕುಲ ಕುಠಾರಧಾರಾ** = ದುಷ್ಟ ಕ್ಷತ್ರಿಯ ಕುಲಕ್ಕೆ ಕುಠಾರಪ್ರಾಯನಾದ ಶ್ರೀ ಪರಶುರಾಮ, **ನೀಲಕಂಠಾಸ್ತ್ರಕಾಲಾ** = ಶಿವಧನುಸ್ಸಿಗೆ ಕಾಲಾಂತಕಸ್ವರೂಪನಾದ ಶ್ರೀರಾಮ (ನೀಲಕಂಠರುದ್ರ, ಅಸ್ತ್ರ—ಜನಕ ಮಹಾರಾಜನು ಸೀತಾಸ್ವಯಂವರದಲ್ಲಿ ಪಣವಾಗಿ ಇಟ್ಟಿದ್ದ ಶಿವಧನಸ್ಸು ಕಾಲ—ಆ ಧನಸ್ಸನ್ನು ಭಂಗಿಸಿದ ಶ್ರೀರಾಮ). **ದ್ರುಪದತನಯಪಾಲ** = ದ್ರೌಪದಿಯ ಮಾನಸಂರಕ್ಷಕನಾದ ಶ್ರೀ ಕೃಷ್ಣ. **ದೂರವರ್ಜಿತ ದುಕೂಲಾ** = ಬಟ್ಟೆಯನ್ನು ದೂರಮಾಡಿ ದಿಗಂಬರನಾಗಿ ನಿಂತ ಶ್ರೀ ಬುದ್ಧರೂಪಿ (ವರ್ಜಿತ ಬಿಡಲ್ಪಟ್ಟ, ದುಕೂಲಾ = **ತಿದಿಸುರ** = ದಿತಿಯ ಪುತ್ರರಾದ ದೈತ್ಯರಿಗೆ ಶತ್ರುವಾದ ಕಲ್ಕಿ, **ರಕ್ತಪದ** ಬಟ್ಟೆ). **ರಿಪು ಭೇದಸಾಲಾ** = ಅಸುರರ ಶಿರವನ್ನು ಚೆಂಡಾಡಿ, ರಕ್ತದ ಸಾಲನ್ನು ಹರಿಸಿದ ವೀರ ಕಲ್ಕಿರೂಪಿ.

**ಕ್ಷೇತ್ರಜ್ಞ** = ಸ್ಥೂಲ ದೇಹಸ್ಥಿತ ಮತ್ತು ಸ್ವರೂಪ ದೇಹಾಂತರ್ಯಾಮಿ ರೂಪ, **ಕ್ಷೇತ್ರನಾಮಕ** = ದೇಹಿಯಾದ ಜೀವನ ನಾಮವುಳ್ಳವನು, **ಕ್ಷೀರಾಬ್ಧಿ ನಿಜಾಗಾರ** = ಕ್ಷೀರಸಮುದ್ರವನ್ನು ತನ್ನ ನಿವಾಸಸ್ಥಾನವಾಗಿ ಉಳ್ಳ, **ಓಂಕಾರ** = ಪ್ರಣವ ಪ್ರತಿಪಾದ್ಯನು (ಪ್ರಣವಸ್ವರೂಪಿ), **ಮಾತೃ ಪ್ರತಿಪಾದ್ಯ ಸ್ವರೂಪ** = ಮಾತೃಕಾನ್ಯಾಸ ಪ್ರತಿಪಾದ್ಯನು (ಮಾತೃಕಾ—ಎಂದರೆ ಅಕಾರಾದಿ ಕ್ಷಕಾರಪರ್ಯಂತ ೫೧ ವರ್ಣಗಳ ವಾಚ್ಯರೂಪನು. ಅಜಾದಿ ನರಸಿಂಹ ಪರ್ಯಂತ ವರ್ಣವಾಚ್ಯ ರೂಪಗಳು), **ವರ್ಜೀತಪಾಪ** = ಸರ್ವಪಾಪವಿದೂರ, **ಪ್ರಿಯಾಜಾಮಿ** = ಅಜಾಮಿಳವರದನು, **ಭಕ್ತಗೊಲಿದು** = ಭಕ್ತನಾದ ಪಾರ್ಥನಿಗೆ ಒಲಿದು. ತನ್ನ ವಿಶ್ವರೂಪ ತೋರಿಸಿದ ಶ್ರೀಕೃಷ್ಣ, **ಚಾಪವಾಕೊಟ್ಟು** = ಶಾರ್ಙ್ಗ ಎಂಬ ಧನುಸ್ಸು.

**ನಗಧರ** = ಮಂದರಗಿರಿಯನ್ನು ತನ್ನ ಬೆನ್ನಿನ ಮೇಲೆ ಹೊತ್ತ ಕೂರ್ಮ ಗೋವರ್ಧನಗಿರಿಯನ್ನು ಎತ್ತಿ ಸಕಲ ಗೋ ಗೋಪಾಲಕರನ್ನು ಸಂರಕ್ಷಿಸಿದ ಶ್ರೀಕೃಷ್ಣ, **ನಳಿನಾಕ್ಷ** = ಕಮಲಪುಷ್ಪದ ದಳಗಳಂತೆ ವಿಶಾಲವಾದ ನೇತ್ರವುಳ್ಳವನು, **ನಾಕನಾಥಾದ್ಯಪಕ್ಷ** ಇಂದ್ರ ಮತ್ತು ದೇವತೆಗಳ ಪಕ್ಷನು

(ಶಾಕನಾಥ—ಸ್ವರ್ಗಾಧಿಪತಿ ಇಂದ್ರ), **ಶ್ರೀಪಾ** = ಲಕ್ಷ್ಮೀಪತಿ, **ಭೃಗು ಮುನಿಗೇಯಾ** = ಭೃಗುಋಷಿಗಳಿಂದ ಗೇಗೀಯಮಾನನು, **ಭೂತನಾಥ ಸಹಾಯಾ** = ರುದ್ರದೇವರಿಗೆ ಮಿತ್ರನು (ಭೂತನಾಥ-ಪ್ರಮಥ ಗಣಗಳಿಗೆ ಪ್ರಭುವಾದ ಶ್ರೀ ರುದ್ರದೇವರು)

**ರಜನೀಶ** = ಚಂದ್ರ, **ಬಿಂಬವನಿಳುಹಿದ** = ರಾಮನು ಬಾಲ್ಯದಲ್ಲಿ ಕನ್ನಡಿಯಲ್ಲಿ ಚಂದ್ರ ಬಿಂಬ ದರ್ಶನ ಮಾಡಿದ ಪ್ರಸಂಗ, **ಅಹಿತರನುಳುಹಿನು** = ಸೋದರಮಾವನಾದ ಕಂಸನಿಂದ ಪ್ರೇರಿಕ್ಷಿತರಾಗಿ ಬಂದ ಪೂತನಿ, ಶಕಟಾ, ಇತ್ಯಾದಿ ದೈತ್ಯರನ್ನು ಕೊಂದ ಶ್ರೀ ಕೃಷ್ಣ, **ದ್ವಿಜನ** = ಪುತ್ರರನ್ನು ಕಳೆದುಕೊಂಡ ವಿಪ್ರನ ದುಃಖವನ್ನು ಪರಿಹರಿಸಿದ ಶ್ರೀ ಕೃಷ್ಣ, **ಭುಜಗಮಾರ್ಗಣ** = ಸರ್ಪಾಸ್ತ್ರ (ಭುಜಗ-ಸರ್ಪ, ಮಾರ್ಗಣ-ಬಾಣ), **ರವಿನಂದನಾಬಿಡ** = ಸೂರ್ಯಪುತ್ರನಾದ ಕರ್ಣನು ಅರ್ಜುನನ ಮೇಲೆ ಪ್ರಯೋಗಿಸಲು, **ಶಂದನಾ ವತ್ತಿ** = ಅರ್ಜುನನ ರಥವನ್ನು ತನ್ನ ಕಾಲುಬೆರಳಿನಿಂದ ಕೆಳಕ್ಕೆ ಒತ್ತಿ, **ಕುಂತಿ ನಂದನಾ** = ಕುಂತಿ ಪುತ್ರನಾದ ಅರ್ಜುನನನ್ನು ಸಂರಕ್ಷಿಸಿದ ಪ್ರಸಂಗ. **ಬಾಣನ ತೋಳು** = ಯುದ್ಧದಲ್ಲಿ ಬಾಣಾಸುರನ ತೋಳುಗಳನ್ನು ಕತ್ತರಿಸಿ, ರುದ್ರ ದೇವರ ಪ್ರಾರ್ಥನೆಯಂತೆ ಅವನನ್ನು ಸಂರಕ್ಷಿಸಿದ ಪ್ರಸಂಗ,

**ಶುಭತಮ** = ಶ್ರೇಷ್ಠರಾದ (ಸತ್ತ್ವಪ್ರಚುರದೇಹಿಗಳಾದ), **ಸುಖ ತೀರ್ಥಾರಾಧ್ಯ** = ಆನಂದತೀರ್ಥನಾಮಕರಾದ ಮಧ್ವಮುನಿಗಳಿಂದ ಆರಾಧಿ ಸಲ್ಪಟ್ಟ **ಸದ್ಧಾನಪಾತ್ರ** = ವನದಲ್ಲಿ ಋಷಿಪತ್ನಿಯರು ಶ್ರೀಕೃಷ್ಣನಿಗೆ ಭಕ್ಷ್ಯ ಭೋಜ್ಯಗಳನ್ನಿತ್ತು ಸೇವಿಸಿದ ಪ್ರಸಂಗ, **ಇಭವರರಿಪು ಹತಾನ** = ಗಜೇಂದ್ರ ನನ್ನು ಮಡುವಿನಲ್ಲಿ ಎಳೆದ ನಕ್ರಕನನ್ನು ತನ್ನ ಚಕ್ರದಿಂದ ಸೀಳಿದ ಗಜಪಾಲಕ, **ತವಪದಾಂಭೋಜಾತಯುಗ್ಮ** = ನಿನ್ನ ಪಾದ ಕಮಲದ್ವಯಗಳು, **ನಭಧನುಪಿತ** = ಕಾಮಜನಕ (ನಭಧನು-ಆಕಾಶದಲ್ಲಿ ಮೂಡುವ ಕಾಮನ ಚಾಪಾ), **ನಿಶ್ಚಲ** = ಶಾಶ್ವತನು-ಅಚ್ಯುತನು.

**ವಸುಪತಿಸುತ** = ವಸುದೇವನ ಪುತ್ರ ಶ್ರೀಕೃಷ್ಣ, **ತರುಜನ್ಮ ವಿದೂರ** = ಶಾಪಗ್ರಸ್ತರಾಗಿ ಮರಗಳಾಗಿ ಬೆಳೆದಿದ್ದ ನಳಕೂಬರ ಮತ್ತು ಮಣಿ

ಗ್ರೀವರಿಗೆ ಶಾಪವಿಮೋಚನೆ ಗೈದ ಶ್ರೀಕೃಷ್ಣ, **ನಿರ್ಗುಣ** = ಸತ್ವಾದಿ ಪ್ರಾಕೃತ ಗುಣವಿದೂರ, **ನಿರಂಜನಾ** = ಸಮಸ್ತ ದೋಷವಿದೂರನು, **ಬಿಸಜಜಾಂಡವ** = ಬ್ರಹ್ಮಾಂಡವನ್ನು ತನ್ನ ಪುಟ್ಟ ಬಾಯಿಯಲ್ಲಿ ಯಶೋದೆಗೆ ತೋರಿಸಿದ ಪುಟ್ಟ ಬಾಲಕ ಕೃಷ್ಣ, **ಅತಿವಿಮಲಗಾತ್ರ** = ಅತ್ಯಂತ ಶುದ್ಧವಾದ, ಜ್ಞಾನಾ ನಂದಮಯವಾದ ದೇಹವುಳ್ಳವನು **ವ್ರತತಿಜದಳನೇತ್ರ** = ಕಮಲದಳ ದಂತೆ ನೇತ್ರವುಳ್ಳವ (ವ್ರತತಿ–ಬಳ್ಳಿ, ವ್ರತತಿಜ–ಬಳ್ಳಿಯಲ್ಲಿ ಬೆಳೆದ ಹೂವು) **ವೃತ್ರಹಾದ್ಯಮರಮಿತ್ರಾ** = ಇಂದ್ರಾದಿ ದೇವತೆಗಳಿಗೆ ಮಿತ್ರನಾದವನು (ವೃತ್ರಹಾ= ವೃತ್ರಾಸುರ ಸಂಹಾರಕನಾದ ಇಂದ್ರ), **ಶ್ರುತಿ** = ವೇದಾಭಿಮಾನಿ ಯಾದ ಲಕ್ಷ್ಮೀದೇವಿ,

**ಕಮಲಜ** = ಪರಮಾತ್ಮನ ನಾಭೀಕಮಲಸಂಜಾತನಾದ ಶ್ರೀಬ್ರಹ್ಮ ದೇವರು, **ಸೂತ್ರಾ** = ಸೂತ್ರನಾಮಕರಾದ ವಾಯುದೇವರು. ಇವರುಗಳಿಂದ ಸಂಸ್ತುತ್ಯಮಾನನು, **ಪಾವನ ಪವಿತ್ರಾ** = ಪರಮಪವಿತ್ರನಾದ ನಿರ್ದೋಷ ವಸ್ತು, **ಪ್ರತಿಹಯ** = ಪ್ರತಿರೋಧವಿಲ್ಲದಂಥ, **ಲಕ್ಷ್ಮೀಕಳತ್ರ** = ರಮಾ ಪತಿಯು.

**ಏಳು ಘೂಳಿಗಳ ಗದ್ದ** = ರುದ್ರದೇವರಿಂದ ವರಪಡೆದ ಏಳು ಮಂದಿ ದೈತ್ಯರು ಉನ್ಮತ್ತವಾದ ಗೂಳಿಗಳ ರೂಪದಲ್ಲಿ ಮದೋನ್ಮತ್ತರಾಗಿ ಸಜ್ಜನ ರನ್ನು ಹಿಂಸಿಸುತ್ತಿದ್ದರು. ನೀಲಾದೇವಿಯ ತಂದೆಯಾದ ನಗ್ನಜಿತರಾಯನು ಆ ಏಳು ಗೂಳಿಗಳನ್ನು ಯಾರು ಬಂಧಿಸುವರೋ, ಅವರಿಗೆ ನನ್ನ ಪುತ್ರಿಯನ್ನು ಲಗ್ನ ಮಾಡಿಕೊಡುವುದಾಗಿ ಸ್ವಯಂವರವನ್ನು ಏರ್ಪಡಿಸಿದನು. ಶ್ರೀಕೃಷ್ಣನು ಲೀಲಾಜಾಲವಾಗಿ ಆ ಏಳು ಗೂಳಿಗಳನ್ನು ಬಂಧಿಸಿ ಕಟ್ಟಿದನು. ನಂತರ ನೀಲಾ ದೇವಿಯನ್ನು ಲಗ್ನವಾದನು. ನೀಲಾದೇವಿಯು ಶ್ರೀ ಕೃಷ್ಣನ ಷಣ್ಮಹಿಷಿಯರಲ್ಲಿ ಒಬ್ಬಳು.

**ಯದುಪತಿ** = ಯದುಕುಲ ನಾಯಕ ಶ್ರೀಕೃಷ್ಣ, **ಸುಪರಂಜ್ಯೋತಿ** = ಸ್ವರೂಪ ಪ್ರಕಾಶವುಳ್ಳವನು, **ಆನಂದಾಬ್ಧಿ** = ಆನಂದದ ಸಮುದ್ರ, **ಕೇಳುಮಾನವ** = ನಾನು ಹುಲು ಮಾನವ, **ನಿರುತ ಆಪನ್ನ ಜನ**

**ಕ್ಲೇಶ ಭಂಜನಾ** = ನಿನಗೆ ಶರಣಾಗತರಾದವರನ್ನು ಸದಾ ಸಂರಕ್ಷಿಸಿ ಅವರ ದುಃಖವನ್ನು ಪರಿಹರಿಸುವ, **ನರವೇಷಾ** = ಲೀಲಾಮಾನುಷವಿಗ್ರಹ ರಾಮ ಕೃಷ್ಣಾವತಾರಗಳಲ್ಲಿ ಮಾನವರಂತೆ ನಟಿಸಿದ ವಿಡಂಬನಮೂರ್ತಿ, **ಮಂಜುಳ ಭಾಷಾ** = ಮೃದುಮಧುರಭಾಷಿ.

**ವನರುಹಭವ ತಾತಾ** = ಬ್ರಹ್ಮಜನಕನು (ವನರುಹ–ನಾಭೀಕಮಲ ಸಂಜಾತನಾದ ಬ್ರಹ್ಮ, ತಾತಾ = ಜನಕನು), **ನೀತ ತನ್ಮಾತ್ರಭೂತ** = ಪಂಚಭೂತಗಳು, ಅವುಗಳ ಧರ್ಮಗಳಾದ ತನ್ಮಾತ್ರೆಗಳಿಂದ ಅತ್ಯಂತಭಿನ್ನನು, ಗುಣಾಗುಣಗಳಲ್ಲಿದ್ದರೂ, ಅವುಗಳಿಂದ ಅತ್ಯಂತ ವಿಲಕ್ಷಣನು, **ದ್ಯುನದಿ** = ಗಂಗಾನದಿ, **ಪಾದಾಂಬುಜಾತಾ** = ತ್ರಿವಿಕ್ರಮಾವತಾರದಲ್ಲಿ ಶ್ರೀಹರಿಯ ಎಡದ ಪಾದಾಂಗುಷ್ಠದಿಂದ ಉದ್ಭವಿಸಿದ ಗಂಗಾ– (ಹರಿಯಪಾದೋದ್ಭವೆ) **ಜಲವಿಧೂತದಿವ್ಯ** = ಗಂಗಾನದಿಯ ನೀರಿನಿಂದ ತೊಳೆಯಲ್ಪಟ್ಟ ಪಾದಪದ್ಮ ವುಳ್ಳವನು. (ವಿಧೂತ–ತೊಳೆಯಲ್ಪಟ್ಟ, ಬ್ರಹ್ಮದೇವರು ತ್ರಿವಿಕ್ರಮನ ಪಾದ ವನ್ನು ಗಂಗಾಜಲದಿಂದ ತೊಳೆದರು) **ಅನಿಲತನಯ ಪ್ರೀತಾ** = ವಾಯು ಸುತನಾದ ಶ್ರೀಹನುಮಂತನಿಗೆ ಅತ್ಯಂತ ಪ್ರೀತಿಯ ವಸ್ತು, **ಅತ್ರಿಸದ್ವಂಶ ಜಾತಾ** = ಅತ್ರಿ ಋಷಿಗಳಿಗೆ ಮಗನಾಗಿ ಪ್ರಕಟನಾದ ದತ್ತಾತ್ರೇಯರೂಪೀ, **ಅನಿಮಿಷಜಯಸೂತಾ** = ದೇವತೆಗಳ ಗೆಲುವಿಗೆ ಮುಖ್ಯ ಕಾರಣನು, **ಅನತಾಷ್ಟಪ್ರದಾತಾ** = ಶರಣಾಗತರಾದವರ ಮನೋಭಿಲಾಷೆಗಳನ್ನು ಸಲ್ಲಿ ಸುವವನು.

**ಕರದಂಡಧರ** = ಕೈಯಲ್ಲಿ ಗದೆಯನ್ನು ಹಿಡಿದಿರುವವನು. ದಂಡ– ಎಂದರೆ ಕಡಿಗೋಲು. ಅದನ್ನು ಧರಿಸಿದ ಶ್ರೀಕೃಷ್ಣ ಎಂತಲೂ ಅರ್ಥೈಯಿಸ ಬಹುದು, **ಕಟಿಸ್ಥಿತಪಾಣಿ** = ಪಾಂಡುರಂಗನು ತನ್ನ ಎರಡು ಕರಗಳನ್ನು ಸೊಂಟದ ಮೇಲೆ ಇಟ್ಟುಕೊಂಡು ನಿಂತಿದ್ದಾನೆ, **ಮಂಗಳ ಶ್ರೇಣಿ** = ಶುಭ ನಾಮಗುಣ ಸಂಪನ್ನನು, **ಲೋಕೈಕ ಸತ್ರಾಣಿ** = ಲೋಕದ ಜನರಿಗೆಲ್ಲಾ

ಸತ್ಯಾಪ್ರದನಾದ ಏಕೈಕ ಸಮರ್ಥನು, **ಛಲಡಂಕಾ** = ನಿನ್ನಲ್ಲಿ ಛಲಮಾಡಿದ ಕಾಳಿಂಗನ ಬಿಂಕವನ್ನು ಮುರಿದೆ, **ಮುರೆ........ಹಿಂಸಾ** = ಮುರಾ ಎಂಬ ದೈತ್ಯ, ಚೇದಿರಾಜನಾದ ಶಿಶುಪಾಲ, ಧೇನುಕಾಸುರ, ಹಂಸ ಎಂಬ ಅಸುರ, ಪತ್ನಾಸುರ, ಸೋದರಮಾವನಾದ ಕಂಸಾಸುರ, ದಂತವಕ್ರ ಇತ್ಯಾದಿ ದೈತ್ಯರನ್ನು ಕೊಂದು, ಅವರಿಂದ ಉಂಟಾಗುತ್ತಿದ್ದ ಉಪಟಳವನ್ನು ಪರಿಹರಿಸಿದ ಶ್ರೀಕೃಷ್ಣ, **ಧಾರಿಣಿಷ್ಟಾ** = ಭೂಮಿಯ ಮೇಲಿನ ಸುಜನರಿಗೆ ಇಷ್ಟಪ್ರದನಾದ **ಓಜಿಷ್ಠಾ** = ಸರ್ವ ಶ್ರೇಷ್ಟನಾದವನು.

**ಹನುಮನತಪಾದಾಬ್ಧ** = ಹನುಮತ್ಸೇವಿತ ಪಾದಾರವಿಂದಗಳುಳ್ಳವನು, **ಕುಬ್ಜಾ ಕನುವಿಕೃತಿವಿನಾಶಂ** = ಕುಬ್ಜೆಯುವಿಕಾರವಾದ ದೇಹವನ್ನು ತನ್ನ ಕರಸ್ಪರ್ಶದಿಂದ ತಿದ್ದಿ, ಸುಂದರ ಸ್ತ್ರೀಯನ್ನಾಗಿಸಿದ ಶ್ರೀಕೃಷ್ಣ, **ಕಾಳಿಜಿಹ್ವಾಶುದೇಶಂ** = ದುರ್ಗಿಯಾಗಿ ಬಂದಿದ್ದ ಲಕ್ಷ್ಮಿಯು ಮಾತಿನಂತೆ ವಸುದೇವನಿಂದ ಗೋಕುಲಕ್ಕೆ ತರಲ್ಪಟ್ಟು, ಅಲ್ಲಿ ನಂದಗೋಪನ ಸಾಕುಪುತ್ರನಾಗಿ ವಿರಾಜಮಾನನಾದ ಶ್ರೀಕೃಷ್ಣ, **ದನುಜದಿವಿಕರಾಳ** = ದೈತ್ಯರಪಾಲಿಗೆ ಮೃತ್ಯುಸ್ವರೂಪನು **ಮತ್ತ ಪೌಂಡ್ರ ಶೃಗಾಲ** = ಮದೋನ್ಮತ್ತರಾಗಿದ್ದ ಪೌಂಡ್ರಕವಾಸುದೇವ ಮತ್ತು ಶೃಗಾಲವಾಸುದೇವರನ್ನು ಹನನ ಮಾಡಿದ ಶ್ರೀಕೃಷ್ಣ, **ಹೈಮ ಗರ್ಭಾಂಡ ವಂದ್ಯಂ** = ಹಿರಣ್ಯಗರ್ಭನಾಮಕರಾದ ಬ್ರಹ್ಮದೇವರಿಂದ ವಂದ್ಯನು.

**ಇಟ್ಟಿಗೆಪೀಠ ಸಂಸ್ಥಿತ** = ಪಂಢರಾಪುರದಲ್ಲಿ ಪಾಂಡುರಂಗನು ಇಟ್ಟಿಗೆಯು ಮೇಲೆ ನಿಂತಿದ್ದಾನೆ. ಈ ಇಟ್ಟಿಗೆಯು ರೂಪದಲ್ಲಿ ಇಂದ್ರ ಮತ್ತು ರಾಮು ಇಬ್ಬರೂ ಸ್ವಾಮಿಯನ್ನು ಸೇವಿಸುತ್ತಿದ್ದಾರೆ, **ಸುಪದ** = ಮುಕ್ತಿಸ್ಥಾನ, **ಅನಿಮಿಷತರು** = ದೇವತೆಗಳ ಪಾಲಿಗೆ ಕಲ್ಪವೃಕ್ಷಸದೃಶನು (ಅನಿಮಿಷ = ರೆಪ್ಪೆಯಿಲ್ಲದ ದೇವತೆಗಳು, ತರು = ಕಲ್ಪವೃಕ್ಷ) **ಚಾರುಮೂರುತಿ** = ಸುಂದರವಾದ ಮಂಗಳ ವಿಗ್ರಹ, **ವೃಂದಾರಕಕರರಸಾ** = ದೇವತೆಗಳ ಮಹಾ ಪ್ರಭು **ಸಂತತಲೇಸಾ** = ಅನುಗ್ರಹವನ್ನು ನಿರಂತರ ಕೊಡುವವನಾಗು ಎಂದು ಪ್ರಾರ್ಥಿಸಿದ್ದಾರೆ.

೩

## (ಪ್ರಾಣೇಶವಿಠ್ಠಲಾಂಕಿತ)

ರಾಗ–ಭೈರವಿ ತ್ರಿಪುಟತಾಳ

ಜಯ ಪಾಂಡುರಂಗ ಹೋ–ಜಲದನಿಭಾಂಗ ।
ಹೋ ಜಗದಂತರಂಗ ಹೋ–ಜಯ ಪಾಂಡುರಂಗ ಹೋ ॥
॥ಪ॥

ನೀಲಭೂಧರವಾಸ–ಕೌಸ್ತುಭಭೂಷ
ರಮೆಯಾಧೀಶ–ಸುಮಾನಸಪಾಲ–ಗುಣಗಂಭೀರ
ನವನೀತ ಚೋರ–ಕುಜನಕುಠಾರ–ನರಹರಿ ।

ಫಾಲಲೋಚನ ಬಂಧು–ದೈತ್ಯನ ಕೊಂದು
ವೇದವ ತಂದು–ದ್ರುಹಿಣಗೆ ಮೇಲುಕರುಣದಲ್ಲಿತ್ತ
ಮಂದರಪೊತ್ತ–ಸುಂದರಮೂರ್ತಿ–ಜಯ ॥ ॥೧॥

ನಿಗಮವಂದಿತ ರಾಮ–ಹರಿಪೂರ್ಣಕಾಮ–
ಸದ್ಗುಣಧಾಮ–ವಾಮನ–ವಾಗನವಾಗಿಲಿಪುಟ್ಟಿ
ಹೇಮಾಕ್ಷನಕುಟ್ಟಿ–ಅವನಿತಂದಿಟ್ಟಿ– ಈ ಕೇಳು
ಜಗದಿಪೂಜಿತನಾದಿ–ಕೈಟಭ ಭೇದಿ–ಇಭವನಕಾಯ್ದ ।

ಪ್ರಣವತರ ಅಘವನೋಡಿಸುತಿಪ್ಪ–ಹಲಾಯುಧ ತಪ್ಪ
ಮನ್ಮಥನ ಅಪ್ಪ–ಜಯ ಪಾಂಡುರಂಗ ॥ ॥೨॥

ವೇದವಿಸ್ತರಮಾಡ್ದ–ದಾನವ ಬೇಡ್ದ–
ದನುಜನೀಗ್ಯೋಡ್ದೀ–ಕುರುಕುಲಸೂದನ
ಕಿರೀಟಿಸೂತ–ಪವಮಾನತಾತ–ದುರ್ಬಲನಾಥ ಎನ್ನನು
ಆದರದಿ ಕೈಪಿಡಿಯೋ–ದುರಿತವ ತಡೆಯೋ ॥

ದುರ್ಮತಿ ಕಡಿಯೋ-ಅಗಣಿತಮೋದ
**ಪ್ರಾಣೇಶವಿಠ್ಠಲ**-ನರಮೃಗ ನಿಟಿಲನೇತ್ರ-ಅಕುಟಿಲ ಜಯ ॥
॥೩॥



**ಅರ್ಥವಿವರಣೆ :**

**ಲಿಂಗಸುಗೂರಿನ** ಪ್ರಾಣೇಶವಿಠ್ಠಲಾಂಕಿತ ಯೋಗೀಂದ್ರದಾಸವರ್ಯರು ಶ್ರೀಜಗನ್ನಾಥದಾಸವರೇಣ್ಯರ ಪ್ರಥಮ ಶಿಷ್ಯರು.

ಪ್ರಸಕ್ತ ಕೀರ್ತನ ಸಾಹಿತ್ಯದಲ್ಲಿ ಪಾಂಡುರಂಗನ ಮಹಾಮಹಿಮೆಗಳನ್ನು ವಿವರಿಸಿರುತ್ತಾರೆ. **ಜಯ**= ನಮಗೆ ಜಯವನ್ನುಂಟುಮಾಡು. ಮಂಗಳ ಪ್ರದನಾಗು, **ಜಲದ ನಿಭಾಂಗ**= ನೀಲ ಮೇಘಶ್ಯಾಮನು (ಜಲದ= ನೀರನ್ನು ಸುರಿಸುವ ಮೇಘಗಳು. ನಿಭ= ಕಾಂತಿ, ಅಂಗ= ದೇಹ), **ಹೋ**= ಎಲೈ ಸ್ವಾಮಿಯೇ ! ಎಂಬ ಉದ್ಗಾರ, **ಜಗದಂತರಂಗ**= ಚರಾ ಚರಾತ್ಮಕವಾದ ಜಗತ್ತಿನಲ್ಲಿ ಪರಿಪೂರ್ಣವಾಗಿ ವ್ಯಾಪಿಸಿ, ಅಂತಸ್ಥನಾಗಿರುವವನು **ನೀಲಭೂಧರವಾಸ** = ನೀಲಪರ್ವತವೆನಿಸಿದ ಹಿಮಾಲಯ ದುರ್ಗಮ ಪರ್ವತಗಳಲ್ಲಿ ಬದರೀಆಶ್ರಮವಾಸಿಯು (ನೀಲ-ನೀಲವಾದ ಆಕಾಶವನ್ನು ಇರಿಯುವಂತೆ ಅತ್ಯುನ್ನತವಾದ ಭೂಧರ= ಪರ್ವತ), **ಕೌಸ್ತುಭಭೂಷ** = ಶ್ರೀಹರಿಯ ಕಂಠದಲ್ಲಿ ಕೌಸ್ತುಭಮಣಿಯ ರೂಪದಲ್ಲಿ ಬ್ರಹ್ಮದೇವರು ಸೇವಿಸುತ್ತಿರುವವರು, **ರಮಯೂಧೀಶ**= ಲಕ್ಷ್ಮೀಪತಿ, **ಸುಮನಸಪಾಲ**= ದೇವತೆಗಳ ರಕ್ಷಕನು, **ಕುಜನಕುಠಾರ** = ದುರ್ಜನರಪಾಲಿಗೆ ಕುಠಾರ ಸದೃಶನು, **ಫಾಲಲೋಚನ ಬಂಧು** = ಫಣೆಗಣ್ಣನಾದ ರುದ್ರದೇವರ ಮಿತ್ರ, **ದೈತ್ಯನ ಕೊಂದು**= ಸಮುದ್ರ ಗರ್ಭವನ್ನು ಹೊಕ್ಕು ವೇದ ಚೋರನಾದ ತಮನೆಂಬ (ಸೋಮಕ) ದೈತ್ಯನನ್ನು ಸಂಹರಿಸಿ, ವೇದಗಳನ್ನು ತಂದು ಬ್ರಹ್ಮನಿಗೆ ಇತ್ತ ಮತ್ಸ್ಯಾವತಾರೀ, **ದ್ರುಹಿಣಗ**= ಬ್ರಹ್ಮನಿಗೆ, **ಮಂದರ ಪೊತ್ತ**= ಸಮುದ್ರ ಮಥನಕಾಲದಲ್ಲಿ ಮಂದರಗಿರಿಯನ್ನು ಹೊತ್ತ ಕೂರ್ಮ.

**ನಿಗಮವಂದಿತ** = ಸದಾ ನಿಗಮಪ್ರತಿಪಾದ್ಯನು, **ರಾಮ** = ಸರ್ವರ ಮನಸ್ಸನ್ನೂ ಆನಂದಿಸುವವನು, **ಪೂರ್ಣಕಾಮ** = ನಿತ್ಯತೃಪ್ತ–ಪೂರ್ಣಾನಂದಮಯನು, **ಷಡ್ಗುಣಧಾಮ** = ಅನಂತ ಕಲ್ಯಾಣ ಗುಣಗಳ ಪರಿಪೂರ್ಣನು, **ವಾಮನ** = ಪರಮಸುಂದರ ಮೂರ್ತಿ, **ವಂಗೆನ ಮೂಗಿಲಿ ಪುಟ್ಟಿ** = ಬ್ರಹ್ಮದೇವರ ಮೂಗಿನಿಂದ ಹೊರಬಿದ್ದ ಶ್ರೀವರಹಾರೂಪಿ. **ಹೇಮಾಕ್ಷನ ಕುಟ್ಟಿ** = ದೈತ್ಯನಾದ ಹಿರಣ್ಯಾಕ್ಷನನ್ನು ವರಹಾರೂಪದಿಂದ ಸಂಹರಿಸಿ. **ಅವನಿತಂದಿಟ್ಟೆ** = ಭೂಮಿಯನ್ನು ಮೇಲಕ್ಕೆ ತಂದು ಉದ್ಧರಿಸಿದ, **ಈ ಕೀಳುಜಗದಿ** = ಕಾಳಲೋಕಗಳಿಂದ ಮುಕ್ತವಾದ ಬ್ರಹ್ಮಾಂಡದಲ್ಲಿ ಈರೇ (೨X೭ = ೧೪), **ಕೈಟಭಭೇದಿ** = ಕೈಟಭಾಸುರ ಸಂಹಾರಿ, **ಇಭಪನ** = ಗಜೇಂದ್ರನನ್ನು ಸಂರಕ್ಷಿಸಿದ ಕರಿವರದನು (ಇಭ–ಆನೆ, ಇಭಪ = ಗಜೇಂದ್ರ), **ಹಲಾಯುಧತಲ್ಪ** ಶೇಷಶಯನನು. ಇಲ್ಲಿ ಶಬ್ದ ಪ್ರಯೋಗದ ಚಮತ್ಕಾರವನ್ನು ಗಮನಿಸಬೇಕು. ಹಲಾಯುಧ–ನೇಗಿಲನ್ನು ಆಯುಧವನ್ನಾಗಿ ಉಳ್ಳ ಬಲರಾಮ, ಬಲರಾಮನು ಶೇಷಾವತಾರಿ.

**ವೇದ ವಿಸ್ತರ ಮಾಡ್ದ** = ಅನಂತ ಸಂಖ್ಯಾಕವಾದ ವೇದರಾಶಿಗಳನ್ನು ನಾಲ್ಕು ಭಾಗಗಳಾಗಿ ವಿಭಾಗಿಸಿ, ಪ್ರಚಾರ ಮಾಡಿದ ಶ್ರೀ ವೇದವ್ಯಾಸರು. **ದಾನವ ಬೇಡ್ದೀ** = ಬಲಿಯನ್ನು ಯಾಚಿಸಿದ ಶ್ರೀವಾಮನ, **ದನುಜನಿಗ್ಯೋಡ್ಡಿ** = ದುರುಳ ದೈತ್ಯನಾಗಿದ್ದ ಜರಾಸಂಧನಿಗೆ ಹೆದರಿದಂತೆ ವಿಡಂಬನ ತೋರಿ ಅನೇಕಾವರ್ತಿ ಓಡಿ ಬಂದ ಶ್ರೀ ಕೃಷ್ಣ. (ಭೀಮಸೇನದೇವರಿಂದ ಅವನ ಸಂಹಾರವೆಂಬುದು ಶ್ರೀ ಹರಿ ಚಿತ್ತ), **ಕುರುಕುಲಸೂದನ** = ಕುರು ವಂಶವನ್ನು ನಾಶಮಾಡಿದ ಶ್ರೀ ಕೃಷ್ಣ, **ಕಿರೀಟಿಸೂತ** = ಅರ್ಜುನನ ಸಾರಥಿ (ಕಿರೀಟಿ–ಎಂಬುದು ಅರ್ಜುನನ ದಶನಾಮಗಳಲ್ಲಿ ಒಂದು), **ಪವಮಾನ ತಾತಾ** = ವಾಯುದೇವರ ತಂದೆ (ಸಂಕರ್ಷಣನಿಂದ ಜಯಾದೇವಿಯಲ್ಲಿ ಸೂತ್ರ ನಾಮಕ ವಾಯು ದೇವರ ಉತ್ಪತ್ತಿ), **ಅಗಣಿತಮೋದ** = ಅಸದೃಶ ಅಪಾರ ಆನಂದಮಯನು, **ನರಮೃಗ** = ನರಸಿಂಹಾವತಾರೀ, **ನಿಟಿಲನೇತ್ರ** = ಶ್ರೀ ನರಸಿಂಹನಿಗೆ ತ್ರಿನೇತ್ರಗಳು. (ಶ್ರೀ ರುದ್ರದೇವರು ನರಸಿಂಹನ ಪ್ರತಿ

ಬಿಂಬರಾದ್ದರಿಂದ ರುದ್ರರೂ ನಿಟಿಲನೇತ್ರರು, ತ್ರಿನೇತ್ರರು), **ಅಕುಟಿಲ**= ಸಮಸ್ತ ದೋಷವಿದೂರ.



೭

**(ಜಗನ್ನಾಥವಿಠ್ಠಲಾಂಕಿತ)**

**ರಾಗ–ಸಾರಂಗ** **ತ್ರಿಪುಟತಾಳ**

ಎಂದು ಕಾಂಬೆನೋ ಪಾಂಡುರಂಗ ಮೂರುತಿಯಾ
ಇಂದು ಭಾಗ ನಿವಾಸ ನರನ ಸಾರಥಿಯ ॥ ॥ಪ॥

ಅರುಣಾಬ್ಜೋಪಮ ಚಾರು ಚರಣಾಂಗುಲಿ ನಖರ
ತರುಣೇಂದು ಛವಿ ತಿರಸ್ಕರಿಸುವ ಪ್ರಖರ
ಕಿರುಗೆಜ್ಜೆ ಕಡಗ ನೂಪುರ ಪೆಂಡೆ ಕಫರ
ತೆರಜಾನು ಜಂಘೆ ಭಾಸ್ಕರ ರತ್ನ ಮುಕುರ ॥೧॥

ಶಂಭಾ ಪೋಲುವ ಊರು ಪೊಂಬಣ್ಣಾಂಬರವ
ಕುಂಭೀ ಮಸ್ತಕದೊಲ್ ನಿತಂಬದಿ ಪೊಳೆವ
ಕಂಬು ಮೇಖಳಕಂಜ ಗಂಭೀರನಾಭೀ
ಅಂಬುಧಿಶಾಯಿ ವಿಧಿ ಶಂಭು ಪೂಜಿತನ ॥ ॥೨॥

ಲವಕುಕ್ಷಿತ್ರಿವಳಿ ಭಾರ್ಗವಿ ವಕ್ಷ ಉರವು
ದ್ರವಿಪೋಲುವ ಕೌಸ್ತುಭ ವೈಜಯಂತಿಯು
ಸುವಿಶಾಲ ವಕ್ಷದೋಳ್ ವಿವಿಧಹಾರಗಳು
ನವನೀತಚೋರ ಶ್ರೀ ವನಮಾನ ಪೀತನ ॥೩॥

ಪದಕಸರಿಗೆಯು ಜಾಂಬೂನದ ಕಂಬುಕಂಠ
ರದನೀಕರ ಬಾಹು ಚದುರ ಭುಜಕೀರ್ತಿ
ಬದರ ಸಂಕಾಶಾ ಅಂಗದ ರತ್ನಕಟಿಕಾ
ಪದುಮಾರುಣ ಕರಯುಗ್ಮ ಕಟಿಯಲ್ಲಿಟ್ಟವನಾ ॥ ॥೪॥

ವಿಧುಬಿಂಬೋಪಮ ಚೆಲ್ವ ವದನ ಕೆಂಡುಟಿಯಾ
ಬಿದುರಾಭಾ ದಶನಾಲಿಂಗದೊಳ್ ಕಿರುನಗೆಯೂ
ಕದಪು ಕನ್ನಡಿ ನಾಸಾತುದಿ ಚಂಪಕ ತೆನೆಯಾ
ಉದತೇ ಜಾಯತ ನೇತ್ರ ಯದುವಂಶೋದ್ಭವನಾ ॥ ॥೫॥

ಜ್ವಲಿತ ಕುಂಡಲ ಕರ್ಣ ಸುಲಲಿತ ಭ್ರೂಯುಗಳ
ಪೊಳೆವ ಬಾಲ ಶಶಾಂಕ ತಿಲಕಾಂಕಿತ ಫಾಲ
ಅಳಿಬಾಲವೆನಿಪ ಕುಂತಳ ರತ್ನ ಖಚಿತ
ಕಲಧೌತ ಮಕುಟ ದಿಗ್ವಲಯ ಬೆಳೆಗುವನ ॥ ॥೬॥

ಶಠಕೂರ್ಮ ರೂಪಿಯು ಕಿಟಿ ಮಾನವ ಹರಿಯಾ
ವಟು ಭಾರ್ಗವ ಕಾಕುಸ್ಥ ಶಠಕಂಸದ್ವಿಷನ
ನಿಟಿಲಾಂಬಕ ಸಹಾಯ್ಯ ಖಳಕಟಕಾರಿ ಭೀಮಾ
ತಟವಾಸ ಜಗನ್ನಾಥ ವಿಠಲ ಮೂರುತಿಯು ॥ ॥೭॥

ಅರ್ಥವಿವರಣೆ :

ಗೋಪಾಲದಾಸರಿಂದ ಆದೇಶವನ್ನು ಶಿರದಲ್ಲಿ ಹೊತ್ತು ಮಾನವೀ ಶ್ರೀನಿವಾಸಾಚಾರ್ಯರು (ಜಗನ್ನಾಥ ವಿಠಲಾಂಕಿತ ದಾಸವರ್ಯರು) ಉತ್ತ ಮೂರಿನಿಂದ ನೇರವಾಗಿ ಪಾಂಡುರಂಗ ಕ್ಷೇತ್ರಕ್ಕೆ ಆಗಮಿಸಿದ್ದಾರೆ, ನಾದಬ್ರಹ್ಮ ನೆಂಬ ಪ್ರಸಿದ್ಧನಾದ ಪಾಂಡುರಂಗಮೂರ್ತಿ ರಕುಮಾ ಸತ್ಯಭಾಮಾ ಸಮೇತ

ಚಂದ್ರಭಾಗಾ ನದಿಯ ತಟದಲ್ಲಿ ವಿರಾಜಮಾನವಾಗಿರುವ ಪುಣ್ಯಕ್ಷೇತ್ರವಿದು. ಭೀಮಾ ನದಿಯು ಆ ಸ್ಥಳದಲ್ಲಿ ಚಂದ್ರನ ತಲೆಯುಡಿ ಬಿಲ್ಲಿನ ಆಕಾರದಲ್ಲಿ ಹರಿಯುವುದರಿಂದ, 'ಚಂದ್ರಭಾಗಾ' ಎಂಬ ಹೆಸರು ಬಂದಿದೆ. ನದಿಯಲ್ಲಿ ವಿದ್ಯುಕ್ತವಾಗಿ ಸ್ನಾನ ಮಾಡಿ, ಮುಳುಗಿ ಏಳುವ ಸಮಯದಲ್ಲಿ ಅವರ ತಲೆಗೆ ಒಂದುಕಲ್ಲು ತಾಕಿದೆ. ತಮ್ಮ ಗುರುಗಳ ಸಂದೇಶದಂತೆ ಆ ಶಿಲಾಫಲಕವನ್ನು ಎತ್ತಿನೋಡಿದ್ದಾರೇ! ಏನಾಶ್ಚರ್ಯ! ಜಗನ್ನಾಥ ವಿಠಲ = ಎಂಬ ದಿವ್ಯ ಅಂಕಿತ ನಾಮ ಅಕ್ಷರಗಳಲ್ಲಿ ಮೂಡಿದೆ. ದಾಸರು ಪುಳಕಾಂಕಿತರಾಗಿದ್ದಾರೆ. ಆ ಶಿಲಾಫಲಕವನ್ನು ತಲೆಯ ಮೇಲೆ ಹೊತ್ತುಕೊಂಡು ನೇರವಾಗಿ ಪಾಂಡುರಂಗನ ದರ್ಶನವನ್ನು ಮಾಡಿ ಭಕ್ತಿ ಪರವಶರಾಗಿ ಆ ದಿವ್ಯ ಮೂರ್ತಿಯ ಎದುರಿಗೆ ನಿಂತಿದ್ದಾರೆ, ಆಗ ದಾಸರ ವದನಾರವಿಂದದಿಂದ ಹೊರಹೊಮ್ಮಿದ ಸುಂದರ ಶಬ್ದಗಳಿಂದ ಬೆಳಗುತ್ತಿರುವ ಕೀರ್ತನ ಸಾಹಿತ್ಯವಿದು.

**ಇಂದು ಭಾಗ ನಿವಾಸ** = ಚಂದ್ರಭಾಗಾ ನದಿಯ ದಡದಲ್ಲಿರುವ (ಇಂದು ಭಾಗ–ಚಂದ್ರಭಾಗ). **ನರನ ಸಾರಥಿಯು** = ಪಾರ್ಥಸಾರಥಿ (ನರ–ಅರ್ಜುನನ ದಶನಾಮಗಳಲ್ಲಿ ಒಂದು). **ಅರುಣಾಬ್ಜೋಪಮ** = ಆಗತಾನೇ ಅರಳುತ್ತಿರುವ ಕಮಲದ ಕಾಂತಿಯಂತೆ (ಅರುಣ–ಆಗತಾನೇ ಅರಳುತ್ತಿರುವ ಅಬ್ಜ + ಉಪಮಾ–ಕಮಲ ಸದೃಶ). **ಚಾರು ಚರಣ ಅಂಗುಲಿ ನಖರ** = ಸುಂದರವಾದ (ಪರಿಪೂರ್ಣ) ಕಾಲು–ಬೆರಳು–ಬೆರಳಿನ ಉಗುರು ಅವನ ಸುಂದರವಾದ ಕಾಲುಗಳು ಆದೇತಾನೇ ಅರಳುತ್ತಿರುವ ಕಮಲದ ದಳಗಳಂತೆ ಶೋಭಾಯಮಾನವಾಗಿವೆ (ಚರಣಕಮಲ), **ತರುಣ + ಇಂದು + ಛವಿ** = ಬಾಲಚಂದ್ರನಂತೆ ಕಾಂತಿ (ಛವಿ–ಕಾಂತಿ). **ತಿರಸ್ಕರಿಸುವ** – ಅವನ ಕಾಲಿನ ಬೆರಳುಗಳ ಉಗುರಿನ ಕಾಂತಿಯ ವಿಷಯ ವರ್ಣನೆ, **ಪ್ರಖರ** = ಅಧಿಕವಾದ ಕಾಂತಿ ವಿಶೇಷ, **ಕಿರುಗೆಜ್ಜೆ** = ಕಾಲಿನ ಸರಪಳಿಗಳಿಗೆ ಕಟ್ಟಿರುವ ಸಣ್ಣ ಸಣ್ಣ ಗೆಜ್ಜೆ, **ಕಡಗ** = ಹಸ್ತಾಭರಣ, **ನೂಪುರ** = ಕಾಲಂದಿಗೆ, **ಪೆಂಡೆ** ಪಾದಾಭರಣ (ಬದಿರಿನಬಳೆ), **ಶಿಘರ** = ಪಾದಪಟ್ಟಿ (ಚೈನು). **ಶಿರಜಾನು** = ನೀಳವಾದ ಮೊನಖಂಡ, **ಜಂಘೆ** = ಮೊಣಕಾಲಿನ ಮೇಲ್ಭಾಗ

**ಭಾಸ್ಕರ ರತ್ನ ಮುಕುರ** = ಸೂರ್ಯನ ಕಾಂತಿಯಂತೆ ಹೊಳೆಯುತ್ತಿರುವ ರತ್ನ ಖಚಿತ ನಾಸಿಕಾಭರಣ.

**ರಂಭಾ** = ಬಾಳೆಯದಿಂಡು ಸುಂದರವಾದ ಗುಂಡಾದ ಊರು, **ಪೊಂಬಣ್ಣ ಅಂಬರವ** = ಪೀತಾಂಬರವನ್ನು (ಪೊಂಬಣ್ಣ-ಚಿನ್ನದ ಬಣ್ಣ), **ಕಂಂಭೀ** = ಆಸೆಯು, **ಮಸ್ತಕದ ಪೋಲ್** = ಶಿರದಂತೆ, **ನಿತಂಬದಿ** = ಸೊಂಟದ ಹಿಂಬದಿಯ ಭಾಗ, **ಮೇಖಳೆ** = ವಡ್ಯಾಣ-ಡಾಬು, **ಗಂಭೀರ ನಾಭಿ** = ಸುಂದರವಾದ ನಾಭೀಪ್ರದೇಶ (ಹೊಕ್ಕಳು), **ಅಂಬುದಿಶಾಯಿ** = ಕ್ಷೀರಸಮುದ್ರಶಾಯಿಯಾದ ಶ್ರೀಮನ್ನಾರಾಯಣ, **ವಿಧಿಶಂಭುಪೂಜಿತನು** = ಬ್ರಹ್ಮ-ರುದ್ರ ಇವರುಗಳಿಂದ **ಪೂ**ಜ್ಯನು.

**ಲವಕುಕ್ಷಿ** = ತೆಳುವಾದ ಉದರಪ್ರದೇಶ. **ತ್ರಿವಳಿ** = ಉದರದ ಮೇಲಿರುವ ತ್ರಿವಳಿಗೆರೆಗಳು, **ಭಾರ್ಗವಿ ವಕ್ಷ ಉರುವು** = ಲಕ್ಷ್ಮೀ ವಾಸಸ್ಥಾನವಾದ ವಿಶಾಲ ವಕ್ಷಸ್ಥಳ, **ದ್ರವಿ** = ಕರಗಿದ ಚಿನ್ನದಂತೆ ಹೊಳೆಯುತ್ತಿರುವ, **ಕೌಸ್ತುಭ** = ಕೌಸ್ತುಭಮಣಿ (ಕಂಠಾಭರಣ-ಬ್ರಹ್ಮದೇವರು ಕೌಸ್ತುಭದ ರೂಪದಲ್ಲಿ ಶ್ರೀ ಹರಿಯನ್ನು ಸೇವಿಸುತ್ತಿರುವರು, **ವೈಜಯಂತೀ** = ಮಾಲೆ.

**ಸರಿಗೆಯು** ಒಂದು ಬಗೆಯ ಕಂಠಾಭರಣ. **ಜಾಲಬೂನದ** = ಬಂಗಾರದಿಂದ ಮಾಡಲ್ಪಟ್ಟ, **ಕಂಚುಕಂಠ** = ಕಡೆದ ಶಂಖದಂತಿರುವ ಕುತ್ತಿಗೆ. **ರದನೀಕರ** - ಮತ್ತ ಗಜದ ಸೊಂಡಲಿನಂತಿರುವ ಬಾಹುಗಳು, **ಭುಜಕೀರ್ತಿ** = ಭುಜಕ್ಕೆ ಹಾಕಿರುವ ರತ್ನ ಖಚಿತ ಪಟ್ಟಿ. **ಬದರಸಂಕಾಶ** = ಬೋರೇ ಹಣ್ಣಿನ ವರ್ಣಯುಕ್ತವಾದ ಆಭರಣದ ಕಾಂತಿ, (ಬದರ ಬೋರೇ ಹಣ್ಣು). **ಅಂಗದ ರತ್ನಕಟಿಕಾ** = ಸೊಂಟದ ರತ್ನ ಖಚಿತ ನಡುಪಟ್ಟಿ, **ಪಡುಮಾರುಣಕರಯುಗ್ಮ** ಎಳೆಯ ಕಮಲದ ಕಾಂತಿಯಂತಿರುವ ತನ್ನ ಎರಡು ಹಸ್ತಗಳನ್ನು ಸೊಂಟದ ಮೇಲೆ ಇಟ್ಟು ನಿಂತಿರುವ ಪಾಂಡುರಂಗ ಮೂರ್ತಿ.

**ವಿಧುಬಿಂಬೋಪಮವದನೆ** = ಪೂರ್ಣಚಂದ್ರ ಬಿಂಬವನ್ನು ಹೋಲುವ ವದನ (ವಿಧು ಪೂರ್ಣಚಂದ್ರ, **ಬಿಡುರಾಭ** = ಮಿಂಚಿನಂತೆ ಪ್ರಕಾಶ, **ನಾಸಾತುದಿ ಚಂಪಕ** = ಎಳೆಯ ಸಂಪಿಗೆ ಹೂವಿನಂತೆ ನೀಳವಾದ ಮೂಗು, ಅದರ ತುಡಿ, **ಉದತೇಜಾಯಿತನೇತ್ರ** = ಕಮಲದ ದಳದಂತೆ ವಿಸ್ತಾರವಾದ ನೇತ್ರಗಳು (ಉದತೇಜ × ಆಯಿತ × ಉದತೇಜ–ನೀರಿನಲ್ಲಿ ಉತ್ಪತ್ತಿಯಾದ ಕಮಲಪುಷ್ಪ ಆಯಿತ–ವಿಶಾಲವಾದ)

**ಜ್ವಲಿತ** = ಪ್ರಕಾಶಮಾನವಾಗಿ ಹೊಳೆಯುತ್ತಿರುವ ಕರ್ಣಕುಂಡಲಗಳು **ಸುಲಲಿತ ಭ್ರೂಯುಗಳ** = ಮನೋಹರವಾದ ಎರಡು ಹುಬ್ಬಿನಸಾಲು. **ಬಾಲಶಶಾಂಕ ತಿಲಕಾಂಕಿತಫಾಲ** = ಉದಯಿಸುತ್ತಿರುವ ಎಳೆಯ ಚಂದ್ರನ ಕಳೆಯಂತೆ ಹೊಳೆಯುತ್ತಿರುವ ತಿಲಕವನ್ನು ತನ್ನ ಹಣೆಯಲ್ಲಿ ಧರಿಸಿರುವವನು, **ಅಳಿಬಾಲವನಿಪ ಕುಂತಳ** = ಕಪ್ಪಾದ ದುಂಬಿಯಂತಿರುವ ಮುಂಗುರುಳು, **ರತ್ನ ಖಚಿತ........ಬೆಳಿಸುವನ** = ರತ್ನ ಖಚಿತವಾದ ಕಿರೀಟವನ್ನು ಧರಿಸಿದ ಶಿರದ ಕಾಂತಿಯಿಂದ ಸಮಸ್ತ ದಿಕ್ಕುಗಳನ್ನು (ದಿಗ್ವಿಜಯ) ಬಳಸುತ್ತಿರುವವನ **ಶಕ** = ಮತ್ಸ್ಯ, **ಕೂರ್ಮ** = ಆಮೆ, **ಕಿಟಿ** = ವರಾಹ, **ಮಾನವ ಹರಿಯು** = ನರಸಿಂಹರೂಪಿ (ಮಾನವ–ನರ, ಹರಿ–ಸಿಂಹ), **ವಟು** = ಬ್ರಹ್ಮಚಾರಿಯಾದ ವಾಮನ, **ಭಾರ್ಗವ** = ಭೃಗುಕುಲೋತ್ಪನ್ನನಾದ ಪರಶುರಾಮ **ಕಾಕುತ್ಸ್ಥ** = ಕಾಕುತ್ಸ್ಥ ವಂಶೋದ್ಭವನಾದ ಶ್ರೀರಾಮ, **ಶಠಕಂಸದ್ವಿಷನ** = ದುರಾಗ್ರಹಿಯಾಗಿದ್ದ ಕಂಸನ ಸಂಹಾರಿಯಾದ ಶ್ರೀ ಕೃಷ್ಣ. **ನಿಟಿಲಾಂಬಕ ಸಹಾಯ್ಕ** = ತ್ರಿನೇತ್ರನಾದ ರುದ್ರನಿಗೆ ಸಹಾಯಕನಾಗಿ ತ್ರಿಪುರಾಸುರನನು ಸಂಹರಿಸಿದ ಬುದ್ಧ, **ಖಳಕಟಿಕಾರಿ** = ದೈತ್ಯಕ ಸಮೂಹವನ್ನು ಸಂಹರಿಸಿದ ಶ್ರೀ ಕಲ್ಕೀ. (ಖಳ × ಕಟಕ × ಅರಿ). **ಭೀಮಾತಟವಾಸ** = ಭೀಮಾನದಿಯ ತೀರದಲ್ಲಿರುವ ಶ್ರೀ ಪಾಂಡುರಂಗ.

★

೮

## (ಪ್ರಸನ್ನವೆಂಕಟಾಂಕಿತ)

**ರಾಗ–ಕಾಂಬೋಧಿ** **ಧ್ರುವತಾಳ**

ವಿಠ್ಠಲಾ ಹಿಡಿ ಎನ್ನ ಕೈಯ್ಯಾ–ವಿಠ್ಠಲ ಪಂಢರಿರಾಯಾ
ವಿಠಲಾ ಭಕ್ತವತ್ಸಲ–ವಿಠ್ಠಲಾ ಹರಿ ವಿಠ್ಠಲಾ ॥ ॥ಪ॥

ಧಿಟ್ಟಾ ಪುಂಡಲೀಕ ತನ್ನಾ–ಪುಟ್ಟಿಸಿದವರ ಮನ
ಮುಟ್ಟಿ ಭಜಿಸಲು ಚಿತ್ತ–ಗೊಟ್ಟು ಬಂದೆಯಾ ವಿಠ್ಠಲಾ ॥ ॥೧॥

ಕೊಟ್ಟ ಮಾತಿಗೆ ಭಕ್ತರ–ಕಟ್ಟನೊಳು ಸಿಲುಕಿ ಕಂ–
ಗೆಟ್ಟ ಭವಾಬ್ಧಿಲಿ ನನ್ನ–ಗುಂಟ್ಟು ತೋರಯ್ಯಾ ವಿಠ್ಠಲಾ ॥ ॥೨॥

ಬಿಟ್ಟು ಬರಲಾಗದ ನಿನಗೆ–ಥಟ್ಟನೆ ನೀಡಲು ಚೆಲುವ
ಇಟ್ಟಿಗೆಯ ಮೇಲೆ ಅಂಘ್ರಿ ಪದ್ಮ–ಇಟ್ಟು ನಿಂತೆಯಾ ವಿಠ್ಠಲಾ ॥ ॥೩॥

ನೆಟ್ಟನೆ ವೇದವ ತಂದು–ಬೆಟ್ಟವೆತ್ತಿ ಇಳೆಯ ಪೊತ್ತಿ
ಸಿಟ್ಟು ತಾಳ್ದ ವಟುವೇ ಖಳರ–ಸಿಟ್ಟಿಲ್ಲಳಿದಯಾ ವಿಠ್ಠಲಾ ॥ ॥೪॥

ಕಟ್ಟಕಡೆಯಲಿ ಜಗ–ಜಟ್ಟೀ ಗೋಪನಾಗಿ ಬಂದ್ದ
ದಿಟ್ಟ ಕಲ್ಕ್ಯವತಾರ ತಾಳಿ–ಕೃಷ್ಣ ಪ್ರಸನ್ನವೆಂಕಟವಿಠ್ಠಲ ॥ ॥೫॥



**ಅರ್ಥವಿವರಣೆ :**

ಪ್ರಸನ್ನವೆಂಕಟದಾಸವರ್ಯರು ಪಾಂಡುರಂಗನ ದರ್ಶನ ಪಡೆಯು ಲೋಸುಗ ಪಂಢರಾಪುರ ಕ್ಷೇತ್ರಕ್ಕೆ ಆಗಮಿಸಿದ್ದಾರೆ. ಭೀಮರಥೀ ತೀರಸ್ಥ ಪಾಂಡುರಂಗನನ್ನು ಕಣ್ತುಂಬಾ ದರ್ಶನ ಗೈದಿದ್ದಾರೆ. ಆಗ ಅವರ ವದನಾರ ವಿಂದದಿಂದ ಹೊರಹೊಮ್ಮಿದ ಸ್ತೋತ್ರಸಾಹಿತ್ಯವಿದು

**ದಿಟ್ಟಭಕ್ತೋತ್ತಮನಾದ ಪುಂಢರೀಕ** = ಮಾತಾಪಿತೃಗಳ ಸೇವೆ ಯಲ್ಲಿ ನಿರತನಾಗಿದ್ದ ಪುಂಢರೀಕ ಮುನಿಪುಂಗನ, **ಕೃಷ್ಣಿಸಿದವರ** = ತನಗೆ ಜನ್ಮವಿತ್ತ ಮಾತಾಪಿತೃಗಳ ಸೇವಾ. **ಚಿತ್ತಗೊಟ್ಟ** = ಪುಂಡರೀಕನ ಮೊರೆ ಯನ್ನು ಲಾಲಿಸಿ, ಇಟ್ಟಿಗೆಯ ಮೇಲೆ ನಿಂತ ಭಕ್ತವರದನ ಪಾಂಡುರಂಗ.

**ಕೊಟ್ಟ ಮಾತಿಗೆ** = ಪುಂಡರೀಕನು ಶ್ರೀಕೃಷ್ಣನನ್ನು "ಇದೇ ಭಂಗಿಯಲ್ಲಿ ಕಟಿಯಲ್ಲಿ ಕರವಿಟ್ಟು ಇಟ್ಟಿಗೆಯ ಮೇಲೆ ನಿಂತು ನಿನ್ನ ಭಕ್ತ ಸಮುದಾಯಕ್ಕೆ ದರ್ಶನ ನೀಡು" ಎಂದು ಪ್ರಾರ್ಥಿಸಿದನು, **ಭವಾಬ್ಧಿಯಲಿ** = ಸಂಸಾರ ಸಾಗರದಲ್ಲಿ ಮುಳುಗಿದ ನನ್ನನ್ನು ಉದ್ಧರಿಸೆಂದು ದಾಸಶ್ರೇಷ್ಠರು ಪ್ರಾರ್ಥಿಸಿದ್ದಾರೆ

**ಇಟ್ಟಿಗೆಯ ಮೇಲೆ** = ಪುಂಢರೀಕನು ಎಸೆದ ಇಟ್ಟಿಗೆಯ ಮೇಲೆ ನಿಂತ ಪಾಂಡುರಂಗನ ಪಾದಪದ್ಮಯುಗ್ಮಗಳು. ಇಂದ್ರ, ಮತ್ತು ಕಾರರು ಇಟ್ಟಿಗೆಯ ರೂಪದಲ್ಲಿ ಪಾಂಡುರಂಗನನ್ನು ಸೇವಿಸುತ್ತಿದ್ದಾರೆ.

**ನೆಟ್ಟನೆವೇದವ ತಂದು** = ವೇದಚೋರನಾದ ಸೋಮಕ ದೈತ್ಯನನ್ನು ಕೊಂದ ಮತ್ಸ್ಯ. **ಬೆಟ್ಟವೆತ್ತಿ** = ಮಂದರಗಿರಿಯನ್ನು ಹೊತ್ತ ಕೂರ್ಮ, **ಇಳೆಯಪೊತ್ತ** = ಭೂದೇವಿಯನ್ನು ಉದ್ಧರಿಸಿದ ವರಾಹ, **ಸಿಟ್ಟಿತಾಳ್ದ** ಕಂಭದಿಂದ ಸಿಗಿದು ಬಂದ ನರಸಿಂಹ, **ವಟುವಾಗಿ** = ಬ್ರಹ್ಮಚಾರಿ ವಾಮನ, **ಖಳರ** = ದುಷ್ಟಕ್ಷತ್ರಿಯ ಕುಲ ಸಂಹಾರದ ಪರಶುರಾಮ, **ಸಿಟ್ಟಲಿ ಅಳಿದ** = ಕೋಪದಿಂದ ರಾವಣಾದಿ ರಾಕ್ಷಸರನ್ನು ಸಂಹರಿಸಿದ ಶ್ರೀರಾಮ, **ಗೋಪ ನಾಗಿ** = ಗೋಪಾಲಬಾಲ ಕೃಷ್ಣ, **ಬುದ್ಧ** = ಬುದ್ಧಾವತಾರಿ ಶ್ರೀಹರಿ,

ದಿವ್ಯಕಲ್ಕ್ಯವತಾರ– ಸಾಹಸ ಪರಾಕ್ರಮಿ ರಣಮಲ್ಲ ಕಲ್ಕೀ–ಹೀಗೆ ಕೊನೆಯ ನುಡಿಯಲ್ಲಿ ದಶಾವತಾರ ಸ್ತೋತ್ರ ಮಾಡಿದ್ದಾರೆ.

೬

(ಶ್ರೀಪತಿವಿಠ್ಠಲಾಂಕಿತ)

ರಾಗ–ಯಮುನಾಕಲ್ಯಾಣಿ ಆದಿತಾಳ

ಪಾಂಡುರಂಗ ತ್ರಿಭುವನ ಪಾಲಿಸಯ್ಯಾ ಕರುಣದಿ ಪಿಡಿಕೈಯ್ಯಾ ॥ ॥ಪ॥
ಪುಂಡರೀಕ ವರದ ನಮಿಪೆ ನಿನಗೇ–ನೀ ತ್ವರಿತದಲ್ಲೆನಗೇ ॥ ॥ಅ॥

ವನಜಭವಾದಿ ಸಮಸ್ತ ಸುರವ್ರಾತಾ–ವಂದಿತ ಶ್ರೀನಾಥಾ
ಪ್ರಣತಾರ್ತಿಹರ ಕಾಮಿತಫಲದಾತಾ–ಮುನಿಗಣಸಂಧ್ಯಾತಾ
ನೆನೆವ ಜನರ ಮನದೊಳಿಹ ವಿಖ್ಯಾತಾ–ಭುವನಾದಿನಾಥಾ
ಘನಮಹಿಮ ಒಲಿದು ಪಾಲಿಸೆನ್ನ ಮಾತಾ–ದಯಮಾಡಿ ತ್ವರಿತಾ ॥

ಸುರಚಿರ ... ನನೆ ಭಜಕಾಮರಧೇನೂ–ವಸುದೇವರ ಸೂನೂ
ಧರಣಿಯೆ ... ಗೆ ನಮ್ಮ ಹಿರಿಯರನುದ್ಧಾರಾ–ಮಾಡಿದ ಗಂಭೀರಾ
ಧೊರೆಯೆ ... ನಿಸ್ತೋರತನ್ಯರನಾನರಿಯೇ–ಕೇಳೆಲೋ ನರಹರಿಯೇ
ಕರೆಕರೆ ... ದೊಳು ಬಿದ್ದು ಬಾಯ್ಬಿಡುವೇ–ಪೊರೆಯೆಂದು ನುಡಿವೇ ॥ ॥೧॥

ಬಂದ ಜನರ ಭವಭಾರದ ಪರಿಮಿತೀ–ತೋರಿಸುತಿಹ ರೀತೀ
ಚೆಂದದಿಂದ ಕರವಿಟ್ಟು ಕಟಿಗಳಲ್ಲೀ–ಈ ಸುಕ್ಷೇತ್ರದಲೀ

ನಿಂದಿಹ ಭೀಮಾತೀರ ಚಂದ್ರ ಭಾಗಾ-ದಲ್ಲಿ ವೈಭೋಗಾ
**ತಂದೆ ಶ್ರೀಪತಿವಿಠ್ಠಲ** ಸುಖಸಿಂಧೋ-ಅನಾಥ ಬಂಧೋ ॥ ॥೩॥

**ಅರ್ಥವಿವರಣೆ :**

**ತಂದೆ ಶ್ರೀಪತಿವಿಠ್ಠಲಾಂಕಿತ** = ದಾಸವರ್ಯರ ಹೆಸರು, **ವೆಂಕಟ ದಾಸರೆಂದು** = ಇವರು ಶ್ರೀಪತಿವಿಠ್ಠಲಾಂಕಿತ ಹರಪನಹಳ್ಳಿ ಶ್ರೀಪತಿದಾಸರ ಶಿಷ್ಯರು. ಶ್ರೀವಿಜಯದಾಸವರ್ಯರ ಶಿಷ್ಯರು ಪಂಗನಾಮದ ತಿಮ್ಮಣ್ಣ ದಾಸರು. ಅವರ ಪರಂಪರೆಯಲ್ಲಿ ಕಲ್ಲೂರು ಸುಬ್ಬಣ್ಣಾಚಾರ್ಯರು (ವ್ಯಾಸ ವಿಠ್ಠಲ)-ವೈರಾಗ್ಯಶಾಲಿ ತಿಮ್ಮಣ್ಣದಾಸರು (ರಘುಪತಿವಿಠ್ಠಲ)-ಗದ್ವಾಲಿ ದಾಸಾಚಾರ್ಯರು (ಭೂವರಾಹ ರಘುಪತಿವಿಠ್ಠಲ)- ಈ ಮಹನೀಯರು ಕ್ರಮವಾಗಿ ಬರುತ್ತಾರೆ. ಗದ್ವಾಲಿ ದಾಸಾಚಾರ್ಯರ ಶಿಷ್ಯರೇ ಶ್ರೀಪತಿವಿಠ್ಠಲಾಂ ಕಿತ ಹರಪನಹಳ್ಳಿ ಶ್ರೀಪತಿದಾಸರು.

**ಪುಂಡರೀಕವರದ** = ಭಕ್ತ ಪುಂಡರೀಕನ ಮಾತಾಪಿತೃಗಳ ಸೇವೆಗೆ ಅವನನ್ನು ಅನುಗ್ರಹಿಸಿದ ಪಾಂಡುರಂಗ, **ತ್ವರಿತದಲ್ಲಿ** = ಎನಗೆ ಶೀಘ್ರವಾಗಿ ಅನುಗ್ರಹಿಸು, **ವನಜಭವಾದಿ** = ಪದ್ಮನಾಭದೇವರ ನಾಭೀ ಕಮಲಸಂಜಾತರಾದ ಬ್ರಹ್ಮದೇವರು ಆದಿಯಾಗಿ, **ಸುರವ್ರಾತಾ** = ದೇವತಾ ಸಮೂಹ, **ಪ್ರಣತಾರ್ತಿಹರ** = ಶರಣಾಗತರಾದವರ ದುಃಖಗಳನ್ನು ಪರಿ ಹರಿಸುವ, **ಸಂಧ್ಯಾತಾ** = ಋಷಿಮುನಿಗಳಿಂದ ಚೆನ್ನಾಗಿ ಧ್ಯಾನಿಸಲ್ಪಟ್ಟ, **ವಿಖ್ಯಾತ** = ಪ್ರಸಿದ್ಧ ಪುರುಷನು, **ಭುವನಾದಿನಾಥ** = ಬ್ರಹ್ಮಾಂಡ ದೊಡೆಯ.

**ಸುರುಚಿರ ಮಹಿಮನೆ** = ಅತ್ಯಂತ ಶ್ರೇಷ್ಠನಾದ ಮಹಾಮಹಿಮಾ ಸಂಪನ್ನನೇ, **ಭಜಕರಾಮರಧೇನೂ** = ಭಜಿಸುವವರ ಪಾಲಿಗೆ ಕಾಮ-ಧೇನು ಸದೃಶನೇ (ಭಜಕರ + ಅಮರಧೇನು), **ವಸುದೇವಸೂನೂ** = ವಸುದೇವನ ತನಯ ಶ್ರೀಕೃಷ್ಣ, **ನಮ್ಮ ಹಿರಿಯರನು** = ನಮ್ಮ ಹಿರಿಯ ರಾದ ಪುರಂದರದಾಸರಾದಿ ಮಹಾಮಹಿಮರನ್ನು ಉದ್ಧಾರಮಾಡಿದ ದಾಸ

ಕೂಟದ ಇಷ್ಟದೇವನಾದ ಪಾಂಡುರಂಗವಿಠ್ಠಲ, **ಕಠಿಕರೆ**=ದುಃಖಭರಿತವಾದ (ಹಿಂಸೆಯನ್ನು ಕೊಡುವ), **ಭವದೊಳು**=ಸಂಸಾರದಲ್ಲಿ.

**ಭವಸಾಗರದಪರಿಮಿತಿ** = ಪಾಂಡುರಂಗನು ತನ್ನ ಕಟಿಯ ಮೇಲೆ ಎರಡು ಕೈಗಳನ್ನು ಇಟ್ಟಿದ್ದಾನೆ. ಇದರ ಸಾಂಕೇತ, ನನ್ನನ್ನು ನಂಬಿದ ಭಕ್ತರಿಗೆ ಸಂಸಾರ ಸಾಗರವು ಸೊಂಟದ ಪರ್ಯಂತ ಆಳವಾದದ್ದು ಎಂದು, **ಈ ಸುಕ್ಷೇತ್ರದಲಿ**=ಪಂಢರಾಪುರವೆಂಬ ಈ ಪುಣ್ಯತಮ ಕ್ಷೇತ್ರದಲ್ಲಿ, **ಭೀಮಾತೀರಚಂದ್ರಭಾಗಾ**=ಭೀಮಾನದಿಯು ಚಂದ್ರ ಭಾಗಾ ಎಂಬ ಹೆಸರಿನಿಂದ ಹರಿಯುತ್ತಿದೆ. ಅದರ ತೀರಸ್ಥ ಶ್ರೀಪಾಂಡುರಂಗ,



## ೧೦

### (ಶ್ರೀವರವಿಠ್ಠಲಾಂಕಿತ)

**ರಾಗ–ಮಧ್ಯಮಾವತಿ** **ಅಟ್ಟತಾಳ**

ಎಂದು ನೋಡುವೆ ನಿನ್ನ–ಶ್ರೀ ಪಾಂಡುರಂಗಾ॥ ॥ಪ॥

ಎಂದು ನೋಡುವೆ ನಿನ್ನಪದದ್ವಯ
ಚಂದ್ರಭಾಗನಿವಾಸ ಕರುಣಾ–
ಸಿಂಧು ಭಕುತರ ಬಂಧು ಅಜಭವ–
ರಿಂದ ಪೂಜಿತವಾದ ಪೂರ್ಣ ॥ ॥ಅ॥

ವಾಸವಾದ್ಯರ ನಾಥಾ–ವಸುಂಧೆಯೊಳ್ ಪುರಂದರ–
ದಾಸರಲಿ ಅತಿಪ್ರೀತಾ–ಪುಂಡರೀಕವರದ
ಶೇಷಶಾಯಿ ಪ್ರಖ್ಯಾತಾ–ದುರ್ಬಲರ ದಾತಾ ॥

ಕಾಸುವೀಸಕೆ ಆಸೆಪಡದಲೆ–ಪೋಷಿಸುವೆ ನಿಜಭಕುತರನುದಿನ
ಶ್ರೀಶ ನಿನ್ನ ವಿಶೇಷ ದರುಶನದಾಸೆ ಪೂರೈಸೋ–ತಂದೆ ॥

॥೧॥

ಗಜವರದ ಗಂಭೀರಾ–ರುಕ್ಮಿಣಿ ಮನೋಹರ
ಸುಜನರಿಗೆ ಮಂದಾರಾ–ತರುವಂತೆ ಇರುತಿರೆ
ವಿಜಯಸಾರಥಿ ಧೀರಾ–ಕರುಣಾಪಾರಾ ॥

ತ್ರಿಜಗದೀಶ್ವರ ತ್ರಿಗುಣವಿರಹಿತ–ಧ್ವಜವಜ್ರಾಂಕುಶ ಪಾದಪದ್ಮನೆ
ವಿಜಯರಾಯರ ಭಜನೆಗೊಲಿದು–ಹೃದಯದಲಿ ನಿಜರೂಪತೋರಿದ ॥

॥೨॥

ಸೃಷ್ಟಿಗೊಡೆಯನೆ ನಿನ್ನ–ಎಷ್ಟೊಂದು ಭಜಿಸಲಿ
ಕಷ್ಟವನು ಕಳೆ ಮುನ್ನ–ನಿನ್ನವರ ಪದದಲಿ
ನಿಷ್ಠೆಯನ ಕೊಡು–ಚೆನ್ನಾ–ಅಗಾರಿಗಮನಾ ॥

ವಿಠ್ಠಲಾ ನಿನ್ನ ಚಿಟ್ಟು ಸುಖವನು–ಎಷ್ಟುಕು ಕಾಣೆನೋ ಕರುಣವ
ಇಟ್ಟು ಪಾಲಿಸಬೇಕು **ಶ್ರೀವರವಿಠ್ಠಲಾ** ಕರಕಟಿತ ಶೋಭಿತ ॥ ॥೩॥

**ಅರ್ಥವಿವರಣೆ :**

**ಚಂದ್ರಭಾಗನಿವಾಸ** – ಭೀಮಾನದಿಯ ಭಾಗವಾದ ಚಂದ್ರಭಾಗಾ ನದಿಯ ತೀರಸ್ಥ ಶ್ರೀಪಾಂಡುರಂಗ, **ಅಜಭವರಿಂದ** = ಬ್ರಹ್ಮ-ರುದ್ರಾದಿಗಳಿಂದ ಪೂಜಿತ ಪಾದಪದ್ಮವುಳ್ಳವನು.

**ವಾಸವಾದ್ಯರ** = ಇಂದ್ರನೇ ಮೊದಲಾಗಿ, **ವಸುಧಿಯೊಳ್** = ಭೂಮಿಯಲ್ಲಿ, **ದಾತಾ** = ದುರ್ಬಲರಿಗೆ ಶಕ್ತಿಪ್ರದಾತನು, **ಕಾಸುವೀಸಕೆ** = ದುಡ್ಡು ದುಗ್ಗಾಣಿಗಳಿಗೆ.

**ಮಂದಾರ** = ಕಲ್ಪವೃಕ್ಷಸದೃಶನು ಸುಜನರ ಪಾಲಿಗೆ, **ವಿಜಯ**

**ಸಾರಥಿ** = ಪಾರ್ಥಸಾರಥಿ (ವಿಜಯ-ಎಂಬುದು ಅರ್ಜುನನ ದಶನಾಮ ಗಳಲ್ಲಿ ಒಂದು), **ತ್ರಿಗುಣವಿಕಸಿತ** = ಪ್ರಾಕೃತಸತ್ವಾದಿ ಗುಣತ್ರಯಗ ಳಿಂದ ವಿದೂರನು, **ಧ್ವಜವಜ್ರಾಂಕುಶ** = ಶ್ರೀಹರಿಯ ಚರಣಾರವಿಂದ ಗಳಲ್ಲಿ ಶಂಖ-ಚಕ್ರ-ಧ್ವಜ-ವಜ್ರ-ಅಂಕುಶಾದಿ ಚಿಹ್ನೆಗಳಿವೆ.

**ನಿಷ್ಠೆಯನೆ** = ನಿನ್ನ ಪಾದಪದ್ಮಗಳಲ್ಲಿ ದೃಢವಾದ ಭಕ್ತಿಯನ್ನು ದಯಪಾಲಿಸು, **ನಾಗಾರಿಗಮನಾ** = ಗರುಡಗಮನ (ನಾಗ-ಸರ್ಪ, ನಾಗಾರಿ—ಸರ್ಪಗಳಿಗೆ ಶತ್ರುವಾದ ಗರುಡನು), **ಕರಕಟಿತಶೋಭಿತ** = ಇಟ್ಟಿಗೆ ಮೇಲೆ ನಿಂತಿರುವ ಪಾಂಡುರಂಗನು ತನ್ನ ಎರಡು ಕೈಗಳನ್ನು ತನ್ನ ಸೊಂಟದ ಮೇಲೆ ಇಟ್ಟಿದ್ದಾನೆ.



## ೧೧

## (ಪ್ರಸನ್ನವೆಂಕಟ-ಅಂಕಿತ)

**ರಾಗ : ಯದುಕುಲಕಾಂಭೋಧಿ** **ಆದಿತಾಳ**

ನೀ ಕರುಣಿಸೋ ವಿಠ್ಠಲಾ-ನಮ್ಮ ಸಾಕೋ ಪಂಢರಿ ವಿಠ್ಠಲಾ ‖ ‖ಪ‖

ದೋಷಿಗಳೊಳಗೆ ಹಿರಿಯನು ನಾ—ನಿರ್ದೋಷಿಗಳರಸೇ ವಿಠ್ಠಲಾ
ಸಾಸಿವೆಯಷ್ಟು ಭಕುತಿಯನರಿಯೆನೋ—ಶೇಷಶಯನ ವಿಠ್ಠಲಾ ‖ ‖೧‖

ಭವಸಾಗರದೊಳು ಮುಳುಗುವೆ-ಸುಮ್ಮನೆ ಅವಲೋಕಿಸುವರೆ ವಿಠ್ಠಲಾ
ನವನವವಿಷಯಕೆ ಹಿಗ್ಗುತಲಿಹ—ಮನದವಸರ ಕಾಯೋ ವಿಠ್ಠಲಾ ‖ ‖೨‖

ನಿಶಿದಿನ ಅಶನಾ ವಸನಕೆ ಹೆಣಗುವೆ–ಹುಸಿ ಸಂಗ್ರಹಿಸಿದೆ ವಿಠ್ಠಲಾ
ನಿಷೇದ ಮಾಯಾ ಇಲ್ಲವು–ನರಕದ ಘಸಣೆಗೆ ಅಂಜುವೆ ವಿಠ್ಠಲಾ ॥
॥೩॥

ತನುಸಂಬಂಧಿಗಳತಿ ಕಾರ್ಯಾರ್ಥಿಗಳೆನಗ್ಯಾರಿಲ್ಲೋ ವಿಠ್ಠಲಾ
ಬಿನುಗುವ ಮಾನವರನುಸರಣೆಯಲಿ–ದಣಿಸದಿರಯ್ಯಾ ವಿಠ್ಠಲಾ ॥ ॥೪॥

ಝಾವಕೆ ಮಾಡುವೆ ಸಾವಿರ ತಪ್ಪನು–ಕಾಯೋ ದಯಾಂಬುಧೆ
ವಿಠ್ಠಲಾ
ಶ್ರೀವರ **ಪ್ರಸನ್ನ ವೆಂಕಟವಿಠ್ಠಲ**–ಜೀವಕೆ ಹೊಣೆ ನೀ ವಿಠ್ಠಲಾ ॥
॥೫॥

**ಅರ್ಥವಿವರಣೆ :**

ಪ್ರಸನ್ನವೆಂಕಟದಾಸರಿಂದ ವಿರಚಿತವಾದ ಈ ಕೀರ್ತನೆಯನ್ನು ಸಾಮಾನ್ಯವಾಗಿ ದಾಸಕೂಟಸ್ಥರು ಭಜನೆಯ ಮುಕ್ತಾಯದಲ್ಲಿ ಹರಿವಾಣ ಸೇವಾ ಸಮಯದಲ್ಲಿ ಹೇಳುವ ಪದ್ಧತಿ ಇದೆ.

**ನಿರ್ದೋಷಿಗಳರಸೇ** = ಶ್ರೀಪರಮಾತ್ಮನು ದೋಷಗಂಧ ವಿದೂರನು ಯಾವ ವಿಧವಾದ ದೋಷಗಳು ಲವಲೇಶವಾದರೂ ಅವನಲ್ಲಿಲ್ಲ. ಅನಂತ ಕಲ್ಯಾಣಗುಣಗಣಪರಿಪೂರ್ಣನು, **ಸಾಸಿವೆಯಷ್ಟು** = ಸ್ವಲ್ಪವಾದರೂ ನನ್ನಲ್ಲಿ ಭಕ್ತಿ ಇಲ್ಲ ಎನ್ನುತ್ತಾರೆ, **ಅವಲೋಕಿಸುವರೆ** = ಸಂಸಾರಸಾಗರದಲ್ಲಿ ನಾನು ಮುಳುಗುತ್ತಿದ್ದರೂ, ನನ್ನನ್ನು ನೋಡಿಯೂ ರಕ್ಷಿಸದೆ ಕೈ ಬಿಡುವೆಯಾ? ಎಂದು ಮೊರೆಯಿಟ್ಟಿದ್ದಾರೆ, **ನವನವವಿಷಯಕೆ** = ವಿಷಯಗಳನ್ನು ಎಷ್ಟು ಭೋಗಿಸಿದರೂ ತೃಪ್ತಿ ಇಲ್ಲ. ಕ್ಷಣಕ್ಷಣಕ್ಕೆ ಅವು ಹೊಸದಾಗಿಯೇ ತೋರುತ್ತಿವೆ, **ಮನದವಸರ** = ವಿಷಯಗಳ ಕಡೆ ಮನಸ್ಸು ಧಾವಿಸುತ್ತಿದೆ. ಅದನ್ನು ಪ್ರತಿಬಂಧಿಸಿ, ನನ್ನನ್ನು ಸಂರಕ್ಷಿಸು.

**ನಿಶಿದಿನ** = ರಾತ್ರಿಹಗಲು–ಅಂದರೆ, ಪ್ರತಿನಿತ್ಯವೂ, **ಅಶನಾ ವಸನಕೆ** = ಅನ್ನ ಮತ್ತು ವಸ್ತ್ರಗಳ ಸಂಪಾದನೆಗಾಗಿ, **ಹೆಣಗುವೆ** =

ನನ್ನ ಬದುಕನ್ನು ದಂಡಿಸುತ್ತಿದ್ದೇನೆ. (ಕೇವಲ ಉದರಂಭರಣಾರ್ಥವಾಗಿ) **ಹುಸಿ ಸಂಗ್ರಹಿಸಿದೆ** = ಅನ್ಯಾಯದ ದಾರಿಯಲ್ಲಿ ಸಂಗ್ರಹಿಸುತ್ತಿದ್ದೇನೆ. ಇವೆಲ್ಲವೂ ಹುಸಿ-ಅಂದರೆ ಸುಳ್ಳು – ನಷ್ಟ ಧರ್ಮವುಳ್ಳ ವಸ್ತುಗಳ, **ಘಾಸಣೆಗೆ** ನರಕದಲ್ಲಿ ಆಗುವ ಶಿಕ್ಷೆಗಳು, **ಕಾಯಾರ್ಥಿಗಳು** = ದೇಹ ಬಾಂಧವರು (ಶರೀರ ಸಂಬಂಧಿಗಳು), **ಬಿನುಗುವ** = ದರ್ಪದಿಂದ ಬೀಗುವ **ಅನುಸರಣೆಯಲಿ** = ಅವರನ್ನು ಅನುಸರಿಸುವುದು.



೧೨

(ತಂದೆ ವೆಂಕಟೇಶ ವಿಠ್ಠಲಾಂಕಿತ)

## ಶ್ರೀ ಪಾಂಡುರಂಗ ಪಂಚಕ

**ರಾಗ : ಶಂಕರಾಭರಣ** **ಆದಿತಾಳ**

ಶ್ರೀಮದ್ರುಕ್ಮಿಣಿಭಾಮಾಸಹ ಶ್ರೀ ಭೀಮಾತೀರ ವಿಹಾರ ನಮೋ
ಕಾಮಜನಕ ವಿಧಿ ವ್ಯೋಮಾಳಕ ಸುತ್ರಾಮಸುರಾರ್ಚಿತ ನಮೋ ನಮೋ
ಪ್ರೇಮಾಂಬುಧಿ ಕಲ್ಯಾಮಯಹರಣ ಕೃತಾಮರಪತಿ ಪ್ರವೃದ್ಧೀಶ ನಮೋ
ತಾಮರಸಾಕ್ಷ್ಯಮಹಾಮುನಿಮಾನಸವ್ಯೋಮಸೋಮ ಸಿರಿವಿಠಲ ನಮೋ॥
॥೧॥

ನಂದಗೋಕುಲ ಶ್ರೀಪಂಢರಿ ನಮೋ ಇಂದುಭಾಗಕಾಳಿಂದಿ ನಮೋ
ಬೃಂದಾವನದೇಗುಲ ನಮೋ ಭಕ್ತರಬೃಂದ ಗೋಪಿಗೋಪಾಳಿ ನಮೋ
ಇಂದ್ರಮನೋದ್ಭವಪೀಠ ನಮೋ ನಮೋ ಚಂದ್ರಚೂಡಶಿರಭೂಷ ನಮೋ
ಚಂದ್ರಸಹಜೆಧರ ನಮೋ ನಮೋ ವಾಯುಜಸಂದನವೋದ್ಧೃತ ನಮೋ
ನಮೋ ॥ ॥೨॥

ಅರ್ತಿಭಂಜನ ಪರಾರ್ಥಪ್ರದ ವರಪಾರ್ಥಸಾರಥಿ ಪರೇಶ ನಮೋ
ಕಾರ್ತಿಕೇಯಪಿತ ಕಾರ್ತಸ್ವರವಪು ಧೂರ್ತಮಾತುಲ ವಿನಾಶ ನಮೋ
ಮೂರ್ತಮಹಿತ ಕೃತಸಾರ್ಥಕಾವತಾರಾರ್ಥಿದಸ್ವರ್ತರು ಮೇಶ ನಮೋ
ಕ್ಷೀರ್ತರ್ವರ ಸಿದ್ಧಾರ್ಥ ವಿಧ್ಯಾತ್ಮಜಕೀರ್ತಿತವ್ಯ ಚತುರಾರ್ಥ ನಮೋ ॥
॥೩॥

ಕಂದಶಾಸ್ತ್ರ ಗೋಸಂಕುಲ ನಮೋ ನಮೋ ನಂದತೀರ್ಥಮುನಿಗೋಪ ನಮೋ
ಮಂದಜಾಸನುಪವೀತ ನಮೋ ನಮೋ ಇಂದ್ರಸೇನೆವರಕೀರ ನಮೋ
ಬೃಂದಾರಕಮುನಿ ಬಂಧುರಗಾಯನ ನಂದೋತ್ಸವ ಸಂಭಾವ್ಯ ನಮೋ
ಸಾಂದ್ರಸುಗುಣ ಚಿನ್ಮಂದಜಾರ್ಕ ಹೃನ್ಮಂದಿರಚರ ಗೋವಿಂದ ನಮೋ ॥
॥೪॥

ಮಹಮನಮೋಹನರೂಪ ಮಹೊದಯ ಯದುಕುಲರತ್ನಪ್ರದೀಪ ನಮೋ
ಅಹೊ ಧಾತವ್ಯಸ್ತ್ರಪ್ಯ ಭವ್ಯಾಭಿದಕ್ರಿಯಶ್ರೋತವ್ಯ ಮಂತವ್ಯ ನಮೋ
ಪ್ರಹರಣ ವಿಶ್ವಾದ್ಯನಂತನಾಮ ಪ್ರಹಸಿತ ಮಂಗಳಮೂರ್ತಿ ನಮೋ
ಸಹಭವ **ತಂದೆ ವೆಂಕಟೇಶ ವಿಠ್ಠಲ** ಸನ್ನಿಹಿತ ಚಿದಾತ್ಮಕ ನಮೋ ನಮೋ ॥
॥೫॥

**ಅರ್ಥವಿವರಣೆ :**

**ಶ್ರೀಮದ್ರುಕ್ಮಿಣಿಭಾಮಾಸಹ** = ಶ್ರೀ ರುಕ್ಮಿಣಿದೇವಿ ಮತ್ತು ಶ್ರೀ ಸತ್ಯಭಾಮಾದೇವಿ ಇವರ ಜೊತೆಯಲ್ಲಿ, **ಶ್ರೀ ಭೀಮಾತೀರವಿಹಾರ** = ಚಂದ್ರಭಾಗಾನದಿಯ ತೀರದಲ್ಲಿರುವ ಪಂಢರಾಪುರದಲ್ಲಿ ವಿಹರಿಸುತ್ತಿರುವ ಪಾಂಡುರಂಗನಿಗೆ ನಮಸ್ಕಾರವು, **ಕಾಮಜನಕ** = ಮನ್ಮಥನ ತಂದೆ, ಪ್ರದ್ಯುಮ್ನನು ಶ್ರೀ ಮನ್ಮಥನ ಅವತಾರ. ಪ್ರದ್ಯುಮ್ನನು ಶ್ರೀಕೃಷ್ಣನ ಪುತ್ರ, **ವಿಧಿ** = ಬ್ರಹ್ಮದೇವರು, **ವ್ಯೋಮಾಳಕ** ವ್ಯೋಮಕೇಶನೆಂಬ ಹೆಸರಿನ ಶ್ರೀರುದ್ರದೇವರು (ವ್ಯೋಮ + ಅಳಕ), **ಸುತ್ರಾಮ** = ಇಂದ್ರ

ದೇವರು, **ಸುರಾರ್ಚಿತ** = ಮೊದಲಾದ ದೇವತೆಗಳಿಂದ ಪೂಜಿಸಲ್ಪಟ್ಟ, **ಪ್ರೇಮಾಂಬುಧಿ** = ದಯಾಸಮುದ್ರ, **ಕಲ್ಯಾಮಯಹರಣ** = ಕಲಿಯ ಪ್ರಭಾವದಿಂದ ಉಂಟಾದ ದೋಷಗಳನ್ನು ನಾಶಮಾಡುವ (ಕಲಿ + ಆಮಯ + ಹರಣ), **ಕೃತಾಮರಪತಿ ಪೃದ್ಪೀಠ** = ಇಂದ್ರನನ್ನೇ ಇಟ್ಟಿಗೆ ಪೀಠವನ್ನಾಗಿ ಮಾಡಿಕೊಂಡ (ಇಂದ್ರದೇವರೇ ಪಾಂಡುರಂಗನ ಪೀಠರೂಪ ದಲ್ಲಿ ಸೇವಿಸುತ್ತಿದ್ದಾರೆ), **ತಾಮರಸಾಖ್ಯಮಹಾಮುನಿಮಾನಸವ್ಯೋಮ ಸೋಮ** = ಪುಂಡರೀಕನೆಂಬ ಹೆಸರುಳ್ಳ (ತಾಮರಸಾಖ್ಯ) ಮುನಿಶ್ರೇಷ್ಠನ ಮನಸ್ಸೆಂಬ ಆಕಾಶದಲ್ಲಿ (ಹೃದಯಾಕಾಶದಲ್ಲಿ–ಮಾನಸವ್ಯೋಮ) ಬೆಳಗು ತ್ತಿರುವ ಚಂದ್ರನಂತಿರುವ (ಸೋಮ), **ಸಿರಿವಿಠ್ಠಲ** = ಸಿರಿಸಹಿತನಾದ ವಿಠ್ಠಲಮೂರ್ತಿಯೇ ನಿನಗೆ ನಮಸ್ಕಾರವು.

**ನಂದಗೋಕುಲ ಪಂಢರೀ** = ನಂದಗೋಕುಲವೇ ಶ್ರೀಪಂಢರಾ ಪುರವು (ಹೋಲಿಕೆ), **ಇಂದುಭಾಗಕಾಳಿಂದಿ ನಮೋ** = ಇಂದುಭಾಗ (ಚಂದ್ರಭಾಗಾ) ನದಿಯೇ ಯಮುನಾನದಿ. (ಕಾಳಿಂದೀ), **ಬೃಂದಾವನ ದೇಗುಲ** = ಶ್ರೀ ಪಂಢರೀನಾಥನ ದೇವಸ್ಥಾನವೇ ಬೃಂದಾವನವು, **ಭಕ್ತರ ಬೃಂದ** = ಪಂಡರಾಪುರಕ್ಕೆ ದರ್ಶನಕ್ಕಾಗಿ ಬಂದಿರುವ ಭಕ್ತ ಜನ ಸಮೂಹವೇ **ಗೋಪಿ ಗೋಪಾಳಿ** = ಗೋಪಿಕಾಸ್ತ್ರೀಯರು ಮತ್ತು ಗೋಪಾಲಕರ ಸಮೂಹವು, **ಇಂದ್ರಮನೋದ್ಭವ ಪೀಠ** = ಇಂದ್ರ ಮತ್ತು ಕಾಮ (ಮನೋದ್ಭವ) ಇವರನ್ನೇ ಪೀಠವನ್ನಾಗಿ ಉಳ್ಳವನೇ, **ಚಂದ್ರಚೂಡ ಶಿರಭೂಷ** ಚಂದ್ರಮೌಳಿಯಾದ ರುದ್ರನೇ ಕಿರೀಟವಾಗಿದ್ದಾನೆ. (ಶ್ರೀ ರುದ್ರದೇವರೇ ಪಾಂಡುರಂಗನ ಕಿರೀಟರೂಪದಲ್ಲಿ ಸೇವಿಸುತ್ತಿದ್ದಾರೆ) **ಚಂದ್ರಸಹಜೆಧರ** = ಸಮುದ್ರ ಮಥನ ಸಮಯದಲ್ಲಿ ಚಂದ್ರನ ಜೊತೆಯಲ್ಲಿ ಹುಟ್ಟಿದವಳು ಶ್ರೀಲಕ್ಷ್ಮೀ (ಚಂದ್ರ ಸಹಜೆ). ಅಂತಹ ಲಕ್ಷ್ಮೀದೇವಿಯೇ ಪಾಂಡುರಂಗನು ಧರಿಸಿರುವ ಶಂಖರೂಪದಲ್ಲಿದ್ದಾಳೆ (ಧರ), **ವಾಯುಜ ಸಂದನವೋದ್ಧೃತ** = ವಾಯುದೇವರೇ (ವಾಯುಜ), ಇನ್ನೊಂದು ಕೈಯಲ್ಲಿ(ಸಂದ) ಹಿಡಿದಿರುವ ಬೆಣ್ಣೆ (ನವೋದ್ಧೃತ). ಶ್ರೀ ಪಾಂಡುರಂಗನ ಒಂದು ಕೈಯಲ್ಲಿ ಶಂಖರೂಪದಲ್ಲಿ ಶ್ರೀಲಕ್ಷ್ಮೀ ಮತ್ತು ಇನ್ನೊಂದು

ಕೈಯ್ಯಲ್ಲಿ ಬೆಣ್ಣೆ ರೂಪದಲ್ಲಿ ಶ್ರೀವಾಯುದೇವರು ಸೇವಿಸುತ್ತಿದ್ದಾರೆ. ಶ್ರೀವಿಠ್ಠಲನದು ಮನೋಮಯ ವಿಗ್ರಹ ಶಿರಸ್ಸಿನಿಂದ ಪಾದ ಪರ್ಯಂತ ಮನೋವ್ಯಾಪಾರಕ್ಕೆ ಸಾಂಕೇತವು.

**ಅರ್ತಿಭಂಜನ** = ಭಕ್ತರ ದುಃಖವನ್ನು ನಾಶಪಡಿಸುವವನು. **ಪರಾರ್ಥಪ್ರದ** - ಪರಮಪುರುಷಾರ್ಥರೂಪವಾದ ಮುಕ್ತಿದಾಯಕನು. **ವರಪಾರ್ಥಸಾರಥಿ** = ಶ್ರೇಷ್ಠನಾದ ಅರ್ಜುನನ ಸಾರಥಿಯಾದ ಶ್ರೀಕೃಷ್ಣ **ಪರೇಶ**= ಅಕ್ಷರನಾಮಕಳಾದ ಲಕ್ಷ್ಮೀದೇವಿಗೂ (ಪರ) ನಿಯಾಮಕನು (ಈಶ). **ಕಾರ್ತಿಕೇಯ ಪಿತ**= ಷಣ್ಮುಖನ ತಂದೆ (ಷಣ್ಮುಖನು ಕಾಮನ ಅವತಾರನು), **ಕಾರ್ತಸ್ವರವಪು** = ಚಿನ್ನದಂತೆ ಹೊಳೆಯುವ ದೇಹವುಳ್ಳವನು. (ಕಾರ್ತಸ್ವರ-ಚಿನ್ನ. ವಪು-ಶರೀರ). **ಧೂರ್ತಮಾತುಲ ವಿನಾಶ**= ದುಷ್ಟನಾಗಿದ್ದ ತನ್ನ ಸೋದರಮಾವ (ಮಾತುಲ) ಕಂಸಾಸುರ ನನ್ನು ಕೊಂದವನು. **ಮೂರ್ತಮಹಿತ** = ಮೂರ್ತಿರೂಪದಲ್ಲಿರುವನು (ಜಡಪ್ರತೀಕ) (ಅಮೂರ್ತ–ಎಂದರೆ, ಮಾನಸವಿಗ್ರಹ). ಮಹಿತ– ಸ್ತೋತ್ರಕ್ಕೆ ಯೋಗ್ಯನಾದವನು. **ಕೃತಸಾರ್ಥಕಾವತಾರ** = ತನ್ನ ಸಕಲಾವತಾರಗಳಲ್ಲೂ ಸಂಕಲ್ಪ ಪೂರ್ತಿಮಾಡಿಕೊಂಡವನು. (ಸತ್ಯ ಸಂಕಲ್ಪನು), **ಅರ್ಥಿದ**= ಬೇಡಿದನ್ನು ಕೊಡುವವನು. **ಸ್ವರ್ತರು** = ಕಲ್ಪವೃಕ್ಷ ಸದೃಶನು (ಸ್ವರ್ + ತರು = ಸ್ವರ್ಗದ ವೃಕ್ಷ–ಕಲ್ಪವೃಕ್ಷ) **ಮೇಶ** = ರಮಾಪತಿ (ಮಾ + ಈಶ). **ಕ್ಷೀರ್ತರ್ವರ** = ಹಾಲನ್ನು ತರುವ ಗೋಪಿಕಾಸ್ತ್ರೀಯರ (ಕ್ಷೀರ + ತರ್ವರ), **ಸಿದ್ಧಾರ್ಥ** = ಇಷ್ಟವನ್ನು ಪೂರೈಸುವ (ಸಿದ್ಧ + ಅರ್ಥ). **ವಿಧ್ಯಾತ್ಮಜ** = ಬ್ರಹ್ಮನ ಮಗ ರುದ್ರ ಹಾಗೂ ನಾರದರಿಂದ (ವಿಧಿ + ಆತ್ಮಜ), **ಕೀರ್ತಿತವ್ಯ** = ಕೀರ್ತಿ ಸಲ್ಪಡುವವನು. **ಚತುರಾರ್ಥ** = ಧರ್ಮ–ಅರ್ಥ–ಕಾಮ–ಮೋಕ್ಷಗಳೆಂಬ ಚತುರ್ವಿಧ ಪುರುಷಾರ್ಥಪ್ರದನು.

**ಕಂದಶಾಸ್ತ್ರ** = ಕಂ ಮೋಕ್ಷ ಸುಖವನ್ನು, ದ : ಕೊಡುವ ಅಂದರೆ ಮೋಕ್ಷಪ್ರದವಾದ ಶ್ರೀಮದಾಚಾರ್ಯರ ಶಾಸ್ತ್ರ (ಆಚಾರ್ಯರು

"ಕಪಿ"– ಎಂಬ ಪದದ ಅರ್ಥವನ್ನು ವಿವರಿಸುವಾಗ, ಕಂಪಿಬತೀತಿ = ಕಪಿ ಅಂದರೆ ಕಂ = ಮೋಕ್ಷಾನಂದವನ್ನು, ಪಿಬತೀತಿ = ಭೋಗಿಸತಕ್ಕವ– ಎಂದಿದ್ದಾರೆ) **ಗೋಸಂಕುಲ** - ವೇದಸಮೂಹಗಳಿಂದ ನಮ್ಯನಾದವನು (ಗೋ–ವೇದಗಳು ಸಂಕುಲ–ಸಮೂಹ). **ನಂದತೀರ್ಥಮುನಿಗೋಪ** = ಶ್ರೀಮದಾಚಾರ್ಯರೇ ಗೋಪಾಲಕರು (ತತ್ತ್ವವಾದವೇ – ಶ್ರೀಮದಾಚಾರ್ಯರ ಶಾಸ್ತ್ರಗಳು. ಗೋವುಗಳು ಅವುಗಳನ್ನು ಗೋಪ– ಕಾಯುವ ಗೋಪಾಲಕರು ಗುರುಮಧ್ವರು) **ಮಂದಜಾಸನುಪವೀತ** = ಕಮಲೋದ್ಭವರಾದ ಬ್ರಹ್ಮದೇವರೇ ಪಾಂಡುರಂಗನ ಯಜ್ಞೋಪವೀತ ರೂಪದಲ್ಲಿದ್ದಾರೆ. **ಇಂದ್ರಸೇನೆವರಕೀರ** = ಭಾರತಿಯೇ (ಇಂದ್ರಸೇನೆ) ಶ್ರೇಷ್ಠವಾದ ಗಿಳಿ(ವರಕೀರ) (ಶುಕ ರೂಪ-ಭಾಗವತಶಾಸ್ತ್ರಕ್ಕೆ ಭಾರತೀಯೇ ಅಭಿಮಾನಿ), **ಬೃಂದಾರಕ ಮುನಿ** = ದೇವರ್ಷಿಗಳಾದ ನಾರದರ (ಪುರಂದರ ದಾಸರ), **ಬಂಧುರಗಾಯನ** = ಮಧುರವಾದ ಕೀರ್ತನೆಯೇ, **ನಂದೋತ್ಸವ** = ಆನಂದೋದ್ರೇಕದಲ್ಲಿ, **ಸಂಭಾವ್ಯ** = ಭಾವನಾ ಪ್ರಪಂಚದಲ್ಲಿ, **ಸಾಂದ್ರಸುಗುಣ** – ಅಪ್ರಾಕೃತ ಮುಗಳ ಗುಣ ಸಮೂಹ ಗಳಿಂದ ಸಾಂದ್ರನಾದವನು, **ಚಿನ್ಮಂದಜಾರ್ಕ** = ಚಿತ್ತವೆಂಬ ಕಮಲವನ್ನು ಅರಳಿಸುವ ಸೂರ್ಯಸದೃಶನು (ಚಿತ್ + ಮಂದಜ + ಅರ್ಕ), **ಹೃನ್ಮಂದಿರ ಚರ** = ಹೃದಯಾಕಾಶದಲ್ಲಿ ಸಂಚರಿಸುವ ಬಿಂಬಮೂರ್ತಿಯು. **ಗೋವಿಂದ** = ವೇದಗಳನ್ನು ಪಾಲನೆ ಮಾಡುವವನು.

**ಮಹಮನಮೋಹನ ರೂಪ** = ಮಹತ್ತತ್ತ್ವಕ್ಕೆ ಅಭಿಮಾನಿಗಳಾದ ಬ್ರಹ್ಮ-ಸರಸ್ವತೀ–ವಾಯು-ಭಾರತಿಯರ ಮನಸ್ಸನ್ನು ಮೋಹಗೊಳಿಸು- ವವನು. **ಮಹೋದಯ** = ಬೃಹತ್ತರವಾದ ರೂಪವುಳ್ಳವನು. (ಮಹತ್ತಿಗೆ ಮಹತ್ತು), **ಯದುಕುಲ ರತ್ನ ಪ್ರದೀಪ** = ಯದುವಂಶಕ್ಕೇ ರತ್ನಪ್ರಾಯನಾಗಿ ಪ್ರಕಾಶಿಸುವವನು. **ಧಾತವ್ಯ** = ಧ್ಯಾನಕ್ಕೆ ಯೋಗ್ಯನು (ಧ್ಯಾನಕ್ಕೆ ಮುಖ್ಯ ವಿಷಯನು), **ಸ್ತವ್ಯ** = ಸ್ತವನ, ಅಂದರೆ, ಸ್ತೋತ್ರಕ್ಕೆ ಯೋಗ್ಯನು. **ಭವ್ಯಾಭಿಧೇಕ್ರಿಯಾ** = ಭವ್ಯವಾದ ಕ್ರೀಡಾವಿಶಿಷ್ಟನು. **ಶ್ರೋತವ್ಯ** = ಶ್ರವಣಕ್ಕೆ ಯೋಗ್ಯನು (ಶ್ರವಣಮಂಗಳಧೇಯನು),

**ಮಂತವ್ಯ** = ಮನನಕ್ಕೆ ಯೋಗ್ಯನು (ಜಿಜ್ಞಾಸಾವಿಷಯನು), **ಪ್ರಹರಣ ವಿಶ್ವಾದ್ಯನಂತ ನಾಮ** = ವಿಶ್ವದಿಂದ ಪ್ರಾರಂಭಿಸಿ, ಪ್ರಹರಣದೊಂದಿಗೆ ಅಂತ್ಯವಾಗುವ ವಿಷ್ಣುಸಹಸ್ರನಾಮ, ಹಾಗೂ ಅನಂತಾನಂತ ನಾಮ ಗಳುಳ್ಳವನು (ಪ್ರಹರಣ-ಹೊಡೆತ-ಬಡಿತ-ಹೋರಾಟ-ಯುದ್ಧ), **ಪ್ರಹಸಿತ** = ಸಂತೋಷವನ್ನುಂಟುಮಾಡುವ, **ಮಂಗಳಮೂರ್ತಿ** = ಮಂಗಳ ವಿಗ್ರಹನು, **ಸಹಭವ** - ಎಲ್ಲಾ ಜೀವರೊಡನೆ ಹುಟ್ಟುವವನು (ಜನಿತೊsಥ ವಿಷ್ಣು;-ಶ್ರುತಿ), **ಸನ್ನಿಹಿತ** = ಜೀವನಿಗೆ ಸಮೀಪದಲ್ಲಿರುವ (ನಿತ್ಯಾ ವಿಯೋಗಿ ಬಿಂಬರೂಪ), **ಚಿದಾತ್ಮಕ** = ಚಿದ್ರೂಪಿಯಾದವನೇ (ಚಿತ + ಆತ್ಮರ).



## ೧೩

### (ವಿಜಯವಿಠ್ಠಲಾಂಕಿತ)

**ರಾಗ–ಮಾಂಡ್ :** **ಆದಿತಾಳ**

ಹರೇ ವಿಠ್ಠಲಾ–ಪಾಂಡುರಂಗ–ಪರಿಪಾಲಯ–ಕಂಸಾರೇ ॥ ॥ಪ॥

ಕರಕಮಲದ್ವಯ ಕಟಿಯ ಮೇಲೆ ಇಟ್ಟ
ಪರಮಪುರುಷ ಶೌರೇ–ಮುರಾರೇ ॥ ॥ಅ॥

ಜಲಜ ಭವಾದಿ ಸುರಸುನ್ನತ ಪಾದ-ಜಲಜನಾಭನಾದ
ಕಲುಷ ದೂರ ಕರುಣಾಕರ ರಂಗ
ಸುಲಲಿತ ಮಹಿಮ ಹರೇ-ಮುರಾರೇ ॥ ॥೧॥

ಪುಂಡಲೀಕ ವರದಾತ-ಮುಕುಂದ-ಕುಂಡಲಿಶಯನ ಹರೇ
ಅಂಡಜವಾಹನ-ಅಪ್ರಾಕೃತಕಾಯ
ಕುಂಡಲಧರ ಹರೇ ಮುರಾರೇ ॥ ॥೨॥

ದಿಟ್ಟತನದಿ-ಹರಿಭಕ್ತ ಕೊಟ್ಟ-ಇಟ್ಟಿಗೆ ಮೇಲೆ ನಿಂತ ದೇವ
ಸೃಷ್ಟಿಗೊಡೆಯ **ಶ್ರೀವಿಜಯವಿಠ್ಠಲ**
ದುಷ್ಟಕುಲಾಂತಕನೇ-ಶ್ರೀಕೃಷ್ಣಾ ॥ ॥೩॥

**ಅರ್ಥವಿವರಣೆ :**

**ಪರಿಪಾಲಯ** = ಸಂರಕ್ಷಿಸು. **ಕಂಸಾರೇ** = ಕಂಸನನ್ನು ಕೊಂದ ಕೃಷ್ಣ **ಕರಕಮಲದ್ವಯ** = ಕಮಲದಂತೆ ಸುಂದರವಾದ ಎರಡು ಕೈಗಳನ್ನು, **ಕಟಿಯ ಮೇಲಿಟ್ಟ** = ತನ್ನ ಸೊಂಟದ ಮೇಲೆ ಇಟ್ಟುಕೊಂಡು ನಿಂತಿದ್ದಾನೆ ಶ್ರೀಪಾಂಡುರಂಗಮೂರ್ತಿ ನನ್ನನ್ನು ನಂಬಿದ ಭಕ್ತರಿಗೆ ಸಂಸಾರ ಸಮುದ್ರವು ಸೊಂಟದಮಟ್ಟ ಎಂಬ ಸಾಂಕೇತರೂಪದ ಅಭಯಹಸ್ತದ್ವಯಗಳು, **ಪರಮಪುರುಷ**—ಸರ್ವೋತ್ತಮ ದೇವತಾ, **ಶೌರೇ** = ಶೂರಸೇನ ಮಹಾ ರಾಜನ ವಂಶದಲ್ಲಿ ಅವತರಿಸಿದ ಶ್ರೀಕೃಷ್ಣ, **ಮುರಾರೇ** ಮುರಾ-ಎಂಬ ಅಸುರಸಂಹಾರಿ ಶ್ರೀಕೃಷ್ಣ.

**ಜಲಜ** = ಕಮಲ ಈ ಸಾಂಕೇತವು ಶ್ರೀಪರಮಾತ್ಮನ ನಾಭೀಕಮಲ ಸಂಜಾತರಾದ ಬ್ರಹ್ಮದೇವರು, **ಭವಾದಿ** ಭವನಾಮಕನಾದ ರುದ್ರ ದೇವರೇ ಮೊದಲಾದ, **ಜಲಜನಾಭ** ಪದ್ಮನಾಭರೂಪೀ ಶ್ರೀಹರಿ, **ಕಲುಷದೂರ** = ಸರ್ವದೋಷ ವಿವರ್ಜಿತನು, **ರಂಗ** = ಜೀವದ ಅಂತರಂಗ ದಲ್ಲಿ ಕ್ರೀಡಿಸುವ ಬಿಂಬಮೂರ್ತಿ. **ಸುಲಲಿತ ಮಹಿಮ** = ಮಂಗಳಮಯ ನಾದ ಮಹಾಮಹಿಮಾಸಂಪನ್ನನು.

**ಪುಂಡಲೀಕ ವರದ** = ಮಾತಾಪಿತೃಗಳ ಸೇವೆಯಲ್ಲಿ ನಿರತನಾಗಿದ್ದ ಪುಂಡರೀಕನೆಂಬ ಮುನಿಶ್ರೇಷ್ಠನಿಗೆ ಒಲಿದ ಶ್ರೀಪಾಂಡುರಂಗ, **ಮುಕುಂದ** = ಮುಕ್ತಿಪ್ರದನು, **ಕುಂಡಲಿಶಯನ** = ಶೇಷಶಯನ (ಕುಂಡಲಿ-ಸುತ್ತು ಕೊಂಡಿರುವ ಸರ್ಪ) **ಅಂಡಜವಾಹನ** = ಗರುಡವಾಹನನು (ಅಂಡಜ = ಮೊಟ್ಟೆಯಿಂದ ಜನಿಸಿದ ಪಕ್ಷಿವರ್ಗ, ಇಲ್ಲಿ ಪಕ್ಷಿಶ್ರೇಷ್ಠರಾದ ಗರುಡದೇವರು, **ಅಪ್ರಾಕೃತಕಾಯ** = ಜ್ಞಾನಾನಂದಮಯ ಶರೀರಿ, **ಕುಂಡಲಧರ** = ಕರ್ಣಕುಂಡಲ ಧಾರಿ.

**ದಿಟ್ಟತನದಿ** = ಧೈರ್ಯದಿಂದ ಪುಂಢರೀಕನು ಎಸೆದ ಇಟ್ಟಿಗೆಯ ಮೇಲೆ ನಿಂತಿದ್ದಾನೆ ಶ್ರೀ ಪಾಂಡುರಂಗ, **ಸೃಷ್ಟಿಗೊಡೆಯ** = ಬ್ರಹ್ಮಾಂಡ ಗತ ಸಕಲ ಚೇತನಾ ಚೇತನಗಳಿಗೆ ಪ್ರಭುಣ, **ದುಷ್ಟಕುಲಾಂತಕನೇ** = ದುರುಳ ದಾನವರ ಸಂಹಾರಿ. (ಅವರಿಗೆ ಮೃತ್ಯು ಸ್ವರೂಪನು)



## ೧೪

**(ತಂದೆ ವೆಂಕಟೇಶವಿಠ್ಠಲಾಂಕಿತ)**

**ರಾಗ : ತೋಡಿ** ಆದಿತಾಳ

ನಿಲ್ಲೋ ವಿಠ್ಠಲಾ ಸರಿ–ಯಲ್ಲಾ ನಿನ್ನವರವ
ರಲ್ಲಿ ಈ ಬಿಗುಮಾನವೇ ॥ ॥ಪ॥

ವಲ್ಲಭನೆಂದಮಿತೋಲ್ಲಾಸದಲಿ ಬರೆ
ಸೊಲ್ಲು ಲಾಲಿಸದೆ ಮತ್ತೆಲ್ಲಿಗೆ ಸರಿಯುವೆ ॥ಅ॥

ಅಚ್ಯುತಾರ್ಪಿತವೆಂದು–ದಾಸರೆನಲು ಕಲ
ಗಟ್ಟಿ ಕುಡಿಯಲಿಲ್ಲವೇ ।
ಮುಚ್ಚಟೆ ಇಲ್ಲದೆ-ಮೆಚ್ಚಿ ಶಬರಿಯುಳ
ಉಚ್ಛಿಷ್ಟ ಉಣಲಿಲ್ಲವೇ ।
ಮಚ್ಛಾದ್ಯವತಾರದಿ-ಸಚ್ಚೇತನರ ಭವ್ಯ
ಇಚ್ಛೆ ಸಲಿಸಲಿಲ್ಲವೇ ॥
ಕಚ್ಚೀಬೈದೊಡ್ಡವರಿಗ್ಹೆಚ್ಚಿನಫಲವಿತ್ತ
ಹುಚ್ಚುಧೊರೆಯೆ ಎನ್ನ ತುಚ್ಛೀಕರಿಸೆ ಬಿಡೆ ॥ ॥೧॥

ಕುಂಡಗೋಳಕರಲ್ಲಿ–ಗಂಡಕಳಕಗಿದ್ದು ನರನ
ಬಂಡೀ ಹೊಡೆಯಲಿಲ್ಲವೇ ।
ಹೊಂಡಾದಾನೆಯು–ದುಃಖ ಖಂಡೀಸಬೇಕೆಂದು
ಕೊಂಡೋಡಿ ಬರಲಿಲ್ಲವೇ ।
ಕಂಡು ಪಾಕದ ಶೇಷ–ಉಂಡಾಪ್ತ ಮಿತ್ರರ
ಗಂಡ ಹರಿಸಲಿಲ್ಲವೇ ॥
ಹಿಂಡು ವೈಷ್ಣವ ಪಾದ–ಪುಂಡರೀಕಾಳಿಯು
ಕಂಡೂ ಕಾಣದ ಹಾಗೆ–ಭಂಡೂ ಮಾಡಲು ಬಿಡೆ ॥ ॥೨॥

ಬಲಿಯ ಬಾಗಿಲ ಕಾಯ್ದು–ಶಿಲೆಯ ಸತಿಯಳಮಾಡಿ
ಒಲಿದಂಬರೀಷನ ಸಲಹಿಲ್ಲವೇ ।
ಹಲಿ ಛಲಿ ದೂರ್ವಾಸ–ಕಲಿ ಭೀಷ್ಮ ದ್ರೋಣರಿ
ಗೊಲಿದು ಪೊರೆದವನಲ್ಲವೇ ।
ಇಳೆಯೊಳು ಭಕ್ತರ–ಕುಲಕೋಟಿಗೊಲವಿನಿಂ
ಫಲವಾ ನೀಡುತಲಿಲ್ಲವೇ ॥
ಹಲಮಾಡಲೇಕೆ ತಂದೆ **ವೆಂಕಟೇಶವಿಠ್ಠಲ**
ಒಲಿದವರಂತೆನ್ನ–ಸಲಹದಿದ್ದರೆ ಬಿಡೆ॥ ನಿಲ್ಲೋ ವಿಠ್ಠಲಾ ॥

**ಅರ್ಥವಿವರಣೆ :**

ಪ್ರಸಕ್ತ ಕೀರ್ತನೆ ಸಾಹಿತ್ಯವನ್ನು **ಶ್ರೀ ತಂದೆವೆಂಕಟೇಶವಿಠ್ಠಲಾಂಕಿತ** ದಾಸವರ್ಯರು ಪ್ರಾಸಂಗಿಕವಾಗಿ ರಚಿಸಿದ್ದಾರೆ.

**ಸರಿಯಲ್ಲಾ** = ಇದು ನಿನಗೆ ತರವಲ್ಲ, **ಇನ್ನವರಲಿ** = ನಿನ್ನನ್ನೇ ನಂಬಿದವರಲ್ಲಿ, **ಈ ಬಿಗುಮಾನವೇ** ಇಂತಹ ಬಿಗುಮಾನದ ಭಾವನೆಯೇ

**ವಲ್ಲಭನೆಂದು** = ನೀನೇ ನನ್ನ ಸ್ವಾಮಿ ಎಂದು, **ಅಮಿತ ಉಲ್ಲಾಸ ಪಲಿ ಬರೆ** = ಅತ್ಯಂತ ಉಲ್ಲಾಸದ ಮನಸ್ಸಿನಿಂದ ನಿನ್ನೆಡೆಗೆ ಬರುತ್ತಿರಲಾಗಿ,

**ಸೊಲ್ಲು ಲಾಲಿಸದೆ** = ನನ್ನ ಮಾತನ್ನು ಕೇಳದೇ (ಕಿವಿಯ ಮೇಲೆ ಹಾಕಿಕೊಳ್ಳದೇ), **ಮತ್ತೆಲ್ಲಿಗೆ ಸರಿಯುವೆ ?** = ಇನ್ನೆಲ್ಲಿಗೆ ಹೋಗುವೇ ? ಹೇ ಪ್ರಭುವೇ !

**ಅಚ್ಯುತಾರ್ಪಿತವೆಂದು** = ಶ್ರೀ ಪುರಂದರದಾಸವರ್ಯರ ಜೀವನದಲ್ಲಿ ನಡೆದ ಪ್ರಸಂಗ ವಿಶೇಷ. ಒಮ್ಮೆ ಶ್ರೀ ಪುರಂದರದಾಸರು ದೇವರಿಗೆ ನೈವೇದ್ಯ ಅರ್ಪಿಸುವ ಸಮಯದಲ್ಲಿ ಪ್ರಾಸಂಗಿಕವಾಗಿ ಒದಗಿದ್ದ ಕಲ-ಗಚ್ಚನ್ನೇ ಕೃಷ್ಣಾರ್ಪಣ ಬುದ್ಧಿಯಿಂದ ಅರ್ಪಿಸಿದರು. ಆಗ ಪಾಂಡುರಂಗನ ಬಾಯಿಯಲ್ಲಿ ಬಿಳಿಯ ಬಣ್ಣದ ದ್ರವವು ಒಸರಿಸತೊಡಗಿತು. ದಾಸರು ಅರ್ಪಿಸಿದ ಕಲಗಚ್ಚನ್ನು ಸ್ವೀಕರಿಸಿದ ವಿಶೇಷ ಪ್ರಸಂಗ, **ಮುಚ್ಚಟೆಯಿಲ್ಲದೆ** = ಬಿಗುಮಾನಮಾಡದೇ ತೆರೆದ ಮನಸ್ಸಿನಿಂದ, **ಶಬರಿಯುಳ ಉಚ್ಚಿಷ್ಟ** - ಭಕ್ತಳಾದ ಶಬರಿಯು ಕಚ್ಚಿ ಎಂಜಲು ಮಾಡಿದ್ದ ಫಲಗಳನ್ನು ಶ್ರೀರಾಮ ಸ್ವೀಕರಿಸಲಿಲ್ಲವೇ ? **ಮಚಾದ್ಯವತಾರದಿ** = ಮತ್ಸ್ಯಾದಿ ದಶಾವತಾರಗಳಲ್ಲಿ, **ಭವ್ಯ ಇಚ್ಛಿಸಲಿಲ್ಲವೇ** = ಸಜ್ಜನರಾದ ಭಕ್ತರ ಕೋರಿಕೆಗಳನ್ನು ಈಡೇರಿಸಲಿಲ್ಲವೇ ? ಶ್ರೀ ಹರಿಯು ಧರ್ಮಸ್ವರೂಪಿ. ಧರ್ಮ ಸಂಸ್ಥಾಪನೆಗಾಗಿ ಆಗಿಂದ್ದಾಗ್ಗೆ ಅವತರಿಸುವ ಕರುಣಾಮೂರ್ತಿ. ದುಷ್ಟ ಶಿಕ್ಷಣ, ತದ್ದ್ವಾರಾ ಶಿಷ್ಟರ ರಕ್ಷಣೆಯೇ ಅವನ ಅವತಾರಗಳ ಉದ್ದೇಶ್ಯ. **ಕಚ್ಚಿ** = ಕೃಷ್ಣನನ್ನು ಕಾಳಿಂಗ ಸರ್ಪ ಕಚ್ಚಿದ ಪ್ರಸಂಗ ವಿಶೇಷ, **ಬೈದು** - ರಾಜಸೂಯಯಾಗ ಕಾಲದಲ್ಲಿ ಚೇದಿರಾಜನಾದ ಶಿಶುಪಾಲನು (ಜೀವದ್ವಯಾವೇಷ್ಠಿತ) ಬೈದ ಪ್ರಸಂಗ, **ಒದ್ದವರಿಗೆ** ಹರಿಯ ವಕ್ಷಸ್ಥಳವನ್ನು ಒದ್ದ ಭೃಗು ಋಷಿ. ನಿನಗೆ ಅಪಚಾರ ಮಾಡಿದ ಇಂತಹ ಭಕ್ತರಿಗೆಲ್ಲಾ ಅನುಗ್ರಹಿಸಿ, ಉಚ್ಚ ಫಲವನ್ನಿತ್ತೆ. ನೀನೊಬ್ಬ ಹುಚ್ಚುದೊರೆ, **ತುಚ್ಛೀಕರಿಸೆ** = ಅಂತಹ ದಯಾಮಯನಾದ ನೀನು ನನ್ನನ್ನು ನಿರಾಕರಿಸಿದರೆ, ನಾನೆಂದಿಗೂ ನಿನ್ನನ್ನು ಬಿಡುವುದಿಲ್ಲ ಎನ್ನುತ್ತಾರೆ ದಾಸವರ್ಯರು. ಅವರ ಆತ್ಮಸ್ಥೈರ್ಯ ಮತ್ತು ನಿಷ್ಠೆ ಎಂತಹದಿರಬೇಕು ?

**ಕುಂಡಗೋಳಕರಲ್ಲಿ** = ಪತಿಯು ಜೀವಿಸಿರುವಾಗಲೇ ಪರಪುರುಷ

ನಿಂದ ಹುಟ್ಟಿದವರಿಗೆ 'ಕುಂಡ' ಎಂದು ಹೆಸರು. ಕನ್ಯಾವಸ್ಥೆಯಲ್ಲಿ ಪರ ಪುರುಷನಿಂದ ಹುಟ್ಟಿದವರಿಗೆ 'ಗೋಳಕ' ಎಂದು ಹೆಸರು, ಕುಂತೀದೇವಿ ಯಲ್ಲಿ ಜನಿಸಿದ ಧರ್ಮರಾಜಾದಿ ಪಂಚಪಾಂಡವರು, **ಗಂಡಾಳಾಗಿದ್ದು** = ಅಂತಹ ಪಾಂಡವರಿಗೆ ಆಳಿನಂತೆ ಸೇವೆ ಮಾಡಿದ ಶ್ರೀಕೃಷ್ಣ, **ನರನಬಂಡಿ** = ಪಾರ್ಥಸಾರಥಿಯಾದದ್ದು, **ಹೊಂಡದಾನೆಯು** = ಮಡುವಿನಲ್ಲಿ ಮೊಸ ಳೆಯ ಬಾಯಿಗೆ ಸಿಕ್ಕಿ ನರಳಿದ ಗಜೇಂದ್ರ, **ದುಃಖ ಖಂಡಿಸಬೇಕೆಂದು** = ಗಜರಾಜನ ಕ್ಲೇಶವನ್ನು ಪರಿಹರಿಸಬೇಕೆಂದು ಕೊಂಡು ಅವನಿದ್ದೆಡೆಗೆ ಓಡಿ ಬಂದು (ಧಾವಿಸಿ), ಚಕ್ರದಿಂದ ನಕ್ರನನ್ನು ಸೀಳಿ, ಗಜನನ್ನು ಉದ್ಧರಿಸಿದ ಕರಿರಾಜ ವರದನು, **ಕಂಡ ಪಾಕದ ಶೇಷ** = ಆ ಕಾಲದಲ್ಲಿ ದೂರ್ವಾಸ ಮುನಿಗಳು ಶಿಷ್ಯಸಹಿತರಾಗಿ ಪಾಂಡವರಲ್ಲಿಗೆ ಭೋಜನಕ್ಕೆ ಬಂದಾಗ, ದ್ರೌಪದಿಯು ಮೊರೆ ಕೇಳಿ, ಪ್ರತ್ಯಕ್ಷನಾದ ಶ್ರೀಕೃಷ್ಣನು ಅಕ್ಷಯ ಪಾತ್ರೆ ಯಲ್ಲಿ ಪಾಕ ಶೇಷವನ್ನು ಕಂಡ. ಶ್ರೀಕೃಷ್ಣನ ಕಣ್ಣುಗಳು ಸೂರ್ಯಚಂದ್ರ ರಿಗೆ ಆಶ್ರಯ ಸ್ಥಾನ. ಸೂರ್ಯನ ಪ್ರಕಾಶದಲ್ಲಿಯೇ ಅಕ್ಷಯ ಪಾತ್ರೆಯು ಅಶನವನ್ನು ನೀಡುವುದು. ಸರ್ವ ಸೃಷ್ಟಿ ಕರ್ತನಾದ ಶ್ರೀಕೃಷ್ಣನು ಇಚ್ಛಾ ಮಾತ್ರದಿಂದ ಪಾಕ ಶೇಷವನ್ನು ನೇತ್ರದೃಷ್ಟಿಯಿಂದ ಸೃಷ್ಟಿಸಿ ಪಾಂಡವರಿಗೆ ಬಂದಿದ್ದ ಗಂಡಾಂತರವನ್ನು ಪರಿಹರಿಸಿದ ಪ್ರಸಂಗ, **ಆಪ್ತಮಿತ್ರರ ಗಂಡ** = ತನಗೆ ಪರಮಾಪ್ತರಾದ ಪಾಂಡವರ (ಮಮ ಪ್ರಾಣಾಹಿ ಪಾಂಡವಾ :- ಎಂದು ಶ್ರೀಕೃಷ್ಣನ ವಚನ) ಆಪತ್ತನ್ನು ಪರಿಹರಿಸಿದನು, **ಹಿಂಡು ವೈಷ್ಣವ** = ವಿಷ್ಣು ಭಕ್ತರ ಸಮೂಹ, **ಪಾದ ಪುಂಡರೀಕಾಳಿಯು** = ವಿಷ್ಣು ಭಕ್ತರ ಪಾದಕಮಲಗಳ ಸಮೂಹ (ಪಾದ-ಕಾಲು, ಪುಂಡರೀಕ-ಕಮಲ, ಆಳಿ- ಸಮೂಹ) **ಭಂಡು ಮಾಡಲು ಬಿಡೆ** = ವಿಷ್ಣು ಭಕ್ತರನ್ನು ನೋಡಿ ನೋಡದ ಹಾಗೆ ದೂರೀಕರಿಸಿದರೆ, ಭಂಡಾಳ ಮಾಡಿದರೆ ನಿನ್ನನ್ನು ಎಂದೆಂ ದಿಗೂ ಬಿಡೆ.

**ಬಲಿಯ ಬಾಗಿಲ ಕಾಯ್ದು** ವಾಮನಾವತಾರದಲ್ಲಿ ಬಲಿಯ ಶಿರದ ಮೇಲೆ ಪಾದವನ್ನೊತ್ತಿ, ಅವನನ್ನು ರಸಾತಳಕ್ಕೆ ತುಳಿದು, ಅವನ ಕೋರಿಕೆಯಂತೆ ಇಂದಿಗೂ ಬಲಿಯ ಅರಮನೆಯ ದ್ವಾರಪಾಲಕನಾಗಿದ್ದಾನೆ

ಸುಂದರ ರೂಪೀ ಶ್ರೀವಾಮನ, **ಸತಿಯು ಶಿಲೆಯುಳ ನಾಡಿ** = ಗೌತಮನ ಪತ್ನಿ ಅಹಲ್ಯೆಯು ಶಾಪಗ್ರಸ್ಥಳಾಗಿ ಶಿಲಾರೂಪದಲ್ಲಿದ್ದಾಗ ತನ್ನ ಪಾದ ಸ್ಪರ್ಶದಿಂದ ಶಾಪವಿಮೋಚನೆ ಮಾಡಿದ ಶ್ರೀರಾಮಚಂದ್ರ. ಎರಡೂ ದೃಷ್ಟಾಂತಗಳೂ ಶ್ರೀಹರಿಯ ಪಾದಸ್ಪರ್ಶ ಮಹಿಮಾದ್ಯೋತಕ, **ಅಂಬರೀಷನ** = ಇಕ್ಷ್ವಾಕುವಂಶದ ಮಾಂಧಾತೃ ಚಕ್ರವರ್ತಿಯ ಪುತ್ರ. ಈತನ ತಾಯಿ ಬಿಂದುಮತಿ. ಅಯೋಧ್ಯಾಪುರದರಸು. ಏಕಾದಶೀ ವ್ರತಪರಾಯಣನು. ಒಮ್ಮೆ ದೂರ್ವಾಸಮುನಿಯು ದ್ವಾದಶೀ ಬೆಳಗ್ಗೆ ಅಂಬರೀಷನ ಅರಮನೆಗೆ ಬಂದು ಭೋಜನಕ್ಕೆ ಆಹೂತನಾದ. ಸ್ನಾನಾದಿ ಗಳನ್ನು ನೆರವೇರಿಸಿಕೊಂಡು ಬರುವುದಾಗಿ ತಿಳಿಸಿ ಎಷ್ಟು ಕಾಲವಾದರೂ ಹಿಂದಿರುಗಲಿಲ್ಲ. ಆಗ ಅಂಬರೀಷನು ದಾದಶೀ ಪಾರಣೆಯ ಕಾಲ ಮೀರು ವುದೆಂದು ತಿಳಿದು, ಇತರ ಋಷಿಗಳ ಸೂಚನೆಯಂತೆ ಜಲಪ್ರಾಶನ ಮಾಡಿ ದನು. ದೂರ್ವಾಸನು ಕೋಪಗೊಂಡು ಅಂಬರೀಷನನ್ನು ಶಪಿಸಿದನು. ಆಗ ವಿಷ್ಣುವಿನ ಚಕ್ರಾಯುಧಕ್ಕೆ ಸಿಕ್ಕಿ ತ್ರಿಲೋಕಗಳಲ್ಲಿ ಅಡ್ಡಾಡಿ, ಕೊನೆಗೆ ಅಂಬರೀಷನನ್ನೇ ಮೊರೆಹೊಕ್ಕು ಪಾರಾದನು, **ಹಲಿ** = ಹಲಾಯುಧ ಧಾರಿಯಾದ ಬಲರಾಮ, **ಛಲ ದೂರ್ವಾಸ** = ಛಲವಂತನಾದ ದೂರ್ವಾಸ ಮುನಿ, **ಕಲಿ ಭೀಷ್ಮ ದ್ರೋಣಾದಿಗಳಿಗೆ** = ಕಲಿಯಾದ ದುರ್ಯೋಧನನ ಆಶ್ರಯದಲ್ಲಿದ್ದ ಭೀಷ್ಮ ದ್ರೋಣಾದಿಗಳ ಅಪರಾಧವನ್ನು ಕ್ಷಮಿಸಿ, ಪೊರೆದ ಕರುಣಾಕರನಲ್ಲವೇ? **ಇಳೆಯೊಳು** = ಈ ಭೂಮಿಯಲ್ಲಿ, **ಕುಲಕೋಟಿ** = ಅನಂತ ಸಂಖ್ಯೆಯ ಭಕ್ತರುಗಳನ್ನು, **ಒಲವಿನಿಂ** = ಪ್ರೀತಿಪುರಸ್ಕರ ವಾದ ಅನುಗ್ರಹದಿಂದ, **ಫಲವಾ** = ಅವರವರ ಸತ್ಕರ್ಮಗಳಿಗನುಸಾರ ವಾಗಿ ಫಲವನ್ನು ನೀನು ಕೊಡುತ್ತಿರುವಿಯಲ್ಲಾ, **ಹಲವಾಡಲೇಕೆ** = ಹೆಚ್ಚು ಮಾತುಗಳನ್ನು ಏಕೆ ಆಡಲಿ? **ಒಲಿದವರಂತೆ ಎನ್ನ** = ಅವರಿಗೆಲ್ಲಾ ಅನುಗ್ರಹಿಸಿ, ಸಲಹಿದವನೇ, ನನ್ನನ್ನೂ ಸಹ, **ಸಲಹದಿದ್ದರೆ ಬಿಡೆ** = ಸಂರಕ್ಷಿಸದಿದ್ದರೆ, ನಿನ್ನನ್ನು ಎಂದೂ ಬಿಡುವುದಿಲ್ಲ.

ಇದು ಕವಿವರ್ಯರ ತುಂಬುಹೃದಯದಿಂದ ಮೂಡಿಬಂದ ಭಕ್ತಿ ಪಾರವಶ್ಯದ ವಚನ ಕುಸುಮಗಳು.

## ೧೫

### (ತಂದೆ ವೆಂಕಟೇಶವಿಠ್ಠಲಾಂಕಿತ)

**ರಾಗ-ತೋಡಿ** **ಆದಿತಾಳ**

ಪಂಢರಾಪುರಿ ನಿವಾಸಾ–ಪಾಂಡವಪೋಷಾ–
ಪುಂಡಲೀಕಾಬ್ಜ ದಿನೇಶಾ ॥ ॥ಪ॥

ಅಂಡಲೆಸುವ ಭವ–ಖಂಡಿಸಿ ತವಪದ–
ಪುಂಡರೀಕ ಮಧು ಖಂಡುಣಿ ಎನಿಸೋ ॥ ॥ಅ॥

ಭಕ್ತ ಜನಾತ್ಮಭವನ–ರುಕ್ಮಿಣಿ ರಮಣ–ವ್ಯಕ್ತಾವ್ಯಕ್ತ ಕಥನಾ
ಪ್ರೋಕ್ತ ಸಚ್ಚಿಲ್ಲಕ್ಷಣ–ದಾನವನಿಧನ–ಸೂಕ್ತ ಮಾರ್ಗಾನು ರಂಜನಾ
ಮುಕ್ತಾ ಮುಕ್ತಾಭಿಷಿಕ್ತ–ಪದಾಬ್ಜ ವಿ–ರಕ್ತ ಜನಪ್ರಿಯ–ರಕ್ತಾಬ್ಜೇಕ್ಷಣ
ನಕ್ತಂಚರ ಹರ–ಸೂಕ್ತಸುಮೇಯ ಮ–ಧ್ವೋಕ್ತಿ ಲಭ್ಯ ಪರಿ–ಭುಕ್ತ
ಯಜ್ಞಾಂಗಾ ॥ ॥೧॥

ಭೀಮಾತಟನೀವಿಹಾರ–ಲಾವಣ್ಯಸಾರ–ಕಾಮಾದಿರಿಪು ವಿದಾರ
ಸಾಮಜನುತ ಸಾಕಾರ-ತ್ರಿಗುಣದೂರ–ಪ್ರೇಮಾಭಿರಾಮ ಶ್ರೀಕರ
ನಾಮಸ್ಮರಿಸುವ–ಧೀಮಂತ ಜನೋದ್ಧಾಮ ನಿಕರಸುರ–ಭೂಮಿಜ ಆತ್ಮಾ
ರಾಮ ಶರಧಿಸ–ದ್ಧಾಮ ಪರಾತ್ಪರ–ವ್ಯೋಮಕೇಶ ವಿನತಾಮಲ ಚರಿತಾ ॥
॥೨॥

ವೀಶೇರಾ ವಿಧಿ ಮಹಿತಾ–ಪ್ರಣವನುತ-ಮಾ ಸೇವಿತಾಂಘ್ರಿ ಪ್ರಥಿತಾ
ಭೂಸುರಾಭೀಷ್ಟ ದಯಿತ-ಖಗವರೂಥ–ಲೇಸು ಪ್ರದಾನ ಸ್ನೇಹಿತ
ನಾಶರಹಿತ ಹೃದ್ದೇಶವಾಸ ಮಾ–ಯೇಶ ಮಹಾತ್ಮೋದ್ಭಾಸಿತವಪುಷವಿ–
ಲಾಸಕೋಶ ಪ-ದ್ಮಾಸ ತಂದೆ ವೆಂಕಟೇಶವಿಠ್ಠಲ ಪೊರೆ ದಾಸನ ಬಿನ್ನಪ ॥
॥೩॥



**ಅರ್ಥವಿವರಣೆ :**

**ಪಂಢರಾಪುರಿ ನಿವಾಸಾ** ಪಂಢರಪುರದಲ್ಲಿ ನೆಲೆಸಿರುವ ಕ್ಷೇತ್ರ ಮೂರ್ತಿ ಶ್ರೀಪಾಂಡುರಂಗ, **ಪಾಂಡವಪೋಷ** ಪಾಂಡವರ ಸಂರಕ್ಷಕನು (ಮಮಪ್ರಾಣಾಹಿ ಪಾಂಡವಾಃ), **ಪುಂಡಲೀಕ ಅಬ್ಜ** ಪುಂಡರೀಕ ನಾಮಕ ಭಕ್ತನೆಂಬ ಕಮಲಕ್ಕೆ, **ದಿನೇಶಾ** ಸೂರ್ಯಸದೃಶನಾಗಿರುವ.

**ಅಂಡಲೆಸುವ** = ನಾನಾ ಜನ್ಮಗಳಲ್ಲಿ ಸುತ್ತಿ ಸುತ್ತಿಸುವ, **ಭವ** ಜನನ ಮರಣಾಖ್ಯವಾದ ಸಂಸಾರವನ್ನು, **ಖಂಡಿಸಿ** = ಭಂಗಗೊಳಿಸಿ, (ಭವಮೋಚಕನು), **ತವಪದ ಪುಂಡರೀಕ** = ನಿನ್ನ ಚರಣಾರವಿಂದಗಳಲ್ಲಿ ರುವ, **ಮಧು** ಮಕರಂದವನ್ನು, **ಖಂಡುಣಿ ಎನಿಸೋ** ಪಾನಮಾಡುವ ದುಂಬಿಯೆಂದೆನಿಸೆನ್ನ (ಖಂಡು = ಮಕರಂದ, ಉಣಿ = ಪಾನಮಾಡುವ ಭ್ರಮರ).

**ಭಕ್ತಜನಾತ್ಮಭವನ** ಭಕ್ತ ಜನರೆಂಬ ಹೃದಯವನ್ನೇ ಮಂದಿರ ವನ್ನಾಗಿ ಉಳ್ಳ ಸಜ್ಜನರ ಹೃತ್ಪದ್ಮವಾಸಿ), **ರುಕ್ಮಿಣಿರಮಣ** = ರುಕ್ಮಿಣೀ ಪತಿಯಾದ ಶ್ರೀಕೃಷ್ಣನೇ (ರತುಮಾವಲ್ಲಭ), **ವ್ಯಕ್ತ ಅವ್ಯಕ್ತಕಥನಾ** = ಗೋಚರವಾಗುವುದು–ಅಗೋಚರವಾಗಿರುವುದು-ಇತ್ಯಾದಿ ಅದ್ಭುತ ಚರಿತ್ರ ನಾದ, **ಪ್ರೋಕ್ತಸಚ್ಚಿಲ್ಲಕ್ಷಣ** ವೇದಾದಿಗಳಲ್ಲಿ ಹೇಳಲ್ಪಟ್ಟ ಸಚ್ಚಿದಾನಂದ ಲಕ್ಷಣೋಪೇತನು, **ದಾನವನಿಧನ** = ದೈತ್ಯಸಂಹಾರಿಯು, **ಸೂಕ್ತ ಮಾರ್ಗಾನು ರಂಜನಾ** = ಸಮೀಚೀನವಾದ ಸನ್ಮಾರ್ಗ ದರ್ಶಕನು, **ಮುಕ್ತ ಅಮುಕ್ತ ಅಭಿಷಿಕ್ತ** = ಮುಕ್ತಜೀವರು ಮತ್ತು ಅಮುಕ್ತ ಜೀವರು ಗಳಿಂದಲೂ ತೊಳೆಯಲ್ಪಟ್ಟ (ಅಭಿಷಿಕ್ತನಾದ), **ಪದಾಬ್ಜ** = ಪಾದ ಕಮಲಗಳುಳ್ಳವನು, **ವಿರಕ್ತ ಜನಪ್ರಿಯ** = ವೈರಾಗ್ಯ ಶಾಲಿಗಳಾದ ಯೋಗಿಗಳಿಗೆ ಪ್ರಿಯನಾದವನು, **ರಕ್ತಾಬ್ಜ ಈಕ್ಷಣ** ಅರುಣವರ್ಣದ ಕಣ್ಣಿನ ನೋಟವುಳ್ಳವನು (ಅರುಣನೇತ್ರ), **ನಕ್ತಂಚರರಹರ** = ರಾಕ್ಷಸರ [ನಕ್ತಂ = ರಾತ್ರಿಯಲ್ಲಿ, ಚರ ಸಂಚರಿಸುವ ನಿಶಾಚರರಾದ ರಾಕ್ಷಸವರ್ಗ], **ಸೂಕ್ತಸುಮೇಯ** = ವೇದಸೂಕ್ತಗಳಿಂದ ತಿಳಿಯಲ್ಪಡುವವನು,

**ಮಧ್ವೋಕ್ತಿ ಲಭ್ಯ** = ಮಧ್ವಶಾಸ್ತ್ರ ದ್ವಾರದಿಂದಲೇ ಪ್ರಾಪ್ಯನು, **ಪರಿಭೋಕ್ತಾ ಯಜ್ಞಾಂಗಾ** ಯಜ್ಞದಲ್ಲಿ ತನಗೆ ಸಲ್ಲಬೇಕಾದ ಪಾಲನ್ನು ತೆಗೆದುಕೊಳ್ಳುವವನು [ಯಜ್ಞ ಭೋಕ್ತನು].

**ಭೀಮಾತಟನೀ ವಿಹಾರ** = ಭೀಮಾನದಿಯ ತೀರದಲ್ಲಿ ನೆಲೆಸಿರುವ [ವಿಹರಿಸುತ್ತಿರುವ], **ಲಾವಣ್ಯಸಾರ** ಸೌಂದರ್ಯ ಸಾರನು [ಸುಂದರಕ-ಸುಂದರನು—ಸಾಕ್ಷಾತ್ ಮನ್ಮಥ ಮನ್ಮಥಃ], **ಕಾಮಾದಿಪು ವಿದಾರ** = ಕಾಮಾದಿ ಅರಿಷಡ್ವರ್ಗಗಳನ್ನು ಪರಿಹರಿಸುವವನು, **ಸಾಮಜನುತ** = ಗಜರಾಜನಿಂದ ಸ್ತುತ್ಯ ಮಾನನು [ಸಾಮಜ-ಗಜೇಂದ್ರ], **ಸಾಕಾರ** = ಆಕಾರ ವಿಶಿಷ್ಟನು, **ತ್ರಿಗುಣದೂರ** = ಪ್ರಾಕೃತ ಗುಣಶೂನ್ಯನು, **ಪ್ರೇಮಾಭಿರಾಮ** ಪ್ರೇಮ-ಕಾರುಣ್ಯಗಳೇ ಮೂರ್ತಿಮತ್ತಾಗಿರುವ, **ಶ್ರೀಕರ** = ಮಂಗಳಕರವಾದ, **ನಾಮಸ್ಮರಿಸುವ** ನಿಮ್ಮ ನಾಮ ಗುಣಾವಳಿಗಳನ್ನು ಧ್ಯಾನಿಸುತ್ತಿರುವ, **ಧೀಮಂತ ಜನರ** = ಜ್ಞಾನಿಗಳೆಂಬ, **ಉದ್ಧಾಮನಿಕರ** = ಶ್ರೇಷ್ಠಸಮೂಹಕ್ಕೆ, **ಸುರಭೂಮಿಜ** = ಕಲ್ಪವೃಕ್ಷ ಸದೃಶನೇ [ಭೂಮಿಜ -ಭೂಮಿಯಲ್ಲಿ ಹುಟ್ಟುವ ವೃಕ್ಷ], **ಆತ್ಮರಾಮ** = ಸ್ವರಮಣನೇ [ಸ್ವರತನೇ], [ಆತ್ಮ = ತನ್ನ ಭಗವದ್ರೂಪಗಳಲ್ಲಿಯೇ ಆರಾಮ = ಕ್ರೀಡಿಸುವವನು], **ಶರಧಿ ಸದ್ಧಾಮ** = ಕ್ಷೀರ ಸಮುದ್ರವನ್ನೇ ತನ್ನ ಮಂದಿರವನ್ನಾಗಿ ಉಳ್ಳ, **ಪರಾತ್ಪರ** ಪರನಾಮಕಳಾದ ಶ್ರೀಲಕ್ಷ್ಮೀದೇವಿಗಿಂತ ಉತ್ತಮೋತ್ತಮನು [ಪರ–ಜೀವೋತ್ತಮರಾದ ಬ್ರಹ್ಮವಾಯುಗಳು ಪರ–ಪರನಾಮಕಳಾದ ಶ್ರೀಲಕ್ಷ್ಮೀ], **ವ್ಯೋಮಕೇಶ** = ಶ್ರೀರುದ್ರದೇವರಿಂದ, **ವಿನತಾ** ಚೆನ್ನಾಗಿ ನಮ್ಯನಾದ, **ಅಮಲಚರಿತಾ** = ನಿರ್ದೋಷಗಳಾದ ಚಾರಿತ್ರ್ಯವುಳ್ಳವನೇ [ಅನಂತಕಲ್ಯಾಣ ಗುಣಗಣಧಾಮನು].

**ವೀಶ** = ಪಕ್ಷಿ ಶ್ರೇಷ್ಠರಾದ ಗರುಡದೇವರು [ವಿ-ಪಕ್ಷಗಳು ವಿ + ಈಶ], **ಈರಾ** ಶ್ರೀವಾಯುದೇವರು, **ವಿಧಿ** = ಬ್ರಹ್ಮದೇವರು, **ಮಹಿತಾ** = ಇವರುಗಳಿಗಿಂತ ಅತ್ಯಂತ ಶ್ರೇಷ್ಠನಾದವನು ["ಮ"-ಕಾರಕ್ಕೆ ಬ್ರಹ್ಮವಾಯು

ಗಳೆಂದರ್ಥ. ಶ್ರೀಲಕ್ಷ್ಮೀ—ಎಂದು ಇನ್ನೊಂದರ್ಥ], **ಪ್ರಣವನುತ** = ಓಂಕಾರದಿಂದ ಸ್ತುತ್ಯಮಾನನೇ [ಓಂ-ಕಾರ ಪ್ರತಿಪಾದ್ಯರೂಪ], **ಮಾಸೇವಿತಾಂಘ್ರಿ ಪ್ರಥಿತಾ** = ಶ್ರೀರಮಾದೇವಿಯರಿಂದ ಪೂಜಿತ ಪ್ರಸಿದ್ಧ ಪಾದ ಪದ್ಮಗಳುಳ್ಳವನೇ, [ಮಾ–ರಮಾದೇವಿ ಪ್ರಥಿತಾ-ಪ್ರಸಿದ್ಧವಾದ], **ಭೂಸುರಾಭೀಷ್ಟದಯಿತ** = ಜ್ಞಾನಿಗಳಾದ ವಿಪ್ರರ ಮನೋಭಿಲಾಷೆಗಳನ್ನು ಸಲ್ಲಿಸುವವನೇ, **ಖಗವರೂಥ** ಗರುಡವಾಹನನೇ [ಖಗ-ಆಕಾಶದಲ್ಲಿ ಸಂಚರಿಸುವ ಗರುಡ ವರೂಥ-ಹೆಗಲಿನ ಮೇಲೆ ಕೂತು ಸಂಚರಿಸುವ ಶ್ರೀಹರಿ], **ಲೇಸುಪ್ರದಾನ ಸ್ನೇಹಿತ** = ಭಕ್ತ ಜನರಿಗೆ ಯುಕ್ತವಾದುದನ್ನು ಕೊಡುವ ಹಿತೈಷಿಯೇ [ಮಿತ್ರನಂತಿರುವ ಬಿಂಬನೇ], **ನಾಶರಹಿತ** = ಚತುರ್ವಿಧ ನಾಶ ರಹಿತನೇ [ಶಾಶ್ವತ ರೂಪಿಯೇ], **ಹೃದ್ದೇಶವಾಸ** = ಹೃದ್ಗುಹಾನಿವಾಸಿಯಾದ ಅಸ್ಮದ್ಬಿಂಬನೇ [ಹೃತ+ದೇಶ+ವಾಸ], **ಮಾಯೇಶ** = ಮಾಯಾಪತಿಯಾದ ಶ್ರೀವಾಸುದೇವನೇ, **ಮಹಾತ್ಮ ಉದ್ಭಾಸಿತ ವಪುಷ** = ಪರಿಪೂರ್ಣವಾದ ಮಹಾತ್ಮೆಯಿಂದ ಪ್ರಕಾಶಿಸುವ ದೇಹವುಳ್ಳವನೇ [ಅವನ ಮಹಾಮಹಿಮೆಗಳೆಲ್ಲವೂ ಅಪರಿಚ್ಛಿನ್ನ ಮತ್ತು ಪರಿಪೂರ್ಣ]. **ವಿಲಾಸ ಕೋಶ** = ಆನಂದಮಯನೇ [ಸುಖಪರಿಪೂರ್ಣನೇ,] **ಪದ್ಮಾಸ** ಪದ್ಮವನ್ನೇ ತನ್ನ ಪೀಠವನ್ನಾಗಿ ಉಳ್ಳ ಬ್ರಹ್ಮದೇವರ [ಕಮಲಾಸನರು], **ತಂದೆ** = ಪಿತನಾದ, **ವೆಂಕಟೇಶವಿಠ್ಠಲ** = ವೆಂಕಟೇಶ ವಿಠ್ಠಲಾಂಕಿತ ಮೂರ್ತಿಯೇ. **ದಾಸನ ಬಿನ್ನವ ಪೊರೆ** ನಿನ್ನ ಕಿಂಕರನಾದ ನನ್ನ ಮೊರೆಯನ್ನು ಲಾಲಿಸಿ, ಸಂರಕ್ಷಿಸು. ॥೩॥



## ೧೬

### (ತಂದೆ ವೆಂಕಟೇಶವಿಠ್ಠಲಾಂಕಿತ)

**ರಾಗ-ಮುಖಾರಿ** **ಆದಿತಾಳ**

ಪೂರ್ಣಪ್ರಮತಿ ಹೃನ್ನಿವಾಸಾ–ಶರಣಾರ್ಣವ ರಾಕೇಂದು ಭಾಸಾ ॥ ॥ಪ॥
ತೂರ್ಣ ಪೊರೆಯೊ ಸಂಕೀರ್ಣಗುಣಾಂಹದಿ
ಘೂರ್ಣಿತನಾದೆ ತವಾರ್ಣಜಾಂಘ್ರಿಯ ತೋರೀ ॥ ॥ಅ॥

ಹಿಮರುಚಿ ಭಾಗವಸಿತನೇ-ಕರ್ಮತುಮುಲೋಷ್ಮ ಕುಮುದ ಬಾಂಧವನೇ
ಕಮಲಸುಯಮಿಗೊಲಿದಮರಾಶ್ಮನಿಸ್ಪೃಷ್ಠ
ಸಮಚರಣಾಂಬುಜೋದ್ಗಮನೀಯ ವಪುಷ ॥

ಕಮಲದರ ಕಟಿಪಾಣಿ ಅಬ್ಜೋಪಮಶುಭಾಂಗ ನಿರಾಮಯಾದ್ವಯ
ಕ್ಷಮ ಕ್ಷಾಮ ಸಮೀಹನತ್ವದಿ–ಅಮರ ನರ ದಾನವರೊಳ್ ಮೆರವೇ ॥
॥೧॥

ನರವತ್ಪ್ರವರ್ತನಶೀಲಾ-ಗೋಪೀ ನರಸೀರುಹೋ ದ್ಯುತಿಮಾಲಾ
ದುರುಳಪೂತನಿ ಕಂಸಾಸುರ ಬಕಕೇಶಿ ಚಾ ।
ಣೂರ ಮುಷ್ಟಿ ವತ್ಸ ಸಾಲ್ವರ ಸಂಹರಿಸೀ ॥
ಧರೆಯೋಳ್ ಧರ್ಮಸ್ಥಾಪನಾ ರ್ಥಾ ಧ್ವರ್ಯುವಾಗಿದ್ದ ಖಿಳಕಲಿಕುಲ
ಧುರವಮುಖದೋಳರ್ಪಿಸಿದ ಭಾರತೀವರನ ಮೆರೆಸಿದ ಕುರುಕುಲರ್ಷಭ ॥
॥೨॥

ಶಕುಲಿ ಕಚ್ಛಪ ಕಿಟ ನೃಹರೀ-ಮಾಣವಕ ಭಾರ್ಗವ ರಾಮ ನರಕಾರೀ
ಅಕುಟಿಲ ಸುಗುತ ಸದ್ಕಲ್ಕ್ಯಾದ್ಯಮಿತ ರೂಪ
ನಿಕರ ಪ್ರತೀಕಾಭಿವ್ಯಕ್ತ ಸ್ವಯಂ ಕೃತ ॥

ಲೇಖರರ್ಷಿಯು ಬಯಸಿ ತಂದೆ ವೆಂಕಟೇಶವಿಠ್ಠಲ ಬಂದು ಭಕ್ತಾ
ನೀಕ ಪೊರೆಯಲು ಪಂಢರದಿ ಪೈನಾಕಿತೀರದಿ ನಗುತ ನಿಂತಿಪೆ ॥ ॥೩॥



**ಅರ್ಥವಿವರಣೆ :**

**ಪೂರ್ಣಪ್ರಮತಿ** = ಪೂರ್ಣಭೋಧ ನಾಮಕರಾದ ಶ್ರೀಮನ್ಮಧ್ವ ಮುನಿಗಳ, **ಹೃನ್ನಿವಾಸಾ** = ಹೃತ್ಕಮಲ ನಿವಾಸಿಯಾದ [ಮಧ್ವಮಾನಸ ಮಂದಿರನು], **ಶರಣಾರ್ಣವ** = ಶರಣಾಗತರಾದ ಜನರೆಂಬ ಸಮುದ್ರಕ್ಕೆ, **ರಾಕೇಂದು ಭಾಸಾ** = ಪೂರ್ಣಚಂದ್ರ ಪ್ರಕಾಶದಂತಿರುವ [ರಾಕ-ಪೂರ್ಣಿಮೆಯ ತುಂಬು ಚಂದ್ರ].

**ತೂರ್ಣ** = ಶೀಘ್ರವಾಗಿ, **ಪೊರೆಯೊ** = ಸಂರಕ್ಷಿಸು, **ಸಂಕೀರ್ಣ** = ಸಮ್ಮಿಶ್ರಣವಾದ. **ಗುಣ** = ತ್ರಿಗುಣಗಳ ಪಲ್ಲಟದಿಂದ [ಗುಣ ವೈಷಮ್ಯ–ಸಮ್ಮೇಳನ], **ಅಹಂಮದಿ** = ಜನಿತವಾದ ಅಹಂಕಾರ ಮಮಕಾರಗಳಿಂದ, **ಘೂರ್ಣಿತನಾದೆ** = ಭ್ರಮಿಸಿ, ಕ್ಲೇಶಕ್ಕೆ ಗುರಿಯಾಗಿದ್ದೇನೆ. **ತವ ಅರ್ಣಜಾಂಘ್ರಿಯ ತೋರೀ** = ನಿನ್ನ ಪಾದ ಕಮಲಗಳ ದರ್ಶನ ಭಾಗ್ಯವನ್ನು ಕರುಣಿಸು [ಅರ್ಣ-ನೀರು. ಅರ್ಣಜ–ನೀರಿನಲ್ಲಿ ಹುಟ್ಟುವ ಕಮಲಪುಷ್ಪ].

**ಹಿಮರುಚಿ ಭಾಗವಸಿತನೇ** = ಚಂದ್ರ ಭಾಗಾನದಿಯ ತಟದಲ್ಲಿರುವ [ಹಿಮ-ತಂಪಾದ, ರುಚಿ–ಕಿರಣಗಳು = ಚಂದ್ರ,] **ಕರ್ಮತುಮುಲ ಉಷ್ಣ** = ಅನುಸಂಧಾನವಿಲ್ಲದ ಜಡಕರ್ಮಗಳ ಘರ್ಷಣೆಯಿಂದ ಉಂಟಾಗುವ ತಾಪಕ್ಕೆ [ಉಷ್ಣ-ತಾಪ, ಕಾವು], **ಕುಮುದ ಭಾಂಧವನೇ** = ನೈದಿಲೆಪುಷ್ಪ ಸಖನಾದ ಚಂದ್ರ ಸದೃಶನೇ [ತಾಪ ಪರಿಹಾರಕ-ಇದರಿಂದ ಚಂದ್ರನ ಸಾದೃಶ್ಯ], **ಕಮಲಸುಯಮಿಗೆ** = ಪುಂಡರೀಕನೆಂಬ ಋಷಿಗೆ [ಕಮಲ–ಪುಂಡರೀಕನಾಮಕ ಸುಯಮ-ಜಿತೇಂದ್ರಿಯನಾದ ಋಷಿ], **ಒಲಿದ** = ಅನುಗ್ರಹಿಸಿದ [ಪುಂಡರೀಕ ವರದನಾದ ಪಾಂಡುರಂಗ], **ಅಮರಾಕ್ಷ್ಮ**

**ನಿಸ್ಪೃಷ್ಟ** = ಇಂದ್ರನನ್ನೇ ತನ್ನ ಪಾದ ಪೀಠವನ್ನಾಗಿ ಉಳ್ಳ [ಅಮರ-ಸುರಪ ನಾದ ಇಂದ್ರ, ಅಶ್ಮ-ಕಲ್ಲು [ಪಾದಪೀಠ], ನಿಸ್ಪೃಷ್ಟ-ನಿಂತಿರುವ ಪಾದ ಪೀಠ], **ಸಮಚರಣಾಂಬುಜ** = ಸಮವಾಗಿ ಜೋಡಿಸಲ್ಪಟ್ಟ ಪಾದಪದ್ಮ ಗಳುಳ್ಳ, **ಉದ್ಗಮನೀಯ ವಪುಷ** ಎದ್ದು ಕಾಣುವ ಮನೋಹರವಾದ ಶರೀರವುಳ್ಳ [ಉತ್ + ಗಮನೀಯ], **ಕಮಲ** = ಪದ್ಮಪುಷ್ಪ, **ದರ** = ಶಂಖ, **ಕಟಿಪಾಣಿ** = ತನ್ನ ಸೊಂಟದ ಮೇಲೆ ಇಟ್ಟಿರುವ ಕರದ್ವಯಗಳು, **ಅಬ್ಜ ಉಪಮ ಶುಭಾಂಗ** = ಚಂದ್ರಕಾಂತಿಗೆ ಸಮಾನವಾದ ಮಂಗಳ ಮೂರ್ತಿ [ಅಬ್ಜ-ಅಪ್ + ಜ-ನೀರಿನಲ್ಲಿ ಸಂಜಾತನಾದ ಚಂದ್ರ], **ನಿರಾ ಮಯ** = ಸಕಲ ರೋಗ ವಿದೂರನಾದ [ನಿರ್ವಿಕಾರವಾದ ಶುಭಾಂಗನು], **ಅದ್ವಯ** = ಅದ್ವಿತೀಯನು [ಸಮಾಭ್ಯಧಿಕಶೂನ್ಯನು], **ಕ್ಷಮ** = ದೇವತೆ ಗಳಿಗೆ ಕ್ಷಮಾಶೀಲನು, **ಕ್ಷಾಮ** = ಮಾನವರಿಗೆ ಕ್ಷೋಭೆಯನ್ನುಂಟುಮಾಡು ವವನು, **ಸಮೀಹನತ್ವದಿ** = ಅಸುರರು ಬೇಡಿದರೂ ಕೊಡದೆ, ಕ್ಲೇಶ ಪ್ರದನಾದ, **ಅಮರ** = ಮುಕ್ತಿ ಯೋಗ್ಯರಾದ ದೇವತಾವರ್ಗ, **ನರ** = ಮಧ್ಯಮ ಜೀವರಾದ ಮಾನವರು, **ದಾನವರೊಳ್** = ತಮೋಯೋಗ್ಯ ರಾದ ದೈತ್ಯವರ್ಗ ಇವುಗಳಲ್ಲಿ [ತ್ರಿವಿಧ ಜೀವವರ್ಗದಲ್ಲಿ], **ಮೆರವೇ** = ಬಿಂಬನಾಗಿದ್ದು ಪರಮ ಯೋಗ್ಯವಾದ ಕ್ರಿಯಾದಿಗಳನ್ನು ಮಾಡಿಸುತ್ತಿರುವೆ.

**ನರವತ್ ಪ್ರವರ್ತನ ಶೀಲಾ** = ಸಾಮಾನ್ಯ ಮಾನವರಂತೆ ನಟಿಸುವ ವಿಡಂಬನ ಮೂರ್ತಿಯೇ, **ಗೋಪೀ ಸರಸೀರುಹ** = ಗೋಪಿಕಾಸ್ತ್ರೀಯರು ಗಳೆಂಬ ಕಮಲಪುಷ್ಪಗಳಿಗೆಲ್ಲಾ [ಸರಸೀರುಹ-ಸರೋವರದಲ್ಲಿ ಹುಟ್ಟುವ ಕಮಲಗಳು], **ದ್ಯುತಿಮಾಲಾ** = ಸೂರ್ಯನಂತಿರುವವನೇ [ದ್ಯುತಿಮಾಲಾ -ಕಿರಣಮಾಲಾ], **ದುರುಳ** ದುಷ್ಟರಾದ. **ಪೂತನಿ** ಪೂತನಿ ಎಂಬ ರಾಕ್ಷಸಿ, **ಕಂಸನಾಮಕ** ಸೋದರಮಾವನಾದ ಕಂಸನೆಂಬ ಹೆಸರಿನ ದಾನವ, **ಬಕ** = ಬಕಾಸುರ. **ಕೇಶೀ** = ಅಶ್ವರೂಪಿಯಾಗಿದ್ದ ಕೇಶೀ ಎಂಬ ದೈತ್ಯ, **ಚಾಣೂರ ಮುಷ್ಟಿ** ಚಾಣೂರ, ಮುಷ್ಟಿಕಾ-ಎಂಬ ಬಲಶಾಲಿ ಗಳಾಗಿದ್ದ ಮಲ್ಲರು. **ವತ್ಸ** ವತ್ಸಾಸುರ. **ಸಾಲ್ವರ** = ಸಾಲ್ವನೆಂಬ ದೈತ್ಯ. **ಸಂಹರಿಸೀ** = ಇವರನ್ನೆಲ್ಲಾ ಕೊಂದು. **ಧರೆಯೊಳ್** = ಭೂಮಂಡಲದಲ್ಲಿ,

**ಧರ್ಮಸ್ಥಾಪನಾರ್ಥ** = ಧರ್ಮವನ್ನು ಪುನರುತ್ಥಾನ ಮಾಡುವುದಕ್ಕೆ, **ಅಧ್ವೈರ್ಯರಾಗಿದ್ದ** = ಧೃಢವ್ರತರಾಗಿದ್ದ, **ಅಖಿಳ ಕಲಿಕುಲ** = ಕಲಿ ಸ್ವರೂಪನಾಗಿದ್ದ ಧುರ್ಯೋದನನ ಸಮಸ್ತ ಕುರುಕುಲವನ್ನೆಲ್ಲಾ [ಕೌರವ ಕುಲ], **ಧುರಮುಖದೊಳ್** = ಕುರುಕ್ಷೇತ್ರಯುದ್ಧವೆಂಬ ಮಹಾಯಜ್ಞ ದಲ್ಲಿ, **ಅರ್ಪಿಸಿದ** = ಅವರ ನಾಶರೂಪವಾದ ಕಾರ್ಯವನ್ನು ಮಾಡಿ, ಯಾಗಫಲವನ್ನು ನಿನ್ನಂಘ್ರಿಗೆ ಅರ್ಪಿಸಿದ, **ಭಾರತೀವರನ** = ಭಾರತೀ ಪತಿಯಾದ ಭೀಮಸೇನ ದೇವರನ್ನು, **ಮೆರೆಸಿದೆ** = ಕೀರ್ತಿಯನ್ನು ವೈಭವ ದಿಂದ ಹರಡಿದ, **ಕುರುಕುಲರ್ಷಭ** = ಕುರುಕುಲಪುಂಗವರಾದ ಭೀಮ ಸೇನ ದೇವರು.

**ಶಕುಲಿ** = ಮತ್ಸ್ಯ, **ಕಚ್ಛಪ** = ಆಮೆ [ಕೂರ್ಮಾವತಾರ], **ಕಿಟಿ** = ವರಾಹ, **ನೃಹರೀ** = ನರಸಿಂಹ [ನೃ-ನರ, ಹರೀ-ಸಿಂಹ], **ಮಾಣ ವಕ** = ವಟುರೂಪೀ ಶ್ರೀವಾಮನ, **ಭಾರ್ಗವ** = ಭೃಗುಕುಲ ಸಂಜಾತ ನಾದ ಶ್ರೀ ಪರಶುರಾಮ, **ನರಕಾರೀ** = ನರಕಾಸುರನನ್ನು ಸಂಹರಿಸಿದ ಶ್ರೀಕೃಷ್ಣ, **ಅಕುಟಿಲ ಸುಗತ** = ನಿರ್ದೋಷವಾದ ಬುದ್ಧ [ಬುದ್ಧನಿಗೆ "ಸುಗತ" ಎಂಬ ನಾಮ], **ಸತ್ಕಲ್ಕಿ** = ಸರ್ವಶ್ರೇಷ್ಠನಾದ ಕಲ್ಕಿ, **ಆದಿ ಅಮಿತರೂಪನಿಕರ** = ದಶಾವತಾರಾದಿ ಅನಂತ ರೂಪ ಸಮೂಹಗಳುಳ್ಳ, **ಪ್ರತೀಕಾಭಿವ್ಯಕ್ತ** = ಪ್ರತಿಮಾಕಾರದಲ್ಲಿ ನಿಂತಿರುವ, **ಸ್ವಯಂಕೃತ** = ಸ್ವಯಂವ್ಯಕ್ತರೂಪನೇ, **ಲೇಖರ ಋಷಿಯು** = ದೇವ ಋಷಿಗಳಾದ ನಾರದರು [ಲೇಖರ–ದೇವತೆಗಳು], **ಬಯಸಿ** = ಇಚ್ಛಿಸಲಾಗಿ, **ತಂದೆ ವೆಂಕಟೇಶವಿಠ್ಠಲ ಬಂದು** = ತಂದೆ ವೆಂಕಟೇಶಾಭಿನ್ನ ಪಾಂಡುರಂಗನೇ ಪ್ರತ್ಯಕ್ಷನಾಗಿ, **ಭಕ್ತಾನೀಕ** = ಭಕ್ತರ ಸಮೂಹವನ್ನು, **ಪೊರೆಯಲು** = ಸಂರಕ್ಷಿಸಲು, **ಪಂಢರದಿ** = ಪಂಢರಾಪುರದಲ್ಲಿ, **ಪೈನಾಕಿ ತೀರದಿ** = ಮಹಾಬಲೇಶ್ವರದಲ್ಲಿರುವ ಶ್ರೀರುದ್ರದೇವರ ಲಿಂಗದಿಂದ ಉದ್ಭವಳಾದ ಭೀಮರಥೀ ನದಿಯ ತೀರದಲ್ಲಿ [ಪೈನಾಕೀ-ಪಿನಾಕವೆಂಬ ಧನುಸ್ಸನ್ನು ಧರಿ ಸಿರುವ ಶ್ರೀರುದ್ರ ದೇವರು], **ನಗುತ ನಿಂತಿಹೆ** = ಮಂದಹಾಸಯುಕ್ತ ವಾಗಿ ಅನುಗ್ರಹ ರೂಪಿಯಾಗಿ ನೆಲೆಸಿರುವೆ ॥

## ೧೭

### (ತಂದೆ ವೆಂಕಟೇಶವಿಠ್ಠಲಾಂಕಿತ)

**ರಾಗ : ಸಾವೇರಿ** **ತಾಳ-ಆದಿ**

ವಿಠಲಾ-ವಿಠಲಾ-ವಿಠಲಾ-ಮದ್ಗುರುವರಾರಾಧ್ಯ ॥ ॥ಪ॥

ಚಟುಲಮೂರುತಿ ಅಜ-ನಿಟಿಲನಯನಸು ॥
ಕಟಕ ವಂದ್ಯ ಭ್ರೂ-ಕುಟಿಲವಭಂಗದಿ
ಘಟಿಸಿಸೃಷ್ಟಿ ಲಯ-ಘಟಜನೆನಿಪೆ ದು
ರ್ಘಟ ಭವಶರಧಿಗೆ-ಕಟಿಸ್ಥಿತಪಾಣೇ ॥ ॥ಅ॥

ಮಧ್ವಯತಿಕರ-ಪದ್ಮಾರ್ಚಿತಾನಂತ-ಹೃದ್ಯಸದ್ಗುಣಸದನಾ
ಅಧ್ವರಾಹ್ವಯ-ಸ್ಪರ್ಧಾನೀಪ-ಮದ್ಗುರೂವರ-ಹೃದ್ಗುಹಾಲಯ
ಸಿದ್ಧಿಕೊಡು ಸದ್ವೈಷ್ಣವೋಚಿತ-ಪದ್ಧತಿಯ ಬಲಿಸೀ ॥
ಕೃದ್ಧನಾಗದಿರಿನ್ನು ಸಂಸ್ಕೃತಿ-ಬದ್ಧನಿಗೆ ಸ್ಮೃತಿ ಕೊಟ್ಟು ದಯದಿ ಎ
ನ್ನುದ್ಧರಿಸೊ ಮದ್ಭಾರ ನಿನ್ನದೈ-ದೂಧ್ವಹನೆ ಶತವಿದ್ಯ್ಯದ್ಭಾಸ ॥ ॥೧॥

ನಿಖಿಳಾಲೋಕಾಪಾನೀಕ-ಮುಕುರವಮೌಳಿರತ್ನ
ಪ್ರಕರನೀರಾಜಿತ-ನಖಪಂಕ್ತಿ ಶೋಭಿತಾ ॥
ಹೊಕ್ಕುಳಲಿ ಹೆಮ್ಮಕ್ಕಳನು ನೀ-ಮುಕ್ಕುಳಿಸಿ ದೇವಕ್ಕಿತನಯನೆ
ಅಕ್ಕರದಿ ದೇವರ್ಕಳನು ಹಿಂದಿಕ್ಕಿಕೊಂಡಂತೇ ॥
ಯಕ್ಕೆ ಹರಿಸುತ ದುಃಖವಿಷಯದ-ಸಿಕ್ಕು ಬಿಡಿಸಯ್ಯ
ತಕ್ಕುದನ ಮಾಡಿಕ್ಕು ನಿನ್ನಯ ಭಕ್ತಸಂಗದಿ-ರಕ್ಕಸಾಂತಕ
ದಿಕ್ಕುಮಗೆ ನೀ ॥ ॥೨॥

ತಮುಹ ಕಮಠ ಕೋಲಾ-ಮನುಜಮೃಗನೆ ಬಲಿ
ದಮನ ಭಾರ್ಗವ ಸೀತಾ-ರಮಣ ಯದುವರೇಣ್ಯ ॥

ನಿಮ್ಮಮಹಿಮೆಗೆ ರಮ್ಮೆಮುಖ್ಯರು-ಅಮ್ಮಲರಿಯದೆ ಸುಮ್ಮನಿರೆ ಮುಖ
ಕಮ್ಮಲದಿ ಬ್ರಹ್ಮಾಂಡ ತೋರಿ ಉ-ಭ್ರಮ್ಮಿಮ್ಮತರ ಸಮ್ಮೋಹಿಸುತಲೀ ॥
ಹಮ್ಮಳಿಸಿ ಕುಲಗೇಡಿ ರಾಜರ-ಧರ್ಮ ಕಾಯಿದೆ ನಿರ್ಮಮತೆಯಲಿ
ಭರ್ಮಮುಖರೀತೀಕವಾಸ ಹೃ-ದ್ಘರ್ಮ್ಯಸ್ಥಿತ **ತಂದೆ ವೆಂಕಟೇಶ** ॥೩॥

**ಅರ್ಥವಿವರಣೆ :**

**ವಿಠ್ಠಲಾ** = ಸಮಸ್ತ ಪಾಪ ಪರಿಹಾರಕನಾದ ಜ್ಞಾನಾನಂದ ಮೂರ್ತಿಯೇ, **ರಕುಮಾಯಿ** = ಜಗಜ್ಜನನಿಯಾದ ರುಕ್ಮಿಣೀ ದೇವಿ ಸಹಿತ ಇರುವ ಪಾಂಡುರಂಗ.

**ಮದ್ಗುರುವರಾರಾಧ್ಯ** = ನಮ್ಮ ಗುರುವರ್ಯರಾದ ಪುರಂದರದಾಸ ವರೇಣ್ಯರಿಂದ ಆರಾಧನೇ.

**ಚಟುಲಮೂರುತಿ** = ಅಘಟನಾಘಟನ ಸಾಮರ್ಥ್ಯವುಳ್ಳವನೇ, **ಅಜ** ಬ್ರಹ್ಮದೇವರು, **ನಿಟಿಲನಯನ** = ತ್ರಿನೇತ್ರನಾದ ಶ್ರೀರುದ್ರ ದೇವರು, **ಸುರಕಟಕ** = ಇವರೇ ಮೊದಲಾದ ದೇವತಾವರ್ಗದಿಂದ, **ವಂದ್ಯ** = ವಂದಿತನಾದವನೇ, **ಭ್ರೂಕುಟಿ** = ಹುಬ್ಬಿನ ಚಲನೆಯಿಂದ (ಭೂ-ಹುಬ್ಬು), **ಲವಭಂಗದಿ** - ಸ್ವಲ್ಪ ಅಲ್ಲಾಡಿಸುವುದರಿಂದ [ಲವ-ಸ್ವಲ್ಪ, ಭಂಗದಿ-ಚಲನೆಯಿಂದ], **ಸೃಷ್ಟಿ ಲಯ ಘಟಿಸೀ** = ಜಗತ್ತಿನ ಸೃಷ್ಟಿ, ಸ್ಥಿತಿ, ಲಯಾದಿಗಳನ್ನು ಉಂಟುಮಾಡುವ, **ದುರ್ಘಟ ಭವ ಶರಧಿಗೆ** = ದುಸ್ತರವಾದ ಸಂಸಾರವೆಂಬ ಅಗಾಧ ಸಮುದ್ರಕ್ಕೆ [ಶರಧಿ-ಜಲಧಿ-ಸಮುದ್ರ], **ಘಟಜನೆನಿಪೆ** ಅಗಸ್ತ್ಯನಂತಿರುವವನೇ, [ಘಟ-ಮಡಿಕೆಯಲ್ಲಿ, ಜ-ಜನಿಸಿದ ಅಗಸ್ತ್ಯ ಋಷಿಗಳು] ಅಗಸ್ತ್ಯ ಋಷಿಗಳು ಸಮುದ್ರವನ್ನೇ ಏಕಾಪೋಶನವಾಗಿ ಪಾನಮಾಡಿದರು. ಅಂತೆಯೇ ಶ್ರೀಹರಿಯು ಸಂಸಾರವೆಂಬ ಸಾಗರಕ್ಕೆ ಅಗಸ್ತ್ಯಸದೃಶನು ಎಂಬ ಉಪಮೆ. **ಕಟಿಸ್ಥಿತ ಪಾಣಿ** ಕರದ್ವಯಗಳನ್ನು ತನ್ನ ಸೊಂಟದ ಮೇಲೆ ಇಟ್ಟಿರುವವನು. ಇದು

ತನ್ನ ನಂಬಿದ ಭಕ್ತರಿಗೆ ಸಂಸಾರ ಶರಧಿಯು ಕಟಿ ಪ್ರಮಾಣ ಆಳವಿದ್ದಂತೆ ಎಂಬ ಸಾಂಕೇತವಾಗಿದೆ.

**ಮಧ್ವಯತಿಪ** ಯತಿಶ್ರೇಷ್ಠರಾದ ಶ್ರೀಮನ್ಮಧ್ವಮುನಿಗಳ, **ಕರ ಪದ್ಮಾರ್ಚಿತ** = ಕರಕಮಲಗಳಿಂದ ಪೂಜಿತನಾದ [ಉಡುಪಿಯಲ್ಲಿ ಶ್ರೀ ಗುರು ಮಧ್ವರಿಂದ ಶ್ರೀಕೃಷ್ಣನ ಪ್ರತಿಷ್ಠೆ], **ಅನಂತ** ಅಪಾರವಾದ [ಅಪರಿಚ್ಛಿನ್ನವಾದ], **ಹೃದ್ಯ** = ಮನೋಹರವಾದ, **ಸದ್ಗುಣಸದನಾ** = ಕಲ್ಯಾಣಗುಣಗಳೆಂಬ ಸಮೂಹಕ್ಕೆ ಆಸರನೆನಿಸುವವನೇ, **ಅಧ್ವರ್ಯ ಆಹ್ವಯ** = ಯಜ್ಞನಾಮಕನೇ (ಸರ್ವಯಜ್ಞಗಳಿಗೂ ಅವನೇ ಮುಖ್ಯ ವಿಷಯನು). **ಸ್ವರ್ದುನಿಪಿತ** = ಗಂಗಾಜನಕನೇ [ಸ್ವರ್ಧುನೀ = ಸ್ವರ್ಗ ಲೋಕದ ಗಂಗಾನದಿ. ಆಕಾಶಗಂಗೆ–ಅಮರತಂಗಿಣಿ], **ಮದ್ಗುರೂವರ** = ನಮ್ಮ ಶ್ರೇಷ್ಠ ಗುರುಗಳ [ಗುರುವರ್ಯರ], **ಹೃದ್ಗುಹಾಲಯ** = ಹೃದ್ಗುಹಾನಿವಾಸಿಯಾದ ಅಂತರ್ಯಾಮಿಯೇ, **ಸದ್ವೈಷ್ಣವೋಚಿತ** = ವೈಷ್ಣವರಿಗೆ ಉಚಿತ ವಾದ, **ಪದ್ಧತಿಯ ಬಲಿಸಿ** = ಸನ್ಮಾರ್ಗವನ್ನು ವೃದ್ಧಿ ಮಾಡಿ [ಪುಷ್ಟಿ ಗೊಳಿಸಿ], **ಸಿದ್ಧಿಕೊಡು** = ಉತ್ತಮ ಗತಿಪ್ರದ ನಾಗು. [ಸನ್ಮಾರ್ಗದ ಗುರಿಯೇ ಸಿದ್ಧಿಯು], **ಕೃದ್ಧನಾಗದಿರು ಇನ್ನು** = ಇನ್ನಾದರೂ ನನ್ನ ಮೇಲೆ ಸಿಟ್ಟಾಗದಿರು, **ಸಂಸೃತಿ ಬದ್ಧನಿಗೆ** = ನಿರಂತರ ಸಂಸಾರ ಪಾಶದಿಂದ ಬದ್ಧನಾಗಿರುವ ನನಗೆ, **ಸ್ಮೃತಿಕೊಟ್ಟು** = ನಿನ್ನ ನಾಮಸ್ಮರಣೆಯನ್ನು ನೀಡಿ, **ದಯದಿ** = ಕಾರುಣ್ಯದಿಂದ, **ಎನ್ನನ್ನು ಉದ್ಧರಿಸೋ** = ನನ್ನನ್ನು ಉದ್ಧಾರ ಮಾಡು, **ಮದ್ಭಾರ** = ನನ್ನ ರಕ್ಷಣೆಯ ಹೊರೆಯು, **ನಿನ್ನದೇ** = ನಿನಗೆ ಸಂಬಂಧಿಸಿದ್ದು, **ಯದೂದ್ವಹನೆ** = ಯದು ವಂಶ ಶ್ರೇಷ್ಠನೇ, **ಶತವಿದ್ಯುದ್ಭಾಸ** = ಅನಂತಕೋಟಿ ಮಿಂಚಿನ ಪ್ರಕಾಶವುಳ್ಳವನೇ [ಶತ-ಶಬ್ದಕ್ಕೆ ಅನಂತ ಎಂದರ್ಥ. ವಿದ್ಯುತ್-ಮಿಂಚು, ಭಾಸ–ಪ್ರಕಾಶ.

**ನಿಖಿಳಲೋಕಪಾನೀಕ** = ಸಮಸ್ತ ರಾಜರುಗಳ ಸಮೂಹ [ಲೋಕಪ - ಭೂಮಿಯನ್ನು ಆಳುವ ರಾಜರು, ಅನೀಕ-ಸಮೂಹ) **ಮುಕುರವಹೊಳಿ ರತ್ನ** = ದರ್ಪಣದಂತೆ ಹೊಳೆಯುತ್ತಿರುವ ಕಿರೀಟದಲ್ಲಿ

ರುವ ರತ್ನಗಳ, **ಪ್ರಕರ ನೀರಾಜಿತ**=ಸಮೂಹಗಳಿಂದ ಆರತಿ ಮಾಡಲ್ಪಟ್ಟ **ನಖಪಂಕ್ತಿಶೋಭಿತಾ**=ಶ್ರೀಹರಿಯ ಕಾಲಿನ ಉಗುರುಗಳ ಸಾಲು ಭೂಷಿತ ವಾಗಿದೆ,**ಹೊಕ್ಕುಳಲಿ**=ನಿನ್ನ ನಾಭಿಯಲ್ಲಿ, **ಹೆಮ್ಮಕ್ಕಳನು**=ಜ್ಯೇಷ್ಠ ಪುತ್ರ ನಾದ ಬ್ರಹ್ಮನನ್ನು, **ನೀಮುಕ್ಕುಳಿಸಿ**=ನೀನು ಪಡೆದು (ಹೊರತಂದು), **ದೇವಕ್ಕಿ ತನಯನೆ**=ದೇವಕೀ ಪುತ್ರನಾದ ಶ್ರೀ ಕೃಷ್ಣನೇ, **ಅಕ್ಕರದಿ**= ವಾತ್ಸಲ್ಯದಿಂದ, **ದೇವರ್ಕಳನು**=ದೇವತಾ ಸಮೂಹವನ್ನು, **ಹಿಂದಿಕ್ಕಿ ಕೊಂಡಂತೇ**=ರಕ್ಷಿಸಿದಂತೆ (ಬೆಂಗಾವಲಾಗಿ ನಿಂತಂತೆ), **ಯಕೆ ಹರಿಸುತ**= ದುಃಖವನ್ನು ನಿವಾರಿಸುತ್ತ, **ದುಃಖ ವಿಷಯದ**=ದುಃಖಕ್ಕೆ ಕಾರಣ ವಾದ ವಿಷಯ ಸುಖಗಳ, **ಸಿಕ್ಕು ಬಿಡಿಸಯ್ಯ**=ಗಂಟನ್ನು ಬಿಡಿಸು, **ತಕ್ಕುದನ**=ನನಗೆ ಬೇಕಾದುದನ್ನು (ನಿನ್ನ ಚಿತ್ತಾನುಸಾರ), **ಮಾಡಿಕ್ಕು** =ಮಾಡಿ ನನ್ನನ್ನು ಇರಿಸು, **ನಿನ್ನಯ ಭಕ್ತ ಸಂಗದಿ**=ನಿನ್ನ ದಾಸರ ಸಹವಾಸವನ್ನು ಕೊಡಿಸು, **ರಕ್ಕಸಾಂತಕ**=ದೈತ್ಯಾರಿಯಾದ, **ನೀ**= ನೀನೇ, **ದಿಕ್ಕೆಮಗೆ**=ನಮಗೆ ಗತಿ ಪ್ರದನು.

**ತಮಹ**=ತಮನೆಂಬ ದೈತ್ಯನನ್ನು ಸಂಹರಿಸಿದ ಮತ್ಸ್ಯಾವತಾರಿ ಶ್ರೀ ಹರಿಯೇ, **ಕಮಠ** = ಕೂರ್ಮರೂಪಿ, **ಕೋಲಾ** = ವರಹಾ ವತಾರಿ ಶ್ರೀ ಹರಿಯೇ, **ಮನುಜ ಮೃಗನೇ** = ನರಸಿಂಹ ರೂಪನೆ (ಮನುಜ - ಮಾನವಾಕಾರ, ಮೃಗ-ಸಿಂಹಾಕಾರ) **ಬಲಿದಮನ** =ಬಲಿಯ ಗರ್ವಭಂಗ ಮಾಡಿದ ಶ್ರೀವಾಮನ, **ಭಾರ್ಗವ**=ಭೃಗು ಕುಲೋತ್ಪನ್ನನಾದ ಶ್ರೀ ಪರಶುರಾಮನೇ, **ಸೀತಾರಮಣ** = ಸೀತಾ ಪತಿಯಾದ ಶ್ರೀರಾಮಚಂದ್ರ, **ಯದುವರೇಣ್ಯ**=ಯದುಕುಲತಿಲಕನಾದ ಶ್ರೀಕೃಷ್ಣನೇ, **ನಿಮ್ಮ ಮಹಿಮೆಗೆ**=ನಿನ್ನ ಅನಂತಾವತಾರ ರೂಪ ಯುಕ್ತ ಅಪಾರ ಮಹಿಮೆಗಳಿಗೆ, **ರಮ್ಮೆ ಮುಖ್ಯರು**=ರಮಾಬ್ರಹ್ಮಾದಿಗಳು, **ಅಮ್ಮಲರಿಯದೆ**=ಅರ್ಥಮಾಡಿಕೊಳ್ಳಲಾರದೆ, (ಸಾಕಲ್ಯೇನ ತಿಳಿಯದೇ), **ಸುಮ್ಮನಿರೆ**=ಮೌನವಾಗಿರಲು, **ಮುಖಕಮ್ಮಲದಿ**=ನಿನ್ನನಾಭೀಕಮಲ ದ್ವಾರಾ, **ಬ್ರಹ್ಮಾಂಡ ತೋರಿ**=ಜಗತ್ತನ್ನು ಸ್ವೇಚ್ಛೇಯಿಂದ ಸೃಷ್ಟಿಸಿ, **ಉಭ್ರಮಿಮ್ಮತರ** = ಬುದ್ಧಿಶಕ್ತಿಯಿಂದಲೇ ಎಲ್ಲವನ್ನು ಸಾಧಿಸುತ್ತೇವೆಂದು

ತ್ರಿಳಿದ ಅಜ್ಞಾನಿಗಳನ್ನು, **ಸೂಮ್ಮೋಹಿಸುತಲೀ** = ಮೋಹಗೊಳಿಸಿದ ಬುದ್ಧನೇ, **ಕುಲಗೇಡಿ ರಾಜರ**=ದುರ್ಜನರಾದ ಭೂಪಾಲಕರ, **ಹಮ್ಮಿಳಿಸಿ** = ಗರ್ವವಳಿದು, **ಧರ್ಮಕಾಯಿದೆ** = ಧರ್ಮವನ್ನು ರಕ್ಷಿಸಿದೆ, **ನಿರ್ಮಲತೆಯಲಿ** = ಸತ್ಯಸಂಕಲ್ಪನಾಗಿ (ಅವತಾರಗಳಿಂದ ಶ್ರೀಹರಿಗೆ ಯಾವ ವಿಧವಾದ ಪ್ರಯೋಜನವೂ ಇಲ್ಲ ನಿರಪೇಕ್ಷನು), **ಭರ್ಮಮುಖಳೀತೀರವಾಸ** = ಸ್ವರ್ಣಮುಜೀನದಿಯ ತೀರದಲ್ಲಿರುವ (ಚಂದ್ರಭಾಗಾ ನದಿಯೇ ಸ್ವರ್ಣಮುಖೀನದಿಯು), **ಹೃದ್ಘರ್ಮ್ಯಗಸ್ಥಿತ**=ನನ್ನ ಹೃನ್ಮಂದಿರದಲ್ಲಿ ವಿದ್ಯಮಾನನಾಗಿರುವ, **ತಂದೆ ವೆಂಕಟೇಶವಿಠ್ಠಲಾ**=ಅಸ್ಮದ್ಬಿಂಬ ಮೂರ್ತಿ ಶ್ರೀ ತಂದೆ ವೆಂಕಟೇಶಾಭಿನ್ನ ಪಾಂಡುರಂಗಮೂರ್ತಿಯೇ ॥೩॥



## ೧೮

### (ತಂದೆ ವೆಂಕಟೇಶವಿಠ್ಠಲಾಂಕಿತ)

**ರಾಗ–ಕಾಪಿ** **ಆದಿತಾಳ**

ವಿಠ್ಠಲ-ವಿಠ್ಠಲ-ವಿಠ್ಠಲ-ವಿಠ್ಠಲ-ವಿಠ್ಠಲ ರಕುಮಾಯಿ ॥ ॥ಪ॥

ನೀಲಾಳಕ ಚಂಪಕನನೆನಾಸಿಕ-ಪಲ್ಲವಾಧರ ಚುಬುಕ
ಫುಲಾಕ್ಷ ಭ್ರೂ ಶಚಿವಲ್ಲಭ ಕಾರ್ಮುಕ-ಗಲ್ಲ ರತ್ನ ಫಲಕ
ಜೋಲ್ವ ಕುಂಡಲ ಅಂಶುಮಾಲಿ ಕಂತಪರ-ಮಾಲಕಾಂಚನಕಂಠ
ವಲ್ಲಿ ವೈಜಯಂತಿ ಮಲ್ಲೆ ತುಳಸಿ ಸುಮ-ಚಲ್ವಮುತ್ತಿನ ಪದಕ ॥
॥೧॥

ರುಕ್ಮಿಣಿಲೀಲಾಪ್ರಕ್ರಿಯರಂಗೋರು-ಕ್ರಮ ಶೀಲಸುವಕ್ಷ
ಕುಕ್ಷಿಯೊಳಬ್ಜಜ ತ್ರ್ಯಕ್ಷರ ತುರುಬಿದ-ಮೋಕ್ಷದಾಘಕರಿಹರ್ಯಕ್ಷ
ಈಕ್ಷಿಪ ಭಕ್ತರ ಸಂಸ್ಕೃತಿ ಶೋಷಣ-ಸಾಕ್ಷಿರೂಪಕರ ನಿರಪೇಕ್ಷ
ಮಾಕ್ಷಮಾಧವ ಅಪರೋಕ್ಷವಿತ್ತು ಪೊರೆ-ಲಕ್ಷಸದಿನ್ನವಗುಣಲಕ್ಷ ॥ ॥೨॥

ಹಾಟಕಾಂಬರ ರಂಭಮಾಟಜಾನು ಜಂಘೆ-ನೀಟಿಹ ನೂಪುರದೇಶ
ಕೋಟಿಕೋಟಿಕವರ್ಮಕೋಟಲೆ ಕಳೆವ- ವೈ-ರಾಟ ನಿನ್ನ ಪದತಾಮರಸ
ಮುಟ್ಟಿ ಭಜಿಸಿ ಭವಕಷ್ಟವಹರಿಪ ಪದ-ಇಟ್ಟಿಕಲ್ಲಿನಲಿವಾಸ
ವಿಠ್ಠಲ ಎನೆ ಹೃದಧಿಷ್ಠಾನದಿ ಮಿಂ-ಚಿಟ್ಟು ತೋರ್ವ **ತಂದೆ ವೆಂಕಟೇಶಾ** ||
||೩||

**ಅರ್ಥವಿವರಣೆ :**

**ವಿಠ್ಠಲ**=ಜ್ಞಾನಪ್ರದನಾದ ಮಂಗಳ ಮಹಿಮಮೂರ್ತಿ. (ವಿತ-ಜ್ಞಾನ, ಠ-ಶೂನ್ಯ, ಲ-ರಕ್ಷಕನು. ಅಂದರೆ, ಜ್ಞಾನಶೂನ್ಯರಾದವರಿಗೆ ಜ್ಞಾನಪ್ರದನಾಗಿದ್ದು ಸಂರಕ್ಷಿಸುವ ಭಗವದ್ರೂಪ-ಎಂದರ್ಥ)

**ರಕುಮಾಯಿ** = ಜಗಜ್ಜನನಿಯಾದ ರುಕ್ಮಿಣೀವಲ್ಲಭನು, **ನೀಲ ಅಳಕ**=ಕಪ್ಪಾಗಿರುವ ಕೂದಲು, **ಚಂಪಕನನೆ**=ಸಂಪಿಗೆಮೊಗ್ಗಿನಂತಿರುವ (**ನನೆ**-ಮೊಗ್ಗು), **ನಾಸಿಕ**=ಮೂಗು, **ಪಲ್ಲವ ಅದರ**=ಹೂವಿನ ಎಸಳಿನಂತೆ ತುಟಿಗಳು, **ಚುಬುಕ**=ಗದ್ದ (ತುಂಬಿದ ಗದ್ದ), **ಫುಲ್ಲಾಕ್ಷ**=ಹೂವಿನ ಎಸಳಿನಂತಿರುವ ಕಣ್ಣು (ಕಮಲಾಕ್ಷ), **ಭ್ರೂ**=ನಿನ್ನ ಹುಬ್ಬಿನ ಮಾಟವು, **ಶಚಿವಲ್ಲಭಕಾರ್ಮುಕ** = ಶಚೀಪತಿಯಾದ ಇಂದ್ರನ ಬಿಲ್ಲಿನಂತಿದೆ (ಇಂದ್ರಧನುಸ್ಸಿನಂತೆ ಬಾಗಿದ ಹುಬ್ಬು). **ರತ್ನಫಲಕ**=ರನ್ನಗನ್ನಡಿಯಂತೆ ನುಣುಪಾದ, ಹೊಳೆಯುತ್ತಿರುವ, **ಗಲ್ಲ**=ಕಪೋಲಗಳು. **ಜೋಲ್ವ** = ಜೋತು ಬಿದ್ದು ಅಲ್ಲಾಡುತ್ತಿರುವ, **ಅಂಶುಮಾಲಿ**=ಸೂರ್ಯನ ಕಿರಣಗಳಂತೆ ಹೊಳೆಯುತ್ತಿರುವ (ಅಂಶು-ಕಿರಣ, ಮಾಲಿ-ಮಾಲಾಕಾರವಾಗಿ ಉಳ್ಳ ಸೂರ್ಯ), **ಕುಂಡಲ**=ಕರ್ಣ ಕುಂಡಲಗಳು, **ಕಂಠದರ**=ಕಡೆದ ಶಂಖದಂತಿರುವ ಕತ್ತು (ದರ-ಶಂಖ), **ಮಾಲಕಾಂಚನ** =ಕಾಂಚನಮಾಲಾ (ಚಿನ್ನದ ಸರ), **ಕಟಿಕ**=ಕೈಗಡಗ, **ವಲ್ಲಿ ವೈಜಯಂತಿ**=ವೈಜಯಂತೀ ಮಾಲಾ, **ಮಲ್ಲೆ ತುಳಸಿ ಸುಮ**=ಮಲ್ಲಿಗೆ ಮತ್ತು ತುಳಸಿ, ಪುಷ್ಪಗಳ ವಿವಿಧ ಹಾರಗಳಿಂದ ಅಲಂಕೃತನಾಗಿದ್ದಾನೆ, **ಚೆಲ್ವ ಮುತ್ತಿನ ಪದಕ**=ಸುಂದರವಾದ ಮುತ್ತಿನ ಸರ.

**ರುಕ್ಮಿಣಿಲೀಲಾ**=ಪತ್ನಿಯಾದ ರುಕ್ಮಿಣೀನಾಮಕಳಾದ ಶ್ರೀಲಕ್ಷ್ಮೀ ದೇವಿಯಲ್ಲಿ ಕ್ರೀಡೆಯಾಡುತ, **ಪ್ರಕ್ರಿಯರಂಗ**=ವಿಹಾರ ಮಾಡುವ ರಂಗ ನೆಂದೆನಿಸುವ, **ಉರುಕ್ರಮ**=ಅತ್ಯಂತ ಶ್ರೇಷ್ಠವಾದ, **ಶೀಲಸುವಕ್ಷ**= ನಿರ್ದೋಷವಾದ, ಸಮೀಚೀನವಾದ ವಕ್ಷಸ್ಥಲವುಳ್ಳವನು, **ಕುಕ್ಷಿಯೊಳು**= ತನ್ನ ಉದರದಲ್ಲಿ. **ಅಬ್ಜಜ**=ನಾಭೀಕಮಲೋದ್ಭವರಾದ ಬ್ರಹ್ಮದೇವರು (ಅಪ್+ಜಿ+ಜ), **ತ್ರ್ಯಕ್ಷರ**=ತ್ರಿಲೋಚನರಾದ ಶ್ರೀರುದ್ರದೇವರು, **ತುರುಬಿದ**=ಚೇತನ ವರ್ಗದವರಿಂದ ತುಂಬಿದ, **ನೋಕ್ಷದ**=ಮೋಕ್ಷ ವನ್ನು ಕೊಡುವ (ಮುಕುಂದ ನಾಮಕನು), **ಅಘ**=ಪಾಪಗಳೆಂಬ, **ಕರಿ** =ಆನೆಗಳಿಗೆ, **ಹರ್ಯಕ್ಷ**=ಸಿಂಹ ಸದೃಶನಂತಿರುವ, **ಈಕ್ಷಿಪ**=ತನ್ನ ಕೃಪಾಕಟಾಕ್ಷಕ್ಕೆ ಬಿದ್ದ, **ಭಕ್ತರ**=ಭಕ್ತಜನರ, **ಸಂಸ್ಕೃತಿ**=ಜನನ ಮರಣಾಖ್ಯವಾದ ಸಂಸ್ಕಾರವನ್ನು, **ಶೋಷಣ**=ಬತ್ತಿಸುವವನು, **ಸಾಕ್ಷಿ ರೂಪಕರ**=ಸೊಂಟದಲ್ಲಿ ಇಟ್ಟ ಕರಗಳು. **ನಿರಪೇಕ್ಷ**=ಉಪಮಾನ ರಹಿ ತನು (ಸಮಾಭ್ಯಧಿಕ ಶೂನ್ಯನು), **ಮಾ**=ಶ್ರೀಲಕ್ಷ್ಮೀದೇವಿ, **ಕ್ಷಮಾ**= ಭೂದೇವಿ, **ಧವ**=ಇತರರಿಗೆ ರಮಣನು (ಶ್ರೀ ಭೂರಮಣನು), **ಅಪ ರೋಕ್ಷವಿತ್ತು**=ನಿನ್ನ ಬಿಂಬಾಪರೋಕ್ಷ ರೂಪವಾದ ದರ್ಶನ ಭಾಗ್ಯವನ್ನು ನೀಡಿ, **ಪೊರೆ**=ಸಂರಕ್ಷಿಸು, ಎನ್ನ **ಅವಗುಣಲಕ್ಷ**=ನನ್ನ ದೋಷ ಯುಕ್ತವಾದ ಅನಂತ ಲಕ್ಷಣಗಳನ್ನು. **ಲಕ್ಷಿಸದೆ**=ಗಣನೆಗೆ ತಾರದೆ, ನನ್ನನ್ನು ಸಂರಕ್ಷಿಸೆಂದು ಪಾಂಡುರಂಗನಲ್ಲಿ ಪ್ರಾರ್ಥಿಸಿದ್ದಾರೆ ಕವಿವರ್ಯರು, **ಹಾಟಕಾಂಬರ**=ಸ್ವರ್ಣವಸ್ತ್ರವನ್ನು ಉಟ್ಟು (ಪೀತಾಂಬರ), **ಜಾನು ಜಂಘೆ**=ನಿನ್ನ ತೊಡೆ ಮತ್ತು ಕೆಳಗಾಲು. **ರಂಭಮಾಟೆ**=ಬಾಳೆಯ ದಿಂಡಿನಂತಿರುವ, **ನೀಟಿಹ**=ಚಾಚಿರುವ. **ನೂಪುರದೇಶ**=ಕಣಕಾಲಿನ ಅಂಗವಿಶೇಷವು, **ಕೋಟಿ ಕೋಟಿ**=ಅನಂತಸಂಖ್ಯಾಕವಾದ. **ಕರ್ಮ ಕೋಟಲೆ**=ಕರ್ಮಗಳ ಸಮೂಹವನ್ನು. **ಕಳೆವ**=ಪರಿಹರಿಸುವ, **ವೈರಾಟ** ವಿರಾಡ್ರೂಪಿಯಾದ, **ನಿನ್ನ ಪಾದತಾಮರಸ**=ನಿನ್ನ ಚರಣಕಮಲಗಳನ್ನು **ಮುಟ್ಟಿ ಭಜಿಸೆ**=ಸ್ಪರ್ಶಿಸಿ ಕೊಂಡಾಡಲು, **ಭವಕಷ್ಟವ**= ಸಂಸಾರಜನಿತ ದುಃಖಗಳನ್ನು, **ಹರಿಪ**=ಪರಿಹಾರ ಮಾಡುವ, **ಪದ**- ನಿನ್ನ ಚರಣ

ದ್ವಯಗಳನ್ನು, **ಇಟ್ಟ ಕಲ್ಲಿನಲಿ** ಇಟ್ಟಿಗೆಯ ಪಾದ ಪೀಠದ ಮೇಲೆ, **ವಾಸ** = ನಿಂತಿರುವ. **ವಿಠ್ಠಲ** = ಜ್ಞಾನಪ್ರದ ಮೂರ್ತಿಯೇ, **ಎನೆ** = ಎಂದೆನಲು, **ಹೃದಧಿಷ್ಠಾನದಿ** = ಹೃದಯವೆಂಬ ಸ್ಥಾನದಲ್ಲಿ (ಹೃತ್ಕಮಲವೆಂಬ ಅಧಿಷ್ಠಾನದಲ್ಲಿ), **ಮಿಂಚಿಟ್ಟು** = ಮಿಂಚಿನಂತೆ (ವಿದ್ಯುತ ಪ್ರಕಾಶದಂತೆ), **ತೋರ್ವ** = ಗೋಚರನಾಗುವನು, **ತಂದೆ ವೆಂಕಟೇಶ (ವಿಠ್ಠಲಾ)**, ಅಸ್ಮದ್ಬಿಂಬರೂಪಿಯಾದ ತಂದೆ ವೆಂಕಟೇಶಾತ್ಮಕನೇ.



## ೧೯

**(ಗುರುಗೋವಿಂದವಿಠ್ಠಲಾಂಕಿತ)**

**ರಾಗ–ಮೋಹನ** **ಆದಿತಾಳ**

ಎಂದು ಕಾಂಬೆನೊ-ತಂದೆ ಪಾಂಡುರಿ ವಿಠ್ಠಲರಾಯನ
ಬಂದು ನಿನ್ನಯ-ಸುಂದರಾಕೃತಿ-ಎಂದು ನೋಡುವೆ ॥

ದಾಸಜನರಾ-ಕ್ಲೇಶಹರಿಪಾ-ದೋಷದೂರಾನೇ
ದೋಷಿ ಎನ್ನನು-ಪೋಷಿಸೂವುದು-ಸಹಸ್ರನಾಮಾನೇ ॥ ॥೧॥

ಶ್ರೇಷ್ಠ ಭಕ್ತನು-ಕೊಟ್ಟ ಇಟ್ಟಿಯ-ಮೆಟ್ಟಿ ನಿಂತಾನೇ
ಪುಟ್ಟನಾಗುತ-ಮೆಟ್ಟ ಬಲಿಯನು-ಕಷ್ಟ ಕಳೆದಾನೇ ॥ ॥೨॥

ಕಾವ ಕೊಲ್ಲುವ–ಬೋವ ಬಂಡಿಗೆ-ಯಾವನೀತನೇ
ಓವಿ ಭಜಿಸಲು–ಕಾವ **ಗುರು–ಗೋವಿಂದವಿಠ್ಠಲಾನೇ** ॥ ॥೩॥



**ಅರ್ಥವಿವರಣೆ :**

**ಪಾಂಡರಿ ವಿಠ್ಠಲರಾಯನೆ** = ಪಂಢರಾಪುರದ ಪಾಂಡುರಂಗವಿಠ್ಠಲನು (ಪ್ರಾಸಾಕ್ಷರಕ್ಕಾಗಿ ಈ ಪ್ರಯೋಗ), **ಸಹಸ್ರನಾಮನೇ** = ವಿಷ್ಣು ಸಹಸ್ರ ನಾಮಾಂಕಿತನೇ. **ಶ್ರೇಷ್ಠಭಕ್ತನು** = ಉತ್ತಮ ಭಕ್ತನಾದ ಪುಂಡರೀಕ ಮುನಿಯು, **ಕೊಟ್ಟ ಇಟ್ಟಿಯ** = ಪುಂಡರೀಕನು ಮಾತಾಪಿತೃಗಳ ಸೇವೆ ಯಲ್ಲಿ ನಿರತನಾಗಿರಲು, ಶ್ರೀಕೃಷ್ಣನು ಅವನ ಭಕ್ತಿಯನ್ನು ಪರೀಕ್ಷಿಸಲು ಬಂದು ಹಿಂದೆ ನಿಂತ ಮಾತಾಪಿತ್ರಂತರ್ಗತ ಶ್ರೀಲಕ್ಷ್ಮೀನಾರಾಯಣರನ್ನು ಜಲಪ್ರತೀಕದಲ್ಲಿ ಪೂಜಿಸುತ್ತಿದ್ದ ಪುಂಡರೀಕನು ಒಂದು ಇಟ್ಟಿಗೆಯನ್ನು ಹಿಂದಕ್ಕೆ ಎಸೆದೂ ಮಾತಾಪಿತೃಗಳ ಸೇವೆ ಪೂರ್ಣವಾಗುವ ಪರ್ಯಂತ, ಆ ಇಟ್ಟಿಗೆಯ ಮೇಲೆ ನಿಂತಿರುವಂತೆ ಪ್ರಾರ್ಥಿಸಿದನು. ಅದರಂತೆ ಭಕ್ತವತ್ಸಲನಾದ ಪಾಂಡು ರಂಗನು ಆ ಇಟ್ಟಿಗೆಯ ಮೇಲೆ ಇವತ್ತಿಗೂ ನಿಂತಿದ್ದಾನೆ, ಸ್ವಯಂವ್ಯಕ್ತರೂಪ ನಾಗಿ, **ಪುಟ್ಟನಾಗುತ** = ವಾಮನರೂಪದಿಂದ, **ಮೆಟ್ಟಿ ಬಲಿಯನು** = ಬಲಿಚಕ್ರವರ್ತಿಯನ್ನು ರಸಾತಲಕ್ಕೆ ಕಾಲಿನಿಂದ ತುಳಿದು ಮೆಟ್ಟಿ, **ಕಷ್ಟ ಕಳೆದಾನೇ** ಬಲಿಯ ಗರ್ವವನ್ನು ಭಂಗಿಸಿ, ಅವನಿಗೆ ಸದ್ಗತಿಯನ್ನು ಕರುಣಿ ಸಿದ ಕೃಪಾಸಾಗರನು, **ಕಾವ ಕೊಲ್ಲುವ** ಸೃಷ್ಟ ಜಗತ್ತನ್ನು ಸಂರಕ್ಷಿಸುವ ಪ್ರಳಯಕಾಲದಲ್ಲಿ ಸಂಹರಿಸುವ ಸೃಷ್ಟ್ಯಾದ್ಯಷ್ಟ ಕರ್ತನು, **ಬೋವಬಂಡಿಗೆ** = ಪಾರ್ಥಸಾರಥಿಗೆ (ಬೋವ-ಸಾರಥಿ, ಬಂಡಿಗೆ–ಪಾರ್ಥನ ರಥ), **ಯಾವ ನೀತನೇ** — ವಿಜಯಸಖನಾದ ಶ್ರೀಕೃಷ್ಣನೇ ಪಾಂಡುರಂಗ ಮೂರ್ತಿಯ, **ಜವಿ** = ಸ್ವಲ್ಪವಾದರೂ (ಸಾಸಿವೆ ಕಾಳಿನಷ್ಟಾದರೂ), **ಭಜಿಸಲು ಕಾವ** = ಭಕ್ತಿ ಭಾವದಿಂದ (ಸ್ವಲ್ಪವಾದರೂ ಸರಿಯೇ) ತನ್ನನ್ನು ಕೊಂಡಾಡಲು ಅಂತಹ ಭಕ್ತರನ್ನು ಸಂರಕ್ಷಿಸುವ ಭಕ್ತ ವತ್ಸಲನು.



## ೨೦

### (ಗುರುಗೋವಿಂದವಿಠ್ಠಲಾಂಕಿತ)

ರಾಗ–ಶಂಕರಾಭರಣ ಆದಿತಾಳ

ನೋಡಿದೇ ಶ್ರೀವಿಠ್ಠಲನ ನೋಡಿದೇ ॥ ॥ಪ॥

ನೋಡಿದ ಲೀಲಾವಿಮಾನುಷನ-ಕೊಂ
ಡಾಡಿದೆ ಕರುಣಾಸಾಗರನ ॥ಅಪ॥
ನಾಡೊಳಗಾವೆಡೆ-ಈಡು ಇಲ್ಲದ ದೈವ
ಗಾಡಿಕಾರನು ಕೃಷ್ಣ-ಜೋಡು ಕುಂಡಲಧರನ ॥ ॥ಅ॥

ದಾಸರಂದದಿ ಕಾವಿ ವಸನ–ಹೊದ್ದು
ಭಾಸೀಸುತಿಹ ಸಿರಿವರನ-ವಸನ
ಮೀಸಲನವನು ತೆಗೆಯಲದನ–ಕಂಡೆ
ಲೇಸಾದ ಶಾಲು ಹೊದ್ದವನ ॥ಅಪ॥
ಕಾಶ್ಮೀರದ ಶಾಲು–ಭಾಸುರ ಜರಿ ಖಚಿತ
ಭೂಷಿತ ಹರಿ ಕುಳಿತು–ತೋಷಿಪ ಭಕುತರನ ॥ ॥೧॥

ಸುತ್ತಿಹ ಪಾವಡೆ ಶಿರಕೇ-ಬಲು
ಸುತ್ತು ಸುತ್ತಿರುವುದು ಅದಕೇ–ಹರಿ
ಮಸ್ತಕ ಛಂದ ಕಾಂಬುವುದಕೇ–ನೋಡಿ
ಭಕ್ತ ಸಂದಣಿಯು ತೋಷಕ್ಕೆ ॥ಅಪ॥
ಸುತ್ತಿಹುದನು ಬಿಟ್ಟು–ಹುತ್ತಿಸುತಿರಲಾಗ
ಕೃತ್ತಿವಾಸನ ತಾತ–ನೆತ್ತಿ ನೈಜವ ಕಂಡೇ ॥ ॥೨॥

ಪೂಜಾರಿ ತೆಗೆಯಲು ಜರಿಯ–ಶಾಲು
ಮಾಜಾದೆ ವಿಠ್ಠಲನ ಪರಿಯ–ಕಂಡೆ

ನೈಜದ ಶ್ರೀವರನ ದ್ವಯ–ಹಸ್ತ
ಯೋಜಿಸಿ ಕಟಿಯಲಿಹ ಪರಿಯಾ ॥ಅಹ॥
ಸೋಜಿಗತನರೂಪ–ನೈಜದಿ ತೋರುತ
ಪೂಜಾದಿ ಸ್ವೀಕಾರ-ವ್ಯಾಜಾವ ಕಂಡೆನು ॥ ॥೩॥

ನಿರ್ಮಲಾಕೃತಿ ಪೂರ್ದ್ಧಹಾರ-ತುಳಸಿ
ಕಮ್ಮಲಸೂಸುವ ಧಾರಾ–ಕಾರ
ಒಮ್ಮೇಲಿ ತೆಗೆದರಪಾರ–ದಯಾ
ಸುಮ್ಮನಸರಿಗೀವ ಪೋರ ॥ಅಹ॥
ಅಮ್ಮಹ ದೈವನ–ಇಮ್ಮಡಿ ಪ್ರಭೆಕಂಡೆ
ನಿರ್ಮಾಲ್ಯ ತೆಗೆಯುವ-ಕರ್ಮಾ ಚರಿಸೂವಲ್ಲಿ ॥ ॥೪॥

ಲೌಕಿಕ ಪೂಜೆಗಳ ಮಮ–ಪರ
ಲೋಕೈಕನಾಥಗೆ ಪರಮ–ಪ್ರೀತಿ
ವಾಕು ಭಕುತಿ ಯುತ ಮರ್ಮ–ತಿಳಿ
ಪ್ರಾಕೃತ ಕೊಳ್ಳುವ ನಮ್ಮ ॥ಅಹ॥
ಶ್ರೀಕರಾರ್ಚಿತ ಪಾದ-ಸ್ವೀಕರಿಸುವ ಭಕ್ತ
ತೋಕನ ಬಿಂದೋದ–ಶ್ರೀಕರ ದಳ ತುಳಸಿ ॥ ॥೫॥

ನಾಲಿತ್ತು ಭುವನಗಳ್ಜ್ಯೋತಿ–ಮತ್ತು
ನೇಕಾನೇಕಾಕಾರ ಜ್ಯೋತಿ–ಗಳ್ಗೆ
ಪ್ರಾಕಾಶಪ್ರದ ಪರಂಜ್ಯೋತಿ–ಮುಕ್ತಿ
ಪ್ರಾಕಾರದೊಳಗಿವನೆ ಜ್ಯೋತಿ ॥ಅಹ॥
ಏಕಮೇವ ಹರಿಗೆ–ಕಾಕಡಾರುತಿ ಮಾಳ್ಪ
ಲೋಕರ ಪೂಜೆಯಾ–ಸ್ವೀಕರಿಪುದ ಕಂಡೆ ॥ ॥೬॥

ಪಂಚಮೋಕ್ಷ ಪ್ರದ ಹರಿಗೆ–ಆಯ್ತು
ಪಂಚವಿಧಭಿಷೇಕ ಅವಗೆ–ಶೇಷ
ಮಂಚಿಕೆ ಕ್ಷೀರಾಬ್ಧಿ ಶಯುಗೆ–ಮಧು
ಸಿಂಚನ ಮಧ್ವಿದ್ಯ ಹರಿಗೆ ॥ಅಹ॥
ಪಂಚಾಮೃತಭಿಷೇಕ–ಸಂಚಿಂತಿಸುವನೀಗೆ
ಸಂಚಿತ ಕರ್ಮವ–ಕೊಂಚವ ಮಾಡುವ ॥ ॥೭॥

ಮಂಗಳಮಹಿಮಗೆ ಸ್ನಾನಾ–ಅವ
ಗಂಗಾ ಪಿತನೆಂಬುದೆ ಮಾನ–ಹಾಗು
ಅಂಗಜನಯ್ಯಗೆ ಸ್ನಾನಾ-ಆಯ್ತು
ಹಿಂಗದೆ ಲೋಕ ವಿಧಾನಾ ॥ಅಹ॥
ಸಂಗೀತಲೋಲ ಸ-ತ್ಸಂಗವು ತುತಿಸಲು
ಸ್ವಾಂಗಾಯುನಾಮ ಶು–ಭಾಂಗನು ಮೆರೆದನು ॥ ॥೮॥

ವಸ್ತ್ರದಿಂದಲಿ ಕಾಯ ವರೆಸಿ–ಬಹು
ಶಾಸ್ತ್ರೋಕ್ತ ಉಡಿಗೆಯ ಉಡಿಸಿ–ಮತ್ತೆ
ರತ್ನಾದ್ಯಾಭರಣವ ತೊಡಿಸಿ–ಚೆಲ್ವ
ಕಸ್ತೂರಿ ತಿಲಕವನಿರಿಸಿ–॥ಅಹ॥
ವಿಸ್ತೃತೀ ಪರಿಯಲಿ–ಸತ್ಯ ಷೋಡಶ ಪೂಜೆ
ಚತ್ತುರ ಮೊಗನಿಂದ–ಕೃತ್ಯಾನುಸಂಧಾನ ॥ ॥೯॥

ವೇದಘೋಷ ಪೂಜಾ ಮಂತ್ರ–ಬಹು
ನಾದವಿಠ್ಠಲ ನಾಮ ಮಂತ್ರ–ತುಂಬಿ
ಮೋದ ಪೂರೈಸಿತು ತಂತ್ರ–ಘಂಟೆ
ನಾದದಿಂದಾರುತಿ ಕೃತ–॥ಅಹ॥
ಆದರದಿಂದ ಪ್ರ–ಸಾದವು ಸ್ವೀಕೃತ
ಮೋದದಿ ವಿಠಲನ–ಪಾದಾಲಿಂಗಾಂತ್ಯವ ॥ ॥೧೦॥

ಉತ್ಕೃಷ್ಟ ಸುಕೃತದ ಭೋಗ–ಹರಿ
ಇತ್ತನು ಅನುಗ್ರಹ ಯೋಗ–ಸ್ವಂತ
ಹಸ್ತದಿ ಪೂಜಾದಿ ಯೋಗ–ಮಾಳ್ಪ
ಕೃತ್ಯ ಸಂಧಿಸಿದನು ಈಗ ॥ಅಹ॥
ಚಿತ್ತಜಪಿತ ವಿಠಲ–ಭಕ್ತವತ್ಸಲ ದೇವ
ನಿತ್ಯ ಕರುಣವ–ತುತ್ತಿಸಲೆನಗಳವೇ ॥ ॥೧೧॥

ಪಿತೃಸೇವಕ ಪುಂಡಲೀಕ–ತನ್ನ
ಕೃತ್ಯದೊಳಿರೆ ನಿರ್ವಲ್ಯೀಕ-ಹರಿ
ವ್ಯಕ್ತ ತದ್ಭಕ್ತ ಪರೀಕ್ಷಕ–ನಾಗೆ
ಭಕ್ತನು ಮನಸ್ಥೈರ್ಯಾವಲೋಕ–॥ಅಹ॥
ಇತ್ತ ಇಟ್ಟಿಗೆ ಪೀಠ–ಮೆಟ್ಟಿ ನಿಂತಿಹ ದೇವ
ಕೃತ್ತಿವಾಸಾದ್ಯರಿಂ–ಸ್ತುತ್ಯ ಶ್ರೀವಿಠ್ಠಲನ ॥ ॥೧೨॥

ದಾಸೀಗೆ ಕಂಕಣವಿತ್ತ–ಹರಿ
ದಾಸರ ರೂಪೀಲಿ ನಕ್ತ–ಕಳೆ
ದಾಸು ದಾಸರ ಶಿಕ್ಷಕರ್ತ–ಮತ್ತೆ
ದಾಸರ ನಿರ್ದೋಷ ವಾರ್ತೆ ॥ಅಹ॥
ದಾಸನೋರ್ವಾವೇಶ-ಭಾಷಣ ಕೇಳುತ್ತ
ವಾಸುಕಿ ಶಯನೊಲಿದ-ದಾಸ ಪುರಂದರಗೆ ॥ ॥೧೩॥

ಮುಯ್ಯಕೆ ಮುಯ್ಯ ತೀರಿತು-ಜಗ
ದಯ್ಯ ವಿಠ್ಠಲನ್ನ ಕುರಿತು-ಪೇಳಿ
ಕಯ್ಯಸೆ ಮುಗಿದರು ತ್ವರಿತು-ದಾಸ
ಮೈಯ್ಯ ಬಿಗಿದ ಕಂಬ ಒಳಿತು ॥ಅಹ॥
ತ್ರಯ್ಯ ಲೋಕದಿ ದಾಸ-ಅಯ್ಯನ ಪೆಸರಾಯ್ತು
ತ್ರಯ್ಯ ಗೋಚರ ಹರಿ-ಪ್ರೀಯ್ಯನಿಗೊಲಿದಂಥಾ ॥ ॥೧೪॥

ಅಂಡ ಬ್ರಹ್ಮಾಂಡಗಳೊಡೆಯ-ಭಕ್ತ
ಪುಂಡಲೀಕನಿಗೊಲಿದ ಭಿಡೆಯ-ರಹಿತ
ಚಂದ ಕಿರಣಾನಂತ ಪ್ರಭೆಯ–ಹರಿ
ಮುಂಡಿ ತಿಂದು ಭಾಗತಡಿಯ ।।ಅಹ।।
ಹಿಂಡು ದೈವರ ಗಂಡ–ಪುಂಡರೀಕಾಕ್ಷನೆ
ಪಿಂಡಾಂಡದೊಳಗಿನ–ಗಂಡನೆಂದೆನಿಸಿಹನ ।। ।।೧೫।।

ಪುರಂದರ ವಿಜಯ ಭಾಗಣ್ಣ–ಮತ್ತೆ
ವರ ಜಗನ್ನಾಥವರ್ಯನ್ನ-ಬಹು
ಪರಿತವಿಸಿತ್ತೆ ಮೈಪುಷ್ಟಾನ್ನ–ದಾಸ
ವರರ ಸೇವಕ ಸೇವಕನ್ನ–॥ಅಹ॥
ಪುರಂದರದಾಸರ ದಿನ-ದುರುಶನವಿತ್ತಿಹೆ
ಅರಿವಾಯ್ತೆನ್ನಯ ಕುಲ–ಪರಮ ಧನ್ಯವೆಂದು ॥ ॥೧೬॥

ಇಂದು ಭಾಗದಿ ವಾಸ ಜಯ–ಸಿರಿ
ಇಂದಿರೆಲೋಲನೆ ಜಯ–ದಾಸ
ಮುಂದಿಗಭೀಷ್ಟದ ಜಯ–ಎನ್ನ
ತಂದೆ ತಾಯಿ ಬಂಧು ಜಯ ॥ಅಹ॥
ಸುಂದರ ಗುರುಗೋ-ವಿಂದ ವಿಠ್ಠಲ ಹೃ
ನ್ಮಂದಿರದೊಳು ತೋರಿ–ಬಂಧನ ಬಿಡಿಸುವ ॥ ।।೧೭॥



**ಅರ್ಥವಿವರಣೆ :**

ಗುರುಗೋವಿಂದ ವಿಠ್ಠಲಾಂಕಿತ ದಾಸವರ್ಯರು ಶ್ರೀಪಾಂಡುರಂಗನ ದರ್ಶನಾರ್ಥವಾಗಿ ಶ್ರೀಪಂಢರಾಪುರ ಕ್ಷೇತ್ರಕ್ಕೆ ಆಗಮಿಸಿದ್ದಾರೆ. ಅಲ್ಲಿ ಸುಂದರ ದಿವ್ಯ ಮೂರ್ತಿಯನ್ನು ಸಂದರ್ಶಿಸಿ, ಆನಂದತುಂದಿಲರಾಗಿ,

ಆಪಾದಮಸ್ತಕವಾಗಿ ಆ ಭವ್ಯ ಮೂರ್ತಿಯನ್ನು ಸಾಕಾರವಾಗಿ ವರ್ಣಿಸಿರು ತ್ತಾರೆ-ಪ್ರಸಕ್ತ ಕೀರ್ತನ ಸಾಹಿತ್ಯದಲ್ಲಿ.

**ಶ್ರೀವಿಠ್ಠಲನ** = ಜ್ಞಾನಪ್ರದನೂ, ಪಾಪಪರಿಹಾರಕನೂ ಆದ ಶ್ರೀಪಾಂಡುರಂಗವಿಠ್ಠಲ ಮೂರ್ತಿ, **ಲೀಲಾಮಾನುಷನ** = ನರರಂತೆ ಲೀಲಾವಿಲಾಸವನ್ನು ತೋರಿಸುವ, **ನಾಡೊಳಗೆ ಆವೆಡೆ** = ಭೂಮಿಯಲ್ಲಿ ಯಾವಲ್ಲಿ ಯಾದರೂ, **ಈಡು ಇಲ್ಲದ** = ತನಗೆ ಸರಿಸಮಾನರಿಲ್ಲದ (ಸಮಾಭ್ಯಧಿಕ ಶೂನ್ಯನು), **ಗಾಡಿಕಾರನು** = ಪಾರ್ಥನ ರಥದ ಸಾರಥಿ, **ಜೋಡು ಕುಂಡಲಧರನ** = ಎರಡು ಕರ್ಣಗಳಲ್ಲಿ ಕುಂಡಲಗಳನ್ನು ಧರಿಸಿರುವ.

**ದಾಸರಿಂದದಿ** = ತನ್ನ ಕಿಂಕರರು ನೀಡಿದ ಕಾವಿ ಬಣ್ಣದ ವಸ್ತ್ರವನ್ನು ಹೊದ್ದಿರುವ, **ಭಾಸಿಸುತಿಹ** = ಪ್ರಕಾಶಮಾನವಾಗಿ ಬೆಳಗುತ್ತಿರುವ, **ಸಿರಿವದನ** = ಲಕ್ಷ್ಮೀಪತಿಯು (ಲಕ್ಷ್ಮಿಗಿಂತ ಉತ್ತಮೋತ್ತಮನಾದ), **ವಸನ ಮೀಸಲ** = ಹಿಂದಿನ ದಿನ ಹೊದ್ದಿಸಿದ್ದ ವಸ್ತ್ರವನ್ನು ತೆಗೆಯಲು (ನಿರ್ಮಾಲ್ಯ ವಿಸರ್ಜನಾ ಸಮಯದಲ್ಲಿ), **ಲೇಸಾದ ಶಾಲು** = ಉತ್ತಮವಾದ ಶಾಲನ್ನು ಹೊದ್ದಿರುವ, **ಕಾಶಮೀರದ ಶಾಲು** = ಕಾಶ್ಮೀರದ ಸೊಗಸಾದ ಶಾಲು, **ಭಾಸುರ ಜರೆ ಖಚಿತ** = ಹೊಳೆಯುತ್ತಿರುವ ಜರತಾರಿ ಅಂಚಿನ ಶಾಲು, **ತೋಷಿಪ** = ಆನಂದಪ್ರದನಾದ.

**ಸುತ್ತಿಹ ಪಾವಡೆ ಶಿರಕೇ** = ತಲೆಗೆ ಸುತ್ತಿರುವ ರೂಮಾಲಿನಂತಿರುವ ಭೂಷಣ (ಮಹಾರಾಷ್ಟ್ರ ಸೀಮೆಯ ಪಾವಡೆ), **ಮಸ್ತಕ** = ಶ್ರೀಪಾಂಡುರಂಗನ ಶಿರದ ಅಂದ, **ತೋಷಕೆ** = ನೆರೆದಿಹ ಭಕ್ತ ಜನರುಗಳನ್ನು ಆನಂದಪಡಿಸುವುದಕ್ಕಾಗಿ, **ಬಿಚ್ಚೆ** = ಶಿರಕ್ಕೆ ಸುತ್ತಿರುವ ಶಾಲನ್ನು ಬಿಚ್ಚಲು, **ಕೃತ್ತಿವಾಸನ ತಾತ** = ರುದ್ರದೇವರ ಪಿತನಾದ ಶ್ರೀಹರಿ(ಕೃತ್ತಿವಾಸ-ಆನೆಯ ಚರ್ಮವನ್ನು ಹೊದ್ದಿರುವ ಶ್ರೀರುದ್ರ. ಇಲ್ಲಿ "ತಾತ"–ಎಂಬ ಶಬ್ದವು ಅಜ್ಜ ಮತ್ತು ತಂದೆ ಎಂಬ ಎರಡು ಅರ್ಥಗಳನ್ನು ಕೊಡುವುವು. ರುದ್ರನ ತಂದೆ ಬ್ರಹ್ಮ ಬ್ರಹ್ಮನ ಜನಕನು ಶ್ರೀಹರಿ. ಅಲ್ಲಿಗೆ ಶ್ರೀಹರಿಯು ರುದ್ರನಿಗೆ

ತಾತನಾಗಬೇಕು. ವೇದವ್ಯಾಸರ ಪುತ್ರ ಶ್ರೀ ಶುಕಾಚಾರ್ಯರು. ವೇದ ವ್ಯಾಸರು ಶ್ರೀಮನ್ನಾರಾಯಣನ ಅವತಾರಭೂತರು. ಶುಕಾಚಾರ್ಯರು ಶ್ರೀಮಹರುದ್ರ ದೇವರ ಅವತಾರರು. (ಇಲ್ಲಿ ತಂದೆ-ಪುತ್ರರ ಸಂಬಂಧ) **ನೆತ್ತಿನೈಜವ ಕಂಡೆ**=ಶಾಲನ್ನು ಬಿಚ್ಚಿದ ನಂತರ ಶ್ರೀ ಪಾಂಡುರಂಗನ ಮಸ್ತಕವನ್ನು ಸಹಜವಾಗಿ ನೋಡಿದೆ.

**ಜರಿಯುಶಾಲು**=ಜರತಾರಿ ಅಂಚಿನ ಶ್ರೇಷ್ಠ ಶಾಲು, **ಮಾಜಾದ** =ಮಸಕಾದ (ಸವೆದ), **ಪರಿಯು**=ವಿಠ್ಠಲನ ಮಸ್ತಕದ ಸ್ಥಿತಿಯನ್ನು, **ದ್ವಯ ಹಸ್ತ ಯೋಜಿಸಿ ಕಟಿಯುಲಿಹ**=ತನ್ನ ಸೊಂಟದ (ಕಟಿ) ಮೇಲೆ ಎರಡು ಕೈಗಳನ್ನು ಇಟ್ಟು ನಿಂತಿರುವ ವಿಠ್ಠಲನ ಭಾವಭಂಗಿ, **ಸೋಜಿಗ-ತನ ರೂಪ**=ಆಶ್ಚರ್ಯಕರವಾದ ರೂಪ (ಇದರ ಸಾಂಕೇತ-ನನ್ನನ್ನು ನಂಬಿ ಸ್ತುತಿಸುತ್ತಿರುವ ಭಕ್ತರ ಪಾಲಿಗೆ ಭವಸಾಗರವು ಕಟಿ ಪರ್ಯಂತ ಆಳವಾಗಿ ರುವುದು.) **ನ್ಯಾಜಾವ**=ಶ್ರೀಹರಿಯು ಸ್ವಯಂ ಪೂರ್ಣನು. ಅವನೇ ಪೂಜ್ಯ ಪೂಜಕನು. ಆದರೆ ಭಕ್ತರನ್ನು ಅನುಗ್ರಹಿಸಲೋಸುಗ, ಅವರಿಂದ ಪೂಜಾದಿಗಳನ್ನು ಸ್ವೀಕರಿಸುವ ಪರಮ ಕರುಣಾಳು.

**ಪರಲೋಕೈಕನಾಥಗೆ**=ಮುಕ್ತಿ ಧಾತುಗಳಾದ ವೈಕುಂಠ, ಶ್ವೇತ ದ್ವೀಪ, ಅನಂತಾಸನಗಳು ಪರಲೋಕಗಳು. ಅವುಗಳಿಗೆ ಏಕಮೇವ ಅದ್ವಿತೀಯನಾದ ಪ್ರಭು, **ಪ್ರೀತಿವಾಕು**=ಭಕ್ತಿಯಿಂದ ಪೂರಿತವಾದ ಮಾತುಗಳು, **ಪ್ರಾಕೃತಕೊಳ್ಳುವ** = ತ್ರಿಗುಣಾತ್ಮಕವಾದ ಪ್ರಾಕೃತ ಸ್ವರೂಪದ ಲಿಂಗದೇಹವನ್ನು ಭಂಗಗೊಳಿಸಿ, ಅನಾದಿ ಪ್ರಾಕೃತ ಕರ್ಮ ದಿಂದ ಜೀವರನ್ನು ವಿಮೋಚನೆಗೊಳಿಸುವ, **ಶ್ರೀಕರಾರ್ಚಿತಪಾದ**= ಶ್ರೀಲಕ್ಷ್ಮೀದೇವಿಯ ಕೋಮಲಕರಗಳಿಂದ ಪೂಜಿತಪಾದವುಳ್ಳವ, **ಭಕ್ತ ತೋಕನ**=ಭಕ್ತವತ್ಸಲನನ್ನು (ತೋರ–ಕೆಂದ), **ಬಿಂದೋದ**=ಬಿಂದು ಮಾತ್ರ ನೀರು, ಒಂದು ದಳ ಶ್ರೀತುಲಸಿಯಿಂದಲೇ ತೃಪ್ತನಾಗುವ ನಿತ್ಯ ತೃಪ್ತನು.

**ನಾಖತ್ತು** = ಧರಿಸಿರುವ ಆಭರಣಗಳ, **ಜ್ಯೋತಿ** = ಪ್ರಕಾಶ,

**ಪರಂಜ್ಯೋತಿ** = ಸ್ವಯಂ ಪ್ರಕಾಶಮೂರ್ತಿಯು. ಅವನ ಪ್ರಕಾಶದಿಂದಲೇ ಆಭರಣಗಳ ಕಾಂತಿಯು ಅಭಿವ್ಯಕ್ತಿ.

**ಮುಕ್ತಿ ಪ್ರಾಕಾರದೊಳು ಇವನ ಜ್ಯೋತಿ** = ಮುಕ್ತಿ ಧಾತುಗಳಾದ ವೈಕುಂಠ-ಶ್ವೇತದ್ವೀಪ - ಅನಂತಾಸನ - ಇವುಗಳಲ್ಲಿ ಬೆಳಗುತ್ತಿರುವ ದಿವ್ಯ ಜ್ಯೋತಿ, **ಏಕಮೇವ** ಸಮಾಭ್ಯಧಿಕ ಶೂನ್ಯನಾದ ಏಕಮೇವಾದ್ವಿತೀಯ ನಾದ ಶ್ರೀಹರಿ, **ಕಾಕಡಾರುತಿ** = ದೀವಟಿಗೆಯ (ಪಂಜಿನ) ಆರತಿ, **ಲೋಕದ ಪೂಜೆಯ** = ಪಂಜುಧಾರಿಗಳು ಮಾಡುವ ಪೂಜಾರೂಪವಾದ ಸೇವೆಯನ್ನು ಕಂಡೆ.

**ಪಂಚಮೋಕ್ಷಪ್ರದ** = ಸಾಯುಜ್ಯ-ಸಾವಯವ-ಸಾರೂಪ್ಯ-ಸಾಮೀಪ್ಯ ಸಾರ್ಷ್ಟಿ-ಎಂಬ ಐದು ವಿಧವಾದ ಮುಕ್ತಿಗಳನ್ನು ನೀಡುವ ಶ್ರೀಹರಿಗೆ, **ಪಂಚವಿಧ ಅಭಿಷೇಕ** ಶ್ರೀ ಪಾಂಡುರಂಗ ಪ್ರತೀಕಕ್ಕೆ ಪಂಚಾಮೃತ ಅಭಿಷೇಕ, **ಶೇಷಮಂಚಿಕೆ** = ಶೇಷ ವಾಹನ ಪೂಜಾ. ಕ್ಷೀರಾಬ್ಧಿ ಶಯನನಿಗೆ ಶೇಷ ಶಯನೋತ್ಸವ, **ಮದ್ವಿದ್ಯ** - ಮಧು ಎಂಬ ದೈತ್ಯನ ಸಂಹಾರಿಗೆ (ಮಧುವೈರಿ) ಮಧು ಅಭಿಷೇಕ. (ಮಧುಸಿಂಚನ), **ಸಂಚಿತ ಕರ್ಮದ ಕೊಂಚವ ಮಾಡುವ** = ತನ್ನನ್ನು ಅನವರತ ಸಂಚಿಂತಿಸುವ ಭಕ್ತರ ಸಂಚಿತ ಕರ್ಮವನ್ನು ಉಪಮರ್ದನ ಮಾಡುವ ಪರಮ ಕರುಣಾಳು.

**ಮಂಗಳ ಮಹಿಮಗೆ** = ಪರಮ ಮಂಗಳ ಮೂರ್ತಿಗೆ ಶುದ್ಧೋದಕ ಸ್ನಾನ, **ಗಂಗಾಪಿತನೆಂಬುದೆ** ಅವನು ಗಂಗಾಜನಕನೆಂಬ ಜ್ಞಾನಾನು ಸಂಧಾನದಿಂದ ಸ್ನಾನ, **ಅಂಗಜಯ್ಯನಿಗೆ** = ಮನ್ಮಥಪಿತನಿಗೆ ಸ್ನಾನವೆಂದರೆ ಆಶ್ಚರ್ಯವಲ್ಲವೇ! **ಸತ್ಸಂಗವು** = ಸಜ್ಜನರಾದ ಭಕ್ತವೃಂದದವರ, **ಸ್ವಾಂಗಾಯನಾವು** ಪರಿಪೂರ್ಣ ಗುಣಾತ್ಮಕನಾದ ಶ್ರೀ ಪಾಂಡುರಂಗನ ದಿವ್ಯಗಾನ, **ಶುಭಾಂಗನು** = ಮಂಗಳಮೂರ್ತಿ.

**ಶಾಸ್ತ್ರೋಕ್ತ ಉಡಿಗೆಯ** = ಸ್ನಾನಾನಂತರ ಶರೀರವನ್ನು ವಸ್ತ್ರದಿಂದ ಒರೆಸಿ ವಿದ್ಯುಕ್ತವಾಗಿ ಅಮೂಲ್ಯ ಉಡಿಗೆಯನ್ನು ಉಡಿಸಿ (ವಸ್ತ್ರದಾನ

ಸೇವಾ), **ರತ್ನಾಭರಣವ** = ಸಕಲ ರತ್ನ ಶಿಖರವಾದ ವಿಧವಿಧದ ಆಭರಣ ಗಳಿಂದ ಅಲಂಕರಿಸಿ (ಅಲಂಕಾರಸೇವಾ), **ಚೆಲ್ವ ಕಸ್ತೂರಿ** = ಸುಂದರವಾದ ಕಸ್ತೂರೀ ತಿಲಕವನ್ನು ಪಾಂಡುರಂಗನ ಹಣೆಗೆ ಇಟ್ಟು, **ವಿಸ್ತೃತೀ ಪರಿ ಯಲಿ** = ಸಾಂಗೋಪಾಂಗವಾಗಿ, **ಸತ್ಯ ಷೋಡಶ ಪೂಜೆ** = ೧೬ ವಿಧ ವಾದ ಪೂಜಾ ವಿಧಾನಗಳಿಂದ, **ಚತುತ್ತರ ನೊಗನಿಂದ** = ಚತುರ್ಮುಖ ಬ್ರಹ್ಮದೇವರೇ ಅವನನ್ನು ಅಲಂಕರಿಸುತ್ತಾರೆ. ಎಂಬ ಉತ್ತಮ ಜ್ಞಾನಾ ನುಸಂಧಾನದಿಂದ ಷೋಡಶ ಪೂಜಾ ಸಮರ್ಪಣೆ (ಕೃತ್ಯಾನುಸಂಧಾನ).

**ಬಹುನಾದ ವಿಠ್ಠಲ** = ಪಂಢರಾಪುರದ ಪಾಂಡುರಂಗನು ಶಬ್ದ ಬ್ರಹ್ಮನು. (ಉಡುಪಿಯ ಶ್ರೀಕೃಷ್ಣ—ಅನ್ನಬ್ರಹ್ಮನು. ತಿರುಪತಿಯ ತಿಮ್ಮಪ್ಪ ಕಾಂಚನ ಬ್ರಹ್ಮ), **ನೋದ ಪೂರೈಸಿತು** = ಉಚ್ಚ ಕಂಠದಲ್ಲಿ ಉಚ್ಚರಿಸು ತ್ತಿರುವ ವೇದ ಘೋಷ-ಸ್ತೋತ್ರ—ಮಂತ್ರಗಳಿಂದ ಇಡೀ ಪರಿಸರ ತುಂಬಿ, ಆನಂದಮಯವಾಗಿದೆ. ವಿಠ್ಠಲ-ವಿಠ್ಠಲ-ಎಂಬ ವೃಂದ ಭಜನಾ ಲಹರಿಯ ನಾದ ಘೋಷ, **ಪಾದಾಲಿಂಗಾಂತ್ಯವ** = ಆಪಾದ ಮಸ್ತಕ ಪೂರ್ಣವಾದ ಆಕೃತಿ ವಿಶೇಷ.

**ಸ್ವಂತ ಹಸ್ತದಿ ಪೂಜಾದಿ ಯೋಗ** = ದಾಸವರ್ಯರು ಸ್ವ ಹಸ್ತ ದಿಂದ ಶ್ರೀ ಪಾಂಡುರಂಗನನ್ನು ಪೂಜಿಸುವ ಅವಕಾಶ ಸಿಕ್ಕ ಪ್ರಸಂಗ ವಿಶೇಷ. **ಕೃತ್ಯ ಸಂಧಿಸಿದನು ಈಗ** = ಪೂಜಾಕೈಂಕರ್ಯದ ಅವಕಾಶವನ್ನು ಹೊಂದಿಸಿ ಕೊಟ್ಟನು, **ಚಿತ್ತಜಪಿತ** = ಮನ್ಮಥನ ತಂದೆ, **ತುತ್ತಿಸಲೆನಗೆ ಅಳವೇ** = ಸ್ತೋತ್ರ ಮಾಡಲು ಎನ್ನಿಂದ ಸಾಧ್ಯವೇ ?

**ಪಿತೃ ಸೇವಕ** = ಮಾತಾಪಿತೃಗಳ ಸೇವೆಯಲ್ಲಿಯೇ ಸದಾ ನಿರತ ನಾಗಿದ್ದ ಪುಂಡರೀಕಮುನಿ, **ತನ್ನ ಕೃತ್ಯದೊಳಿರೆ** = ಮಾತಾಪಿತೃಗಳ ಸೇವೆ ಯನ್ನು ಮಾಡುತ್ತಿರುವ ಸಮಯದಲ್ಲಿ, **ನಿರ್ವಲ್ಯೈಕ** - ಏಕಾಗ್ರ ಚಿತ್ತದಿಂದ ನಿಷ್ಕಾಮನ ಮನಸ್ಸಿನಿಂದ, **ವ್ಯಕ್ತ** - ಆಗ ಶ್ರೀ ಹರಿಯು ಕೃಷ್ಣ ರೂಪ ದಿಂದ ಅವನ ಹಿಂದೆ ಬಂದು ನಿಂತನು, **ಮನಸ್ಥೈರ್ಯ ಅವಲೋಕ** = ನಿಜಭಕ್ತನಾದ ಪುಂಡರೀಕನ ಮನೋಸ್ಥೈರ್ಯವನ್ನು ಪರೀಕ್ಷಿಸಲೋಸುಗ,

**ಇತ್ತ ಇಟ್ಟಿಗೆ ಪೀಠ**=ಆವನು ಹಿಂದಕ್ಕೆ ಎಸೆದ ಇಟ್ಟಿಗೆಯನ್ನೇ ತನ್ನ ಪಾದ ಪೀಠವನ್ನಾಗಿ ಮಾಡಿಕೊಂಡು, **ಮೆಚ್ಚಿ ನಿಂತಿಹ**=ಪುಂಡರೀಕನ ಕೋರಿಕೆ ಯಂತೆ ಆ ಪಾದ ಪೀಠದ ಮೇಲೆ ಛತ್ರ ಭಂಗಿಯಲ್ಲಿ ನಿಂತ ಶ್ರೀ ಪಾಂಡು ರಂಗನನ್ನು, **ಕೃತ್ತಿವಾಸಾದ್ಯರಿಂದ ಸ್ತುತ್ಯ**=ರುದ್ರಾದಿ ದೇವತೆಗಳಿಂದ ಸ್ತುತ್ಯಮಾನನಾದ, **ಶ್ರೀವಿಠ್ಠಲನ**=ರಕುಮಾಸಹಿತ ಪಾಂಡುರಂಗ ವಿಠ್ಠಲ ನನ್ನು ನೋಡಿದೆ.

**ದಾಸೀಗೆ ಕಂಕಣವಿತ್ತ**=ಮುಯ್ಯಿಗೆ ಮುಯ್ಯಿ ತೀರಿಸಬೇಕೆಂದು ವಿಠ್ಠಲನು ಪುರಂದರದಾಸರ ವೇಷದಲ್ಲಿ ದಾಸೀ ಮನೆಗೆ ಹೋಗಿ, ಕಂಕಣ ವನ್ನಿತ್ತ ಪ್ರಸಂಗ, **ದಾಸರ ಶಿಕ್ಷೆ ಕರ್ತ**=ಆ ವಿಷಯ ತಿಳಿದು, ಮಠದ ಮಹಂತರು ಪುರಂದರ ದಾಸರನ್ನು ಕಂಬಕ್ಕೆ ಕಟ್ಟಿಸಿ, ಥಳಿಸಿದ್ದು, **ನಿರ್ದೋಷ ವಾರ್ತೆ**=ನಂತರ ದಾಸರು ನಿರ್ದೋಷಿಗಳೆಂದು, **ದಾಸನೋರ್ವಾವೇಶ** =ಒಬ್ಬ ಸೇವಕನ ಮೇಲೆ ಆವೇಶ ಬಂದು ಹೇಳಲಾಗಿ, ದಾಸರನ್ನು ಬಿಡು ಗಡೆ ಮಾಡಿದರು, **ವಾಸುಕಿಶಯನ ಒಲಿದ**=ಶೇಷಶಾಯಿಯಾದ ಶ್ರೀ ಹರಿಯು ಅನುಗ್ರಹಿಸಲಾಗಿ.

**ಮುಯ್ಯಕೆ ಮುಯ್ಯ ತೀರಿತು**=ಅಪ್ಪಣ್ಣ ಭಾಗವತನ ವೇಷದಲ್ಲಿ ಬಂದು, ದಾಸರಿಗೆ ನೀರನ್ನೇ ತಂದು ಕೊಟ್ಟ ಸಂದರ್ಭದಲ್ಲಿ, ದಾಸರು ಕೋಪದಿಂದ, ತಂಬಿಗೆಯಿಂದ ಅವನ ಮಸ್ತಕಕ್ಕೆ ಏಟು ಹಾಕಿದರು. ಅದನ್ನು ತೀರಿಸಿಕೊಳ್ಳಲು ಪಾಂಡುರಂಗನು ದಾಸಿಗೆ ಕಂಕಣವಿತ್ತು, ದಾಸರಿಗೆ ಹೊಡೆ ಯಿಸಿದ ಪ್ರಸಂಗ ವಿಶೇಷ, **ಜಗದಯ್ಯ**=ಜಗತ್ತಿಗೆ ಪ್ರಭು, **ತ್ರಯ್ಯ ಲೋಕದಿ**=ಸ್ವರ್ಗ-ಭೂ-ಪಾತಾಳಗಳೆಂಬ ಲೋಕತ್ರಯಗಳಲ್ಲಿ.

**ಅಂಡ ಬ್ರಹ್ಮಾಂಡಗಳಿಗೆ ಒಡೆಯ**=ಪಿಂಡಾಂಡರೂಪವಾದ ದೇಹ ಮತ್ತು ಬ್ರಹ್ಮಾಂಡಗಳಿಗೆ ಪ್ರಭು, **ಭಿಡೆಯ**=ದಾಕ್ಷಿಣ್ಯ ಅಂದರೆ ಪುಂಡ ರೀಕನ ಭಕ್ತಿಗೆ ಮೆಚ್ಚಿ ಅವನ ದಾಕ್ಷಿಣ್ಯಕ್ಕೆ ವಶನಾಗಿ ಇಟ್ಟಿಗೆಯ ಮೇಲೆ ನಿಂತ ಜಗದೊಡೆಯ. **ಚಂಡಕಿರಣಾನಂತ ಪ್ರಭೆಯ**=ಅನಂತಕೋಟಿ ಸೂರ್ಯರ ಕಾಂತಿಯನ್ನು (ಚಂಡಕಿರಣ-ತೀಕ್ಷ್ಣವಾದ ಕಿರಣಗಳುಳ್ಳ ಸೂರ್ಯ), **ಹರಿ**

**ನುಂಡಿತು ಇಂದು ಭಾಗ ತಡಿಯು** ಚಂದ್ರಭಾಗಾ ನದಿಯು ತೀರದಲ್ಲಿ ಆವಾಸವಾಗಿರುವ (ಇಂದು ಭಾಗ–ಚಂದ್ರ ಭಾಗಾನದಿ ತಡಿ-ತೀರ, ದಡ), **ಹಿಂಡು ದೈವರ ಗಂಡ**=ಸಕಲ ದೇವತಾವರ್ಗದ ಮಹಾಪ್ರಭು, **ಪುಂಡರೀ ಕಾಕ್ಷನಿ** ಕಮಲ ಪುಷ್ಪದ ದಳದಂತೆ ವಿಸ್ತಾರವಾದ ಕಣ್ಣುಳ್ಳ, **ಪಿಂಡಾಂಡ ದೊಳಗಿನ**=ಪಿಂಡಾಂಡರೂಪದ ಈ ಸ್ಥೂಲ ಶರೀರದಲ್ಲಿ, **ಗಂಡನೆಂದೆನಿಸಿಹ**=ಪ್ರಭು (ಬಿಂಬಮೂರ್ತಿ)ನೆಂದು ಕರೆಯಿಸಿವ, **ಪುರಂದರ ವಿಜಯ ಭಾಗಣ್ಣ**=ಶ್ರೀ ಪುರಂದರದಾಸರು, ಶ್ರೀ ವಿಜಯದಾಸರು ಮತ್ತು ಭಾಗಣ್ಣ ನಾಮಕರಾದ ಶ್ರೀ ಗೋಪಾಲದಾಸರು, **ವರ ಜಗನ್ನಾಥ ವರ್ಯನ್ನ**=ಶ್ರೇಷ್ಠರಾದ ಶ್ರೀ ಜಗನ್ನಾಥದಾಸರುಗಳನ್ನು, **ಪರಿತವಿಸುತ್ತ** =ತೃಪ್ತಿಯಾಗುವಷ್ಟು (ತಿರುಪತಿಯಲ್ಲಿ ಶ್ರೀನಿವಾಸನು ಶ್ರೀ ಜಗನ್ನಾಥ ರಾಯರಿಗೆ ಮೃಷ್ಟಾನ್ನವನ್ನು ಉಣಿಸಿದ ಪ್ರಸಂಗ ವಿಶೇಷ), **ಪುರಂದರ ದಾಸರ ದಿನ** ಪುರಂದರದಾಸರ ಆರಾಧನೆಯನ್ನು ಶ್ರೀ ಗುರು ಗೋವಿಂದ ದಾಸವರ್ಯರು ಪಂಢರಾಪುರದಲ್ಲಿತಮ್ಮ ಶಿಷ್ಯ ಪರಿವಾರದೊಡನೆ ವಿಜೃಂಭಣೆ ಯಿಂದ ನಡೆಸಿದರು. ಆಗ ಪಾಂಡುರಂಗನ ದಿವ್ಯ ಸಂದರ್ಶನ ಭಾಗ್ಯವನ್ನು ಹೊಂದಿದರು, **ಅರಿವಾಯಿತು ಎನ್ನಯ ಕುಲ**=ನನ್ನ ದಾಸರವಂಶದ ಅರಿವು ನನಗುಂಟಾಯಿತು. (ದಾಸರು ಶ್ರೀ ವಿಜಯ ದಾಸವರ್ಯರ ಶಿಷ್ಯ ರಾದ ಶ್ರೀ ಪಂಗನಾಮದ ತಿಮ್ಮಣ್ಣದಾಸರ ಶಿಷ್ಯ ಪರಂಪರೆಯಲ್ಲಿ ಬಂದ ಶ್ರೀ ತಂದೆ ಮುದ್ದು ಮೋಹನ ವಿಠಲದಾಸರ ಕೊನೆಯ ಶಿಷ್ಯರು).

**ಇಂದು ಭಾಗದಿ ವಾಸ**=ಚಂದ್ರ ಭಾಗಾ ನದಿಯು ತೀರದಲ್ಲಿ ಸ್ಥಿತ ನಾಗಿರುವ ಶ್ರೀ ಪಾಂಡುರಂಗ, **ಸಿರಿ ಇಂದಿರ ಲೋಲನೆ**=ಕಾಂತಿ ಸಂಪನ್ನ ಳಾದ ಶ್ರೀ ಲಕ್ಷ್ಮೀದೇವಿಯರಲ್ಲಿ ಕ್ರೀಡೆಯಾಡುವವನೆ, **ಹೃನ್ಮಂದಿರದೊಳು** =ಹೃತ್ಕಮಲದಲ್ಲಿ ನಿನ್ನ ಬಿಂಬಮೂರ್ತಿ ದರ್ಶನ ಭಾಗ್ಯವನ್ನು ನೀಡಿ, **ಬಂಧನ ಬಿಡಿಸುವ**=ಅನಾದಿ ಕರ್ಮ ಬಂಧನವನ್ನು ನಿವಾರಿಸುವ.



**ಶ್ಲೋಕ :–**

ಮಹಾಯೋಗ ಪೀಠ ತಟೇ ಭೀಮರ ಥ್ಯಾಂ ।
ವರಂ ಪುಂಡರೀಕಾಯ ದಾತುಂ ಮುನೀಂದ್ರೈಃ ॥

ಸಮಾಗತ್ಯತಿಷ್ಠಂತ ಮಾನಂದ ಕದಂ ।
ಪರಬ್ರಹ್ಮಲಿಂಗಂ ಭಜೇ ಪಾಂಡುರಂಗಮ್ ॥

**॥ ಶ್ರೀ ಪಾಂಡುರಂಗಾರ್ಪಣಮಸ್ತು ॥**



|| ಶ್ರೀಃ ಹರಿಃ ಓಂ ||

# ಭಜನಕೌಸ್ತುಭ

## ಚತುರ್ಥ ಸಂಪುಟ

## ವಿಭಾಗ-೨



## ಶ್ರೀ ಲಕ್ಷ್ಮೀನರಸಿಂಹದೇವರ ಪರವಾದ

## ಕೀರ್ತನೆಗಳ ಸಂಗ್ರಹ

**ಧ್ಯಾನ ಶ್ಲೋಕಗಳು :-**

೧. ಶ್ರೀ ಮತ್ಪಯೋನಿಧಿ ನಿಕೇತನ ಚಕ್ರಪಾಣೇ ।
ಭೋಗೀಂದ್ರ ಭೋಗ ಮಣಿರಾಜಿತ ಪುಣ್ಯ ಮೂರ್ತೇ ॥
ಯೋಗೀಶ ಶಾಶ್ವತ ಶರಣ್ಯ ಭವಾಬ್ಧಿ ಪೋತ ।
**ಲಕ್ಷ್ಮೀನರಸಿಂಹ** ಮಮದೇಹಿ ಕರಾವಲಂಬಮ್ ॥೧॥

2. ಪಾಂತ್ವಸ್ಮಾನ್ ಪುರುಹೂತವೈರಿ ಬಲವನ್ಮಾತಂಗ ಮಾದ್ಯದ್ಘಟಾ-
ಕುಂಭೋಚ್ಚಾದ್ರಿ ವಿಪಾಟನಾಧಿಕಪಟು ಪ್ರತ್ಯೇಕ ವಜ್ರಾಯಿತಾಃ ।
ಶ್ರೀ ಮತ್ಕಂಠೀರವಾಸ್ಯ ಪ್ರತತಸುನಖರಾ ದಾರಿತಾರಾತಿ ದೂರ-
ಪ್ರಧ್ವಸ್ತ ಧ್ವಾಂತಶಾಂತ ಪ್ರವಿತತ ಮನಸಾ ಭಾವಿತಾ ಭೂರಿಭಾಗ್ಯಃ॥
(ನಾಕಿ ವೃಂದೈಃ ॥೨॥

೩. ಲಕ್ಷ್ಮೀಕಾಂತ ಸಮಂತತೋಽಪಿ (ವಿ) ಕಲಯನ್ ನೈವೇಶಿತುಸ್ತೇ
ಸಮಂ ।
ಪಶ್ಯಾಮ್ಯುತ್ತಮವಸ್ತು ದೂರತರತೋಽಪಾಸ್ತಂ ರಸೋಯೋಽ
ಷ್ಟಮಃ ॥
ಯದ್ರೋಷೋತ್ಕರ ದಕ್ಷ ನೇತ್ರ ಕುಟಿಲ ಪ್ರಾಂತೋತ್ಥಿತಾಗ್ನಿ
ಸ್ಫುರತ್-
ಖದ್ಯೋತೋಪಮ ವಿಪ್ರು ಲಿಂಗಭಾಸಿತಾ ಬ್ರಹ್ಮೇಶ ಶಕ್ರೋತ್ಕರಾಃ
॥೩॥

(ನಖಸ್ತುತಿ-ಶ್ರೀಮದಾನಂದ ತೀರ್ಥ ಭಗವತ್ಪಾದ ಕೃತಿ).



## ೨೧

## (ಶ್ರೀ ರಂಗವಿಠ್ಠಲಾಂಕಿತ)

**ರಾಗ–ಮಧ್ಯಮಾವತಿ** **ಆದಿತಾಳ**

ದುರಿತಗಜ ಪಂಚಾನನ-ನರಹರಿಯೆ ದೇವರ ದೇವ
ಕಾಯೋ ಗೋವಿಂದ ॥ ॥ಪ॥

ಹೆಸರುಳ್ಳ ನದಿಗಳ-ಒಳಗೊಂಡ ಸಮುದ್ರನು
ಬಿಸಡುವನೇ ಕಾಲ ಹೊಳೆಗಳ-ಗೋವಿಂದ ॥ ॥೧॥

ಹೆತ್ತ ಮಕ್ಕಳು ಹುಚ್ಚರಾದರೆ ತಾಯ್ತಂದೆ
ಎತ್ತದೆ ನೆಲಕೆ ಬಿಸುಡುವರೇ-ಗೋವಿಂದ ॥ ॥೨॥

ಒಂದು ಕುರಿಗೆ ಆರು ಹುಲಿ ಬಂದು ಕಾದಿದೆ (ಕವಿದಿದೆ)
ಬಂಧನ ಬಿಡಿಸಯ್ಯ ತಂದೆ ಗೋವಿಂದ ॥ ॥೩॥

ಮುನ್ನ ಮಾಡಿದ ಕರ್ಮ ಬೆನ್ನ ಬಿಡದಿದ್ದರೆ
ನಿನ್ನನೋಲೈಸಲೇಕೋ-ಗೋವಿಂದ ॥ ॥೪॥

ಆಪತ್ತು ತಾಪತ್ರಯ ಬಿಡದಿದ್ದರೆ ॥
ಶ್ರೀ ಪತಿ ಶರಣೆನ್ನಲೇಕೆ-ಗೋವಿಂದ ॥ ॥೫॥

ಅರಸು ಮುಟ್ಟಲು ದಾಸಿ ರಂಭೆಯಾದಳು (ಯಾ ಗೋಳು)
ಪರಶುಮುಟ್ಟಲು ಲೋಹ ಸ್ವಣ-ಗೋವಿಂದ ॥ ॥೬॥

ಮಾನಾಭಿಮಾನ ದೊಡೆಯ **ರಂಗವಿಠ್ಠಲ**
ಜ್ಞಾನಿಗಳರಸನೇ ಕಾಯೋ–ಗೋವಿಂದ ॥ ॥೭॥



**ಅರ್ಥವಿವರಣೆ :**

ಶ್ರೀ ರಂಗವಿಠ್ಠಲಾಂಕಿತರಾದ **ಶ್ರೀಪಾದರಾಜ ಗುರುಸಾರ್ವಭೌಮರು** ಪ್ರಸಕ್ತ ಕೀರ್ತನೆಯಲ್ಲಿ ಶ್ರೀ ಲಕ್ಷ್ಮೀನರಸಿಂಹ ದೇವರಲ್ಲಿ ತಮ್ಮ ಹೃದಯದ ಅಳಲನ್ನು ತೋಡಿಕೊಂಡು, ಅವನ ಕಾರುಣ್ಯ ವಿಶೇಷವನ್ನು ಪ್ರಾರ್ಥಿಸಿರುತ್ತಾರೆ. ಶ್ರೀಪಾದರಾಜರ ವಿಶಿಷ್ಟ ಕೃತಿ ಇದು.

**ದುರಿತಗಜ ಪಂಚಾನನ** = ಪಾಪಗಳೆಂಬ ಆನೆಗಳಿಗೆ ಸಿಂಹ ಸದೃಶನು ಈ ಉಪಮಾನದಲ್ಲಿ ಪಾಪಗಳು ಗಜಸದೃಶ. ನರಸಿಂಹನು ಪಂಚಾನನ ಸದೃಶ. ಪಾಪಕರ್ಮಗಳಿಂದ ಮದೋನ್ಮತ್ತನಾದ ಜೀವರು ಮದಿಸಿದ ಆನೆಗಳಂತಿದ್ದಾರೆ. ಪಂಚಾನನ-ಎಂದರೆ ಅಗಲವಾದ ಮುಖವುಳ್ಳ ಮೃಗರಾಜ ಸಿಂಹ. ಸಿಂಹವನ್ನು ನೋಡಿದ ಕೂಡಲೇ ಗಜಗಳ ಹಿಂಡು ಭಯದಿಂದ ತತ್ತರಿಸಿ ಓಡುವುವು ಅಂತೆಯೇ ಶ್ರೀ ನರಸಿಂಹನ ಧ್ಯಾನ ಮಾತ್ರದಿಂದ ಸಕಲ ದುರಿತ ಪರಿಹಾರ, **ನರಹರಿಯೆ** = ನರಸಿಂಹನೇ (ನರ-ಮಾನವ ಹರಿ-ಸಿಂಹ), **ದೇವರ ದೇವ** = ಸಮಸ್ತ ದೇವತಾವರ್ಗಕ್ಕೆ ಮಹಾಪ್ರಭು. ಸರ್ವೋತ್ತಮನಾದ ಶ್ರೀ ನರಸಿಂಹ (ನರಸಿಂಹ ಶಬ್ದವೇ ಸರ್ವೋತ್ತಮ ಮತ್ವಕ್ಕೆ ಪ್ರಾತಿನಿಧ್ಯವು. ನರ-ದೋಷಮುಕ್ತರಾದ ಮುಕ್ತಜೀವರು ಸಿಂಹ-ಶ್ರೇಷ್ಠ).

**ಹೆಸರುಳ್ಳ ನದಿಗಳ** = ಭೂಮಂಡಲದಲ್ಲಿ ಸುಪ್ರಸಿದ್ಧವಾದ ಗಂಗಾದಿ ನದಿಗಳು, **ಒಳಗೊಂಡ (ಒಳಕೊಂಡ)** = ನದಿಗಳೆಲ್ಲವೂ ಕೊನೆಯಲ್ಲಿ ಸಮುದ್ರವನ್ನೇ ಸೇರುವುವು. ಸಮುದ್ರವು ಸಕಲ ನದಿಗಳನ್ನು ತನ್ನಲ್ಲಿ ಸೇರಿಸಿಕೊಳ್ಳುವುದು, **ಕಾಲಹೊಳೆಗಳ** = ಅಂತಹ ಸಮುದ್ರ ರಾಜನು ಸಣ್ಣ ಸಣ್ಣ ತೊರೆಗಳನ್ನು ಸೇರಿಸಿಕೊಳ್ಳುವುದಿಲ್ಲವೇ ? ಈ ಉಪಮಾನದಲ್ಲಿ ಶ್ರೀ ಪರಮಾತ್ಮನು ಸಕುಚರಾಚರಾತ್ಮಕವಾದ ಜಗತ್ತನ್ನು ತನ್ನ ಉದರದಲ್ಲಿ ಇಂಬಿಟ್ಟುಕೊಳ್ಳುವ ಸಮುದ್ರ ರಾಜನ ಸದೃಶ. ಹೆಸರುಳ್ಳ ನದಿಗಳ, ದೊಡ್ಡ ಅಧಿಕಾರಿ ಜೀವರುಗಳು ಕಾಲುಹೊಳೆ ಪಾಮರರಾದ ಜೀವವರ್ಗ.

**ತಾಯ್ತಂದೆ** = ತಮ್ಮ ಮಕ್ಕಳು ಹುಚ್ಚರಾದರೆ, ತಂದೆ ತಾಯಿಗಳು ಆ ಮಕ್ಕಳನ್ನು ಹುಚ್ಚರೆಂದು ದೂರವಿಡುತ್ತಾರೆಯೇ ? ವಾತ್ಸಲ್ಯದಿಂದ ಸಲ

ಹುತ್ತಾರೆ. ಅಂತೆಯೇ ಪ್ರಾಪಂಚಿಕ ಭೋಗಗಳೆಂಬ ಭ್ರಮೆಯಿಂದ ಜೀವರು ಹುಚ್ಚರಾಗಿದ್ದಾರೆ. ಸರ್ವಜೀವರ ಪಾಲಿಗೆ ಶ್ರೀ ಹರಿಯೇ ಜನನೀ ಜನಕನು. ಭಕ್ತವತ್ಸಲನಾದ ಶ್ರೀ ಪರಮಾತ್ಮನು ನಮ್ಮನ್ನು ಕೈಬಿಡುತ್ತಾನೆಯೇ ?

**ಒಂದು ಕುರಿಗೆ**=ಜೀವನಿಗೆ ಜೀವನು ಕುರಿಯ ಸದೃಶ. ಕುರಿ ತಲೆ ತಗ್ಗಿಸಿಕೊಂಡು ಅನ್ಯಾಲೋಚನೆ ಇಲ್ಲದೆ ನಡೆಯುವ ಪ್ರಾಣಿ. ಅಂತೆಯೇ ಸಂಸಾರವೆಂಬ ಈ ಘೋರ ಪಥದಲ್ಲಿ ಕುರಿಯಂತೆ ಜೀವರಿದ್ದಾರೆ, **ಆರು ಹುಲಿ**=ಅಂತಹ ಕುರಿ ಜೀವನಿಗೆ ಅರಿಷಡ್ವರ್ಗಗಳೆಂಬ ಪ್ರಬಲವಾದ ಹುಲಿಗಳು ಕಬಳಿಸಲು ಹೊಂಚುಹಾಕಿಕೊಂಡು ಕಾದಿವೆ. ಕಾಮ-ಕ್ರೋಧ-ಲೋಭ-ಮೋಹ-ಮದ-ಮಾತ್ಸರ್ಯಗಳೆಂಬ ಆರು ಮಂದಿ ಹುಲಿಗಳು, **ಬಂಧನ ಬಿಡಿಸಯ್ಯ**=ಅರಿಷಡ್ವರ್ಗಗಳನ್ನು ಪರಿಹಾರಮಾಡಿ, ಘೋರ ಸಂಸಾರವೆಂಬ ಕರ್ಮ ಬಂಧನದಿಂದ ಬಿಡಿಸೆಂದು ಪ್ರಾರ್ಥನೆ,

**ಮುನ್ನಾ ಮಾಡಿದ ಕರ್ಮ**=ಅನಾದಿಕರ್ಮ ಅಸ್ಪೃಶ್ಯ ರಾಶಿಯಲ್ಲಿ ಜೀವರು ಪ್ರಾಜ್ಞನಾಮಕ ಶ್ರೀ ಹರಿಯ ಆಲಿಂಗನದಲ್ಲಿ ನಿದ್ರಾವಸ್ಥೆಯಲ್ಲಿರುತ್ತಾರೆ. ಜೀವರ ಅನಾದಿಯೂ ನಿತ್ಯವೂ ಆದ ಸ್ವರೂಪದೇಹಕ್ಕೆ ಆವರಣ ರೂಪದಲ್ಲಿ ಲಿಂಗದೇಹವಿದೆ. ಅನಾದಿಕರ್ಮ ಬೀಜಗಳ ನೆಲೆಯೇ ಲಿಂಗ ಶರೀರವು. ಜೀವರೇ ಅನುಭವಿಸಿ, ಕ್ಷಮಿಸಬೇಕಾದ ಕರ್ಮ ಬಂಧನ ಅನಿವಾರ್ಯ. ಲಿಂಗೋಪರಾಗ ಕ್ರಿಯೆಯಿಂದ ಶ್ರೀಶನು ಜೀವರನ್ನು ಸಂಸಾರಕ್ಕೆ (ಸೃಷ್ಟಿಗೆ) ತರುತ್ತಾನೆ. ಅವನೇ ಕರ್ಮ ಬಂಧಕನು ಅವನೇ ಕರ್ಮ ಮೋಚಕನು, **ನಿನ್ನ ಓಲೈಸಲೇಕೋ ಗೋವಿಂದ**=ಕರ್ಮ ಬಂಧನಕ್ಕೆ ಕಾರಣನಾದ ನೀನೇ ಕರ್ಮವನ್ನು ಬಿಡಿಸದಿದ್ದರೆ, ನಿನ್ನನ್ನು ಆರಾಧಿಸುವುದರಿಂದ ಪ್ರಯೋಜನವಾದರೂ ಏನು ?-ಎಂದು ಸವಾಲು ಹಾಕುತ್ತಾರೆ ಶ್ರೀ ಪಾದರಾಯರು?

**ಆಪತ್ತು**=ಕರ್ಮಜನ್ಯವಾದ ಬಂಧನ ರೂಪವಾದ ದೋಷಗಳು (ಪಾಪಗಳ ರಾಶಿ), **ತಾಪತ್ರಯಗಳು**=ಆಧಿ ಭೌತಿಕ, ಆಧ್ಯಾತ್ಮಿಕ-ಆದಿ

ದೈವಿಕ-ಎಂಬ ಮೂರು ವಿಧವಾದ ದುಃಖಗಳು ಜೀವರನ್ನು ಸದಾ ಕಾಡುತ್ತಿರುವುವು, **ಶ್ರೀಪತಿ ಶರಣೆನ್ನಲ್ಯಾಕೋ** ಜೀವರ ಪಾಪಗಳನ್ನು, ತಾಪತ್ರಯಗಳನ್ನು ಪರಿಹರಿಸದಿದ್ದರೆ, ಹೇ ಲಕ್ಷ್ಮೀಪತಿ, ನೀನು ಶರಣಾಗತ ವತ್ಸಲನೆಂದು ನಿನ್ನ ಮೊರೆ ಹೋಗಲೇನು ಪ್ರಯೋಜನ ?

**ಅರಸು ಮುಟ್ಟಲು** = ರಾಜನಾದವನು ದಾಸಿಯೋರ್ವಳನ್ನು (ಪಾಪಿಷ್ಠ) ಸ್ಪರ್ಶಮಾಡಲು. ಆಗ ಅವಳು ಶುದ್ಧಳಾಗುವಳು (ರಂಭೆ), **ಪರಶು** = ಒಂದು ಶಿಲಾವಿಶೇಷ ಅದರಿಂದ ಸಾಮಾನ್ಯ ಲೋಹವನ್ನು ಸ್ಪರ್ಶಿಸಲು, ಅದು ಸ್ವರ್ಣವಾಗುವುದು ಅಂತೆಯೇ ನಿನ್ನ ಕೃಪಾಕಟಾಕ್ಷ ವೀಕ್ಷಣ ಮಾತ್ರದಿಂದ ಸಕಲಪಾಪಗಳು ದೂರವಾಗಿ ಜೀವರು ಶುದ್ಧರಾಗುವರು.

**ಮಾನಾಭಿಮಾನದೊಡೆಯು** = ಜೀವರಿಗೆ ಅವರ ಕರ್ಮಾನುಸಾರವಾಗಿ ಒದಗುವ ಮಾನ (ಗೌರವ) ಮತ್ತು ಅಭಿಮಾನ (ಜೀವರಿಗೆ ದೇಹದ ಅಭಿಮಾನವನ್ನು ಶ್ರೀ ಹರಿಯೇ ಕೊಟ್ಟಿದ್ದಾನೆ) ಜೀವರ ಮಾನಕ್ಕೂ ಅಭಿಮಾನಕ್ಕೂ, ಅಪಮಾನಕ್ಕೂ ಶ್ರೀ ಶನೇ ಮುಖ್ಯ ಕಾರಣನು.

**ಜ್ಞಾನಿಗಳರಸ** = ಜ್ಞಾನಿಗಳಿಗೆ ನಿಯಾಮಕನಾದ ಶ್ರೀ ಹರಿ (ಶ್ರೀ ಹರಿಯು ಜ್ಞಾನಗಮ್ಯನು. ಸುಜ್ಞಾನಕ್ಕೆ ಮುಖ್ಯ ವಿಷಯನು), **ಗೋವಿಂದ** = **ವೇದ**ಪ್ರತಿಪಾದ್ಯನಾದ ಶ್ರೀಪರಮಾತ್ಮ, (ಗೋ ಬ್ರಾಹ್ಮಣ ಪ್ರಿಯನಾದ ಬ್ರಹ್ಮಣ್ಯದೇವ).



## ೨೨

## (ಪುರಂದರವಿಠ್ಠಲಾಂಕಿತ)

**ರಾಗ–ಬಿಲಹರಿ** **ಅಟತಾಳ**

ನರಸಿಂಹ ಮಂತ್ರವೊಂದೆ ಮಹಾ
ದುರಿತಕೋಟಿಗಳ ಸಂಹರಿಸಿ ಭಾಗ್ಯವನೀಪ ॥ ॥ಪ॥

ಹಸುಳೆ ಪ್ರಹ್ಲಾದನ ತಲೆಗಾಯ್ದ ದೀ ಮಂತ್ರ
ಅಸುರನೊಡಲ ಬಗೆದ ದಿವ್ಯ–ಮಂತ್ರ
ವಸುಧೆಯೊಳು ದಾನವರ ಅಸುವ ಸೆಳೆವ ಮಂತ್ರ
ಪಶುಪತಿಗೆ ಪ್ರಿಯವಾದ ಮೂಲಮಂತ್ರ ॥ ॥೧॥

ದಿಟ್ಟ ಧ್ರುವರಾಯಗೆ ಪಟ್ಟಗಟ್ಟಿದ ಮಂತ್ರ
ಸೃಷ್ಟಿಯೊಳು ವಿಭೀಷಣನ ಪೊರೆದ ಮಂತ್ರ
ತುಟ್ಟ ತುದಿಯೊಳು ಅಜಾಮಿಳನ ಸಲಹಿದ ಮಂತ್ರ
ಮುಟ್ಟಿ ಭಜಿಪರಿಗಿದು ದೃಷ್ಟ ಮಂತ್ರ ॥ ॥೨॥

ಹಿಂಡುಭೂತವ ಕಡಿದು ತುಂಡು ಮಾಡುವ ಮಂತ್ರ
ಕೊಂಡಾಡಿ ಲೋಕ ಕುದ್ದಂಡ ಮಂತ್ರ
ಗಂಡುಗಲಿ ಪ್ರಚಂಡ ಹಿಂಡು ದಾನವರುಗಳ
ಗಂಡ ಪುರಂದರವಿಠ್ಠಲನ ಮಹಾಮಂತ್ರ ॥ ॥೩॥



**ಅರ್ಥವಿವರಣೆ :**

ಪ್ರಸಕ್ತ ಕೀರ್ತನ ಸಾಹಿತ್ಯದಲ್ಲಿ ಶ್ರೀ ಪುರಂದರದಾಸವರೇಣ್ಯರು **ಶ್ರೀ ನರಸಿಂಹ ಮಂತ್ರದ ಮಹಾತ್ಮ್ಯೆಯನ್ನು ವಿವರಿಸುತ್ತಾರೆ.**

**ಮಹಾದುರಿತ ಕೋಟಿಗಳ** = ಪಾಪಗಳೆಂಬ ರಾಶಿಗಳ ಮಹಾ ಸಮೂಹವನ್ನು, **ಸಂಹರಿಸಿ** = ಸಮೂಲವಾಗಿ ಕಿತ್ತೊಗೆದು(ಪುನಃ ಬಾರದಂತೆ ಪರಿಹರಿಸಿ), **ಭಾಗ್ಯನೀವ** = ಅಂತ್ಯದಲ್ಲಿ ಪರಮಪುರುಷಾರ್ಥ ರೂಪವಾದ ಮೋಕ್ಷಾನಂದವನ್ನು ನೀಡುವುದು. (ಶ್ರೀ ನಾರಸಿಂಹರೂಪ ಸಕಲ ದುರಿತ ಪರಿಹಾರಕರೂಪ ಹಾಗೂ ಮೋಕ್ಷಪ್ರದರೂಪ).

**ಹಸುಳೆ ಪ್ರಹ್ಲಾದನ** = ಮುಗ್ಧ ಬಾಲಕನಾದ ಪ್ರಹ್ಲಾದನನ್ನು, **ತಲೆಗಾಯ್ದು** = ವಿಪತ್ತಿನಿಂದ ಪಾರುಮಾಡಿದ "ಸತ್ಯಂ ವಿಧಾತುಂ ನಿಜಭೃತ್ಯ ಭಾಷಿತಂ"-ಎಂಬ ಭಾಗವ ತೋಕ್ತಿಯಂತೆ ಸರ್ವತ್ರ ವ್ಯಾಪ್ತನಾಗಿ ಶ್ರೀ ಹರಿಯು ಇದ್ದಾನೆಂದು ಹೇಳುತ್ತಿದ್ದ ಭೃತ್ಯ ಬಾಲಕ ಪ್ರಹ್ಲಾದನ ಮೊರೆಯನ್ನು ಕೇಳಿ ಆತನ ವಚನವನ್ನು ಸತ್ಯವಾಗಿಸಲು, ಕಂಭದಿಂದ ಒಡೆದು ಬಂದ ಶ್ರೀ ನರಸಿಂಹ ಬಾಲಕನನ್ನು ತಂದೆಯ ವಿಪತ್ತಿನಿಂದ ಸಂರಕ್ಷಿಸಿ, ಅನುಗ್ರಹಿಸಿದನು. **ಅಸುರನ ಒಡಲ ಬಗೆದ** = ದೈತ್ಯೋತ್ತಮ ನಾದ ಹಿರಣ್ಯ ಕಶಿಪುವಿನ ಉದರವನ್ನು ಬಗೆದು ಕರಳು ಮಾಲೆಯನ್ನು ತನ್ನ ಕೊರಳಲ್ಲಿ ಧರಿಸಿದ ಕಾರುಣ್ಯಮೂರ್ತಿ ಶ್ರೀ ನಾರಸಿಂಹ. **ವಸುಧೆಯೊಳು** = ಈ ಭೂಮಂಡಲದಲ್ಲಿ ದುಷ್ಟ ಶಕ್ತಿಗಳನ್ನು ಮರ್ಧಿಸಿ, ದಾನವರ ಪ್ರಾಣವನ್ನು ಹೀರುವ ದಿವ್ಯ ಮಂತ್ರ ಭಕ್ತರಿಗೆ ಅಸುರರಿಂದಲೇ ಆಪತ್ತು-ದುಃಖ. ಆ ಆಪತ್ತು ಶೋಕಪರಿಹಾರಕ ರೂಪ ಶ್ರೀ ನರಸಿಂಹ, **ಪಶುಪತಿಗೆ** = ಶ್ರೀ ರುದ್ರದೇವರಿಗೆ ಅತ್ಯಂತ ಪ್ರಿಯವಾದ ಮೂಲಮಂತ್ರ. ಶ್ರೀ ರುದ್ರದೇವರ ಬಿಂಬಮೂರ್ತಿ ಹಾಗೂ ಉಪಾಸ್ಯ ಮೂರ್ತಿ ಶ್ರೀಸಂಕರ್ಷಣಾ ಭಿನ್ನ ಶ್ರೀ ಲಕ್ಷ್ಮೀನರಸಿಂಹ ದೇವರು (ರುದ್ರಾಂತರ್ಗತ ನಾರಸಿಂಹ), ರಾಮ ಮಂತ್ರವು ಶ್ರೀ ರುದ್ರದೇವರಿಗೆ ತಾರಕಮಂತ್ರವಾದರೆ ನರಸಿಂಹ ಮಂತ್ರವು ಮೂಲ ಮಂತ್ರವಾಗಿದೆ.

**ದಿಟ್ಟ ಧ್ರುವರಾಯಗೆ** = ದ್ವಾದ ಶಾಕ್ಷರ ಯುಕ್ತವಾದ ಶ್ರೀ ವಾಸುದೇವ ಮಂತ್ರದಿಂದ ಬಾಲಕ ಧ್ರುವರಾಯನು ಶ್ರೀಮನ್ನಾರಾಯಣ ನನ್ನು ಪ್ರತ್ಯಕ್ಷೀ ಕರಿಸಿಕೊಂಡ ಶ್ರೀ ವಾಸುದೇವ ರೂಪವು ಮುಕ್ತಿಪ್ರದ ರೂಪ. ಅದೇ ಪುರುಷನಾಮಕ ರೂಪವು ಶ್ರೀ ನರಸಿಂಹ ರೂಪವು.

**ವಿಭೀಷಣನ**= ರಾವಣನ ತಮ್ಮ ವಿಭೀಷಣನು. ತ್ರೇತಾಯುಗದಲ್ಲಿ ಪ್ರಹ್ಲಾದ ರಾಜರೇ ವಿಭೀಷಣನಾಗಿ ಅವತರಿಸಿದ್ದಾರೆಂದು ಜ್ಞಾನಿಗಳ ಸಮ್ಮತ. (ಈ ವಿಷಯದಲ್ಲಿ ಅಭಿಪ್ರಾಯ ಬೇಧವಿದೆ), ಪ್ರಹ್ಲಾದರಿಗೆ ನರಸಿಂಹ ಮಂತ್ರವು ತಾರಕಮಂತ್ರ, **ತುಟ್ಟ ತುದಿಯೊಳು**= ಅಂತ್ಯ ಕಾಲದಲ್ಲಿ ಪಾಪಿಷ್ಠನಾದ ಅಜಾಮಿಳನು ನಾರಾಯಣ ಸ್ಮರಣೆ ಮಾಡಿದ ಶ್ರೀ ಪರಮಾತ್ಮನ ಮೂಲರೂಪವೇ ಶ್ರೀಮನ್ನಾರಾಯಣ ರೂಪವು. ಸೃಷ್ಟಿಸ್ಥಿತಿ ಸಂಹಾರಾದಿಗಳನ್ನು ಮಾಡುವ ಮೂಲರೂಪ. ಪ್ರಳಯ ಕಾರ್ಯಾಚರಣೆ ಶ್ರೀ ನರಸಿಂಹನ ದ್ವಾರಾ (ರುದ್ರಾಂತರ್ಗತ) ನಡೆಯುವುದು. ನಾರಾಯಣ ಸ್ಮರಣೆಯೇ ನರಸಿಂಹನ ಸ್ಮರಣೆಯು, **ದೃಷ್ಟಮಂತ್ರ**= ನರಸಿಂಹ ದೇವರನ್ನು ಧೃಢವಾಗಿ ನಂಬಿ ಭಜಿಸುವ ಭಾಜಕರ ಪಾಲಿಗೆ ಪ್ರತ್ಯಕ್ಷ ರೂಪವಾದ (ದೃಷ್ಟ) ಮಂತ್ರ.

**ಹಿಂಡು ಭೂತವ**= ಭೂತ ಪ್ರೇತ ಪಿಶಾಚಾದಿಗಳಿಗೆ ನರಸಿಂಹ ಮಂತ್ರ ಸಿಂಹಸ್ವಪ್ನ ಸದೃಶವು, **ಲೋಕಕೆ ಉದ್ದಂಡ ಮಂತ್ರ**= ಸಮಗ್ರ ಜಗತ್ತಿನಲ್ಲಿ ಅತ್ಯಂತ ಶ್ರೇಷ್ಠವಾದ ಮಂತ್ರ, **ಗಂಡುಗಲಿ**= ಅಸಮ ಪರಾಕ್ರಮಿ, **ಪ್ರಚಂಡ**= ಅತ್ಯದ್ಭುತವಾದ, **ಹಿಂಡು ದಾನವರುಗಳ ಗಂಡ**= ಕ್ಷುದ್ರ ಚೇತನರಾದ ಸಕಲ ದೈತ್ಯರ ಸಂಹಾರಿಯಾದ ಲೋಕಪ್ರಭು, **ಮಹಾಮಂತ್ರ** = ಅತ್ಯಂತ ಫಲ ಪ್ರದವಾದ ಶ್ರೀ ನರಸಿಂಹ ಮಂತ್ರ.

❋

## ೨೩

**(ಪುರಂದರ ವಿಠ್ಠಲಾಂಕಿತ)**

**ರಾಗ–ಸುರುಟಿ** **ಆದಿತಾಳ**

ಸ್ಮರಿಸುವ ಜನಕೆಲ್ಲ–ಭವಭಯ ಪರಿತಾಪಗಳಿಲ್ಲ ॥ ॥ಪ॥

ಶರಣಾಗತ ಜನ ವತ್ಸಲನೆನಿಸಿದ
ಕರಿಗಿರಿ ದುರ್ಗದ ನರಹರಿ ನಿನ್ನನು ॥ ॥ಅ॥

ಪೂರ್ವ ಸುಕೃತದಿಂದ-ಸುಜನಕೆ ತೋರ್ವೆ ನೀ ಮುದದಿಂದ ।
ಸಾರ್ವಕಾಲದೊಳು ಮಹದಾನಂದದಿ
ದೂರ್ವಾಸರು ಪೂಜಿಪ ಮೂರುತಿ ನಿನ್ನಯ ॥ ॥೧॥

ಕಾಶಿತೀರ್ಥದಿಂದ-ಚಕ್ರ ಪರಾಶರ ತೀರ್ಥದಿಂದ ।
ಮಾರುತ ಲೇಸಾದ ತೀರ್ಥ ನರ
ಕೇಸರಿ ತೀರ್ಥದಿಂದೊಪ್ಪುವ ನಿನ್ನಯ ॥ ॥೨॥

ನೀನಿಹ ಕ್ಷೇತ್ರದೊಳು-ಸೇರಿಹ ವಾನರ ಪಕ್ಷಿಗಳು ।
ಮಾನವಾದಿ ಬಹುಪ್ರಾಣಿ ಸಮೂಹಕೆ
ಏನು ಪುಣ್ಯ ಫಲವಿರುವುದೊ ತಿಳಿಯದು ॥ ॥೩॥

ಅತ್ತಿಯ ಮರದಲ್ಲಿ-ಕಾಯ್ಗಳು ಹತ್ತಿರುವಂದದಲಿ ।
ಮೊತ್ತ ಮೊತ್ತವಾದ ಬ್ರಹ್ಮಾಂಡ ನಿನ್ನೊಳು
ಹತ್ತಿಕೊಂಡಿಪ್ಪುದನಂತ ಕೋಟಿಯೆಂದು ॥ ॥೪॥

ಅಡವಿಯ ಮೃಗಗಳಿಗೆ-ಬಗೆ ಬಗೆ, ಗಿಡ ಲತೆ ಮರಗಳಿಗೆ
ಒಡೆಯ ನೀನಲ್ಲದೆ ಅನ್ನೋದಕಗಳ
ಕೊಡುವರೆ ಮನುಜರು ನೀ ಗತಿ ಸಲಹೆಂದು ॥ ॥೫॥

ಕ್ಷುದ್ರ ದೈತ್ಯರ ಗಂಡ-ಕರುಣಾ ಸಮುದ್ರ ತಿಮಿರ ಚಂಡ ॥
ರೌದ್ರಾದಿ ಅಸುರರ ಮರ್ಧಿಸಿ ಲೋಕೋ
ಪದ್ರವ ಬಿಡಿಸಿದ ರುದ್ರಾಂಶಗರ್ತ ನಿನ್ನ ॥ ॥೬॥

ಭೂತಗ್ರಹಾದಿಗಳು-ಸೋಕಿದ ಭೀತಿ ಜ್ವರಾದಿಗಳು ।
ಚೇತೋಮುಖಿ ನಿನ್ನ ನೋಡಲು ಇನ್ನಾ
ಘಾತಕವಳಿದು ಯಾತನೆ ಕಳೆವುದು ॥ ॥೭॥

ಲಕ್ಷ್ಮೀಸಹಿತನಾಗೀ–ಭಕ್ತರ ರಕ್ಷಿಸುವುದಕಾಗಿ ।
ಲಕ್ಷ್ಮಣಯುಕ್ತದಿ ಬಂದು ನಿಂದೆ ಶ್ರೀ
ಲಕುಮೀ ನರಸಿಂಹ ನಿನ್ನ ಚರಿತ್ರೆಯ ॥ ॥೮॥

ಕರಿಗಿರಿ ನರಸಿಂಹಾ–ಭಕ್ತರ ದುರಿತ ದಂತಿ ಸಿಂಹ ॥
ಪರಿಪಾಲಿಸು ನಾ ಮೊರೆ ಹೊಕ್ಕನು ನಿನ್ನ
ಗುರು **ಪುರಂದರವಿಠ್ಠಲ ನಿನ್ನನು** ॥ ॥೯॥



**ಅರ್ಥವಿವರಣೆ :**

ತುಮಕೂರು ಜಿಲ್ಲೆಗೆ ಸೇರಿದ ದೇವರಾಯನ ದುರ್ಗಕ್ಕೆ ಕರಿಗಿರಿ ಕ್ಷೇತ್ರವೆಂದು ಹೆಸರು. ಈ ಕ್ಷೇತ್ರ ದೇವತೆ ಕರಿಗಿರಿ ನರಸಿಂಹ ದೇವರು ಕೆಳಗಿನ ಬೆಟ್ಟದಲ್ಲಿ ಭೋಗಾ ನರಸಿಂಹನೂ ಮೇಲಿನ ಬೆಟ್ಟದಲ್ಲಿ ಯೋಗಾ ನರಸಿಂಹನೂ ವಿರಾಜಮಾನನಾಗಿದ್ದಾನೆ. ಸಿದ್ಧಿಯ ಪರಮ ಪವಿತ್ರ ಕ್ಷೇತ್ರ ತಮ್ಮ ಸಂಚಾರದಲ್ಲಿ ಒಮ್ಮೆ ಶ್ರೀ ಪುರಂದರದಾಸವರ್ಯರು ಕರಿಗಿರಿ ಕ್ಷೇತ್ರಕ್ಕೆ ಆಗಮಿಸಿದ್ದಾರೆ. ಅಲ್ಲಿ ಕ್ಷೇತ್ರಸ್ಥ ನರಸಿಂಹ ದೇವರನ್ನು ಸ್ತೋತ್ರ ಮಾಡಿ-ರುವ ಕೀರ್ತನ ಸಾಹಿತ್ಯವಿದು.

**ಸ್ಮರಿಸುವ ಜನಕೆಲ್ಲ**=ಶ್ರೀ ಲಕ್ಷ್ಮೀನರಸಿಂಹ ದೇವರನ್ನು ನಂಬಿ ಸ್ತೋತ್ರ ಮಾಡುವ ಭಕ್ತ ಜನಗಳಿಗೆಲ್ಲಾ, **ಭವಭಯ** ಸಂಸಾರಜನ್ಯವಾದ ಭೀತಿಯ ರೂಪದಲ್ಲಿರುವ ಪರಿತಾಪ(ಶೋಕ)ವಿಲ್ಲ, **ಶರಣಾಗತ ವತ್ಸಲ** = ಕರಿಗಿರಿ ಕ್ಷೇತ್ರದ ನರಸಿಂಹದೇವರು ತನ್ನ ಮೊರೆಹೊಕ್ಕ ಭಕ್ತರ ಪಾಲಿಗೆ ಕರುಣಾಮಯಿಯನು.

**ಪೂರ್ವ ಸುಕೃತದಿಂದ**= ಹಿಂದಿನ ಜನ್ಮಗಳ ಪುಣ್ಯ ವಿಶೇಷದಿಂದ, **ಮುದದಿಂದ**= ಸಂತೋಷದಿಂದ ನೀನು ನಿನ್ನ ದರ್ಶನ ಭಾಗ್ಯವನ್ನು

ನೀಡುವೆ, **ದೂರ್ವಾಸರು** = ದೂರ್ವಾಸ ಋಷಿಗಳಿಂದ ಪ್ರತಿಷ್ಠಿತವಾದ ವಿಗ್ರಹವೆಂದು ಸ್ಥಳ ಪುರಾಣದ ಇತಿಹಾಸವು. ದೂರ್ವಾಸರು ಶ್ರೀ ರುದ್ರದೇವರ ಅಂಶ ಸಂಭೂತರು. ಶ್ರೀ ಲಕ್ಷ್ಮೀನರಸಿಂಹ ದೇವರು ರುದ್ರದೇವರ ಉಪಾಸ್ಯ ಬಿಂಬನು.

**ಕಾಶಿತೀರ್ಥದಿಂದ...............ನಿನ್ನನು** = ಶ್ರೀ ಕರಿಗಿರಿ ಕ್ಷೇತ್ರದಲ್ಲಿ ಕಾಶೀತೀರ್ಥ-ಚಕ್ರತೀರ್ಥ—ಪರಾಶರ ತೀರ್ಥರು. ಮೂರುತಿಯ ಪಾದದಿಂದ ಹುಟ್ಟುವ ಪಾದ ತೀರ್ಥ-ನರಸಿಂಹತೀರ್ಥ—ಎಂಬ ಸುಪ್ರಸಿದ್ಧ ಪುಣ್ಯ ತೀರ್ಥಗಳಿವೆ.

**ನೀನಿಹ ಕ್ಷೇತ್ರದೊಳು** = ನೀನು ನೆಲೆಸಿರುವ ಈ ಕರಿಗಿರಿ ಕ್ಷೇತ್ರದಲ್ಲಿ, **ಸೇರಿಹ ವಾನರ ಪಕ್ಷಿಗಳು** = ವಾಸ ಮಾಡಿಕೊಂಡಿರುವ ಕೋತಿಗಳು, ಪಕ್ಷಿವರ್ಗ ಇತ್ಯಾದಿ ಪ್ರಾಣಿ ಸಮೂಹಗಳು, **ಏನು ಪುಣ್ಯ ಫಲವಿರು-ವುದೋ** = ಅವರೆಲ್ಲಾ ಅದೆಂತಹ ಪುಣ್ಯ ಜೀವಿಗಳೋ ?

**ಅತ್ತಿಯ ಮರದಲ್ಲಿ** = ಅತ್ತಿ ವೃಕ್ಷದಲ್ಲಿ, **ಕಾಯ್ಗಳು ಹತ್ತಿರುವಂದದಲಿ** = ಅಸಂಖ್ಯಾತವಾದ ಫಲಗಳು ಸೇರಿಕೊಂಡಿರುವಂತೆ, **ಮೊತ್ತ ಮೊತ್ತವಾದ ಬ್ರಹ್ಮಾಂಡ** = ಶ್ರೀಪರಮಾತ್ಮನ ಒಂದೊಂದು ರೂಪ ಕೂಪ-ದಲ್ಲಿ ಅನಂತ ಬ್ರಹ್ಮಾಂಡಗಳು ಅತ್ತಿಯ ಮರದಲ್ಲಿ ಫಲಗಳು ಬಿತ್ತಿಸಿ ಸೇರಿರುವಂತೆ ಆಶ್ರಯ ಹೊಂದಿವೆ.

**ಅಡವಿಯ ಮೃಗಗಳಿಗೆ** = ಕರಿಗಿರಿ ಕ್ಷೇತ್ರದಲ್ಲಿರುವ ಅರಣ್ಯ ವಾಸಿಗಳಾದ ಅನೇಕ ಮೃಗಗಳ ಸಮೂಹಕ್ಕೆ, **ಬಗೆ ಬಗೆ ಗಿಡ ಲತೆ ಮರಗಳಿಗೆ** = ನಾನಾ ಪ್ರಕಾರವಾಗಿ ಒತ್ತೊತ್ತಾಗಿ ಬೆಳೆದಿರುವ ಗಿಡಗಳು, ಬಳ್ಳಿಗಳು, ವೃಕ್ಷಗಳಿಗೆ, **ಒಡೆಯ ನೀನಲ್ಲದೆ** = ಅವುಗಳಿಗೆ ಕಾಲ ಕಾಲಕ್ಕೆ ಆಹಾರ ಪಾನಾದಿಗಳನ್ನು ಕೊಟ್ಟು ಸಂರಕ್ಷಿಸುವ ಪ್ರಭು ಶ್ರೀ ನಾರಸಿಂಹನು.

**ಕ್ಷುದ್ರ ದೈತ್ಯರ ಗಂಡ** = ಕ್ಷುದ್ರ ದೇವತೆಗಳಾದ ದೈತ್ಯರಿಗೆಲ್ಲಾ ನಿಯಾಮಕನಾದ ಪ್ರಭುವು ನೀನು, **ಕರುಣಾಸಮುದ್ರ** = ದಯಾಸಾಗರನು,

**ತಿಮಿರ ಚಂಡ** = ಅಜ್ಞಾನವೆಂಬ ಕತ್ತಲಿಗೆ (ತಿಮಿರ), ಸೂರ್ಯ ಸದೃಶನು (ಚಂಡ), **ರೌದ್ರಾದಿ ಅಸುರರ ಮರ್ಧಿಸಿ** = ಭಯಂಕರರಾದ ದೈತ್ಯರನ್ನು ಸಂಹರಿಸುವ ದಾನವಾರಿ ಪ್ರಹ್ಲಾದವರದನು, **ಲೋಕೋಪದ್ರವ ಬಿಡಿಸಿ** = ಸಜ್ಜನರ ಉಪದ್ರವವನ್ನು (ಅಸುರರಿಂದ ಉಂಟಾಗುವ ಹಿಂಸೆ) ಪರಿಹರಿಸುವವನು, **ರುದ್ರಾಂತರ್ಗತ ನಿನ್ನ** ರುದ್ರಾಂತರ್ಗತನಾದ ಶ್ರೀ ನಾರಸಿಂಹನೇ.

**ಭೂತ ಗ್ರಹಾದಿಗಳು** = ಭೂತ ಚೇಷ್ಟೆಯಿಂದಲಾಗಲೀ, ಗ್ರಹ ಚಾರದಿಂದ ಒದಗುವ ದುಃಖವಾಗಲೀ, **ಭೀತಿ ಜ್ವರಾದಿಗಳು** = ಭೂತ ಭಯ, ಗ್ರಹಚಾರ ಜನ್ಯವಾದ ದೇಹಕ್ಕೆ ಬರುವ ಜ್ವರಾದಿ ಉಪದ್ರವಗಳು, **ಚೇತೋಮುಖ** = ಚೈತನ್ಯ ಪ್ರದನಾದ ನಿನ್ನ ಸಂದರ್ಶನವಾದರೆ ಸಾಕು, **ಪಾತಕವಳಿದು ಯಾತನೆ ಕಳಿವುದು** = ಭಯ, ಜ್ವರಾದಿಗಳೆಲ್ಲವೂ ಪರಿಹಾರವಾಗಿ, ಪಾಪಗಳನ್ನು ಕಳೆದು, ದುಃಖವನ್ನು ಪರಿಹರಿಸುವ ಶ್ರೀ ನರಸಿಂಹನ ಸಂದರ್ಶನ ಭಾಗ್ಯ.

**ಲಕ್ಷ್ಮೀಸಹಿತನಾಗಿ** ರಮಾ ಸಮೇತನಾದ ಶ್ರೀ ಲಕ್ಷ್ಮೀ ನರಸಿಂಹ ದೇವರು, **ಭಕ್ತರ ರಕ್ಷಿಸುವುದಕಾಗಿ** = ತನ್ನ ಭಕ್ತರ ಸಂರಕ್ಷಣೆಗಾಗಿ (ಯೋಗಕ್ಷೇಮಕ್ಕಾಗಿ), **ಲಕ್ಷಣ ಯುಕ್ತದಿ** = ಸರ್ವಲಕ್ಷಣ ಸಂಪನ್ನನಾಗಿ, **ಬಂದು ನಿಂದೆ** = ಈ ಕ್ಷೇತ್ರದಲ್ಲಿ ಬಂದು ನೆಲೆಸಿರುವೆ, **ನಿನ್ನ ಚರಿತೆಯ** = ನಿನ್ನಯ ಅನಂತ ಕಲ್ಯಾಣ ಗುಣಯುಕ್ತವಾದ ಕಥಾ ವಿಶೇಷಗಳನ್ನು.

**ದುರಿತದಂತಿ ಸಿಂಹ** = ಭಕ್ತರ ಪಾಪಗಳೆಂಬ ಗಜಗಳಿಗೆ ಸಿಂಹಸದೃಶನು (ದಂತಿ-ಗಂಡಾನೆ), **ಪರಿಪಾಲಿಸು** = ನನ್ನನು ಕಾಪಾಡು, **ನಾ ಮೊರೆ ಹೊಕ್ಕನು ನಿನ್ನ** = ಹೇ ಪುರಂದರವಿಠಲಾಭಿನ್ನ ನಾರಸಿಂಹನೇ ನಿನ್ನನ್ನು ಮೊರೆ ಹೊಕ್ಕಿದ್ದೇನೆ.



## ೨೪

## (ಪುರಂದರವಿಠ್ಠಲಾಂಕಿತ)

**ರಾಗ–ಬೇಹಾಗ್** **ಆದಿತಾಳ**

ನರಸಿಂಹನ ಪಾದ ಭಜನೆಯ **ಮಾಡೋ** ॥ ॥ಪ॥

ನರಸಿಂಹನ ಪಾದ ಭಜನೆಯ ಮಾಡಲು
ದುರಿತ ಪರ್ವತ ಖಂಡಿಸುವ ಕುಲಿಶದಂತೆ ॥ ॥ಅ॥

ತರಳನ ಮೊರೆ ಕೇಳಿ ತವಕದಿಂದಲಿ ಬಂದು
ದುರುಳನ ಕರುಳನು ತನ್ನುಗುರಳಲಿ ಧರಿಸಿದ ॥ ॥೧॥

ಸುರರೆಲ್ಲ ನಡುಗಲು ಸಿರಿದೇವಿ ಮೊರೆಯಿಡೆ
ವರ ಕಂಭದಿಂದ ಬಂದ ವೈಕುಂಠಪತಿ ನಮ್ಮ ॥ ॥೨॥

ಹರವಿರಿಂಚಾದಿಗಳು ಕರವೆತ್ತಿ ಮುಗಿಯಲು
ಪರಮ ಶಾಂತನಾದ **ಪುರಂದರವಿಠ್ಠಲ** ॥ ॥೩॥



**ಅರ್ಥವಿವರಣೆ :**

**ದುರಿತ ಪರ್ವತ ಖಂಡಿಸುವ**= ನರಸಿಂಹರೂಪವು ಭಕ್ತರ ಸರ್ವ **ಪಾಪ** ಪರಿಹಾರಕ ಭಗವದ್ರೂಪವು, (ದುರಿತ-ಪಾಪ. ಪಾಪ ಪರ್ವತ-ಗಳನ್ನು ಖಂಡಿಸುವ ವಜ್ರಾಯುಧ ಸದೃಶನು), **ಕುಲಿಶದಂತೆ**=ವಜ್ರಾ-ಯುಧ ಎದ್ದಂತೆ ಇಂದ್ರನು ವಜ್ರಾಯುಧದಿಂದ ಪರ್ವತಗಳ ರೆಕ್ಕೆಗಳನ್ನು **ಖಂಡಿಸಿದ ಪ್ರ**ಸಂಗ.

**ತರಳನ** = ಬಾಲಕ ಪ್ರಹ್ಲಾದನ ಪ್ರಾರ್ಥನೆ ಕೇಳಿ) ಕಂಭದಿಂದ ಪ್ರತ್ಯಕ್ಷ ನಾದ ಶ್ರೀ ಲಕ್ಷ್ಮೀ ನರಸಿಂಹ. (ಸತ್ಯಂ ವಿಧಾತುಂ ನಿಜಭೃತ್ಯ ಭಾಷಿತಂ), **ದುರುಳನ** = ಪರಮ ದುಷ್ಟನಾದ ಹಿರಣ್ಯ ಕಶಿಪುವನ್ನೇ ಸಂಹರಿಸಿ, ಅವನ ಕರಳನ್ನು ತನ್ನ ಕಂಠದಲ್ಲಿ ಧರಿಸಿದ ವೀರ ನರಸಿಂಹನು.

**ಸುರರೆಲ್ಲ ನಡುಗಲು** = ಅವನ ಅದ್ಭುತ ರೂಪವನ್ನು ಕಂಡು ಸಮಸ್ತ ದೇವತಾವರ್ಗ ಭಯದಿಂದ ಕಂಪಿಸಿತು, **ಸಿರಿದೇವಿ ಮೊರೆಯಿಡೆ** = ಲಕ್ಷ್ಮೀ ದೇವಿಯು ಪ್ರಾರ್ಥಿಸುತ್ತಿರಲಾಗಿ, **ವೈಕುಂಠಪತಿ** = ಕೈವಲ್ಯದಾಯಕ ಲಯ ಕಾರಕನಾದ ಶ್ರೀ ಲಕ್ಷ್ಮೀನರಸಿಂಹ ದೇವರು. (ವೈಕುಂಠ-ಲಕ್ಷ್ಮ್ಯಾತ್ಮಕ ವಾದ ಮುಕ್ತಿಧಾಮ).

**ಹರವಿರಿಂಚಾದಿಗಳು** = ರುದ್ರ, ಬ್ರಹ್ಮ ದೇವರೇ ಮೊದಲಾದ ಅಮರಸ್ತೋಮ, **ಪರಮ ಶಾಂತನಾದ** = ಅಂಜಲೀ ಬದ್ಧರಾಗಿ ಭಕ್ತ್ಯು- ದ್ರೇಕದಿಂದ ಪ್ರಾರ್ಥಿಸಲಾಗಿ, ಉಗ್ರ ರೂಪವನ್ನು ತೊರೆದು, ಶಾಂತನಾದ, (**ಪ್ರಮೇಯ :–** ಶ್ರೀ ಪರಮಾತ್ಮನಿಗೆ ಕ್ರೋಧಾದಿ ದೋಷಗಳಿಲ್ಲ. ಅವನು ದೋಷವಿದೂರನು. ಉಗ್ರ ರೂಪತಾಳಿ, ಹಿರಣ್ಯ ಕಶಿಪುವನ್ನು ಸೀಳುವುದ ಕ್ಕಾಗಿ ಕ್ರೋಧ ಪ್ರದರ್ಶನ ಮಾಡಿದ ಅದು ನಟನೆ ಮಾತ್ರ. ಅಸುರರ ಮೋಹನಾರ್ಥವಾಗಿ ಮನ್ಯು-ಎಂದರೆ ಕ್ರೋಧ ಮನ್ಯುಸೂಕ್ತಕ್ಕೆ ಪ್ರತಿಪಾದ್ಯ ದೇವತಾ-ಶ್ರೀ ಲಕ್ಷ್ಮೀನರಸಿಂಹ).



**೨೫**

**(ಪುರಂದರವಿಠ್ಠಲಾಂಕಿತ)**

**ರಾಗ–ದರ್ಬಾರ್** **ಆದಿತಾಳ**

ಇದು ಏನಂಗೆ ಮೋಹನಾಂಗ ॥ ॥ಪ॥

ಮದನ ಜನಕ **ತೊರವೆಯ ನರಸಿಂಹ** ॥ ॥ಅ॥

**ಸುರರು** ಸ್ತುತಿಸಿದರೆ ತುಟಿಯ ಮಿಸುಕದವ
**ಮರೆದೇತಕೆ** ಬಾಯ ತೆರದೆ ಪೇಳೊಮ್ಮೆ ॥ ॥೧॥

ವರನೀಲ ಮುತ್ತು ಮಾಣಿಕ ಹಾರಗಳಿರೆ
ಕೊರಳಲ್ಲಿ ಕರುಳ ಮಾಲೆಯ ನಿಟ್ಟು ಮೆರೆವುದು ॥ ॥೨॥

**ತೊರವೆಯ ನರಹರಿ ಪುರಂದರವಿಠ್ಠಲ**
ಸಿರಿಯಪ್ಪ ತೊಡೆಯೊಳು ಅರಿಯನಿಟ್ಟಿರುವುದು ॥ ॥೩॥

**ಅರ್ಥವಿವರಣೆ :**

ಸಂಚಾರತ್ವೇನ ಶ್ರೀ ಪುರಂದರದಾಸವರ್ಯರು **ತೊರವಿ** ಕ್ಷೇತ್ರಕ್ಕೆ ಬಂದಿದ್ದಾರೆ. ತೊರವಿಯು ಬಿಜಾಪುರಕ್ಕೆ ಸಮೀಪದಲ್ಲಿರುವ ಪವಿತ್ರ ಕ್ಷೇತ್ರ ಅಲ್ಲಿ ಶ್ರೀ ನರಸಿಂಹ ದೇವರು ತನ್ನ ತೊಡೆಯ **ಮೇಲೆ** ಉದರ ಬಗೆದ ಹಿರಣ್ಯ ಕಶಿಪುವನ್ನು ಇಟ್ಟುಕೊಂಡು ವೀರಾಸನದಲ್ಲಿ ಕುಳಿತಿದ್ದಾನೆ.

**ಏನಂಗೆ** = ಏನು ಅವಯವ ?, **ಮೋಹನಾಂಗ** = ಅಪ್ರಾಕೃತ ಸರ್ವಾಂಗ ಸುಂದರ ಮೂರ್ತಿಯು, **ಮದನ ಜನಕ** = ಮನ್ಮಥನ ತಂದೆ ಯಾದ ಶ್ರೀ ಹರಿ.

**ತುಟಿಯ ಮಿಸುಕದವ** = ದೇವತಾವರ್ಗವು ಪ್ರಾರ್ಥಿಸಿದರೂ, ಬಾಯಿ ಬಿಚದ ನೀನು, **ಬಾಯ ತೆರೆದೆ** ಹೀಗೆ ಅಗಲವಾಗಿ ಬಾಯಿ ತೆರೆದಿದ್ದು ಏಕೆ ?

**ವರನೀಲ** = ಶ್ರೇಷ್ಠವಾದ ನೀಲಮಣಿ, **ಮಾಣಿಕ್ಯ ಹಾರಗಳಿರೆ** ಮುತ್ತು ಮಾಣಿಕ್ಯ ಯುಕ್ತವಾದ ದಿವ್ಯ ಹಾರಗಳಿರುತ್ತಿದ್ದರೂ, ನಿನ್ನ ಕಂಠದಲ್ಲಿ ಹಿರಣ್ಯ ಕಶಿಪುವಿನ ಕೊರಳ ಮಾಲೆಯನ್ನು ಧರಿಸಿರುವುದು ಪರಮಾಶ್ಚರ್ಯವಲ್ಲವೇ !

**ಸಿರಿಯಿಪ್ಪ ತೊಡೆಯೊಳು** = ಶ್ರೀ ಲಕ್ಷ್ಮೀದೇವಿ ಕುಳಿತಿರ ಬೇಕಾದ ತೊಡೆಯ ಮೇಲೆ, **ಅರಿಯನಿಟ್ಟಿರುವುದು** = ಶತ್ರುವಾದ ಹಿರಣ್ಯ ಕಶಿಪುವಿನ ಮೃತ ದೇಹವನ್ನು ನಿನ್ನ ತೊಡೆಯ ಮೇಲೆ ಇರಿಸಿಕೊಂಡಿರುವುದು.

ಈ ಕೀರ್ತನೆ ಸಾಹಿತ್ಯವು ಆಶ್ಚರ್ಯ ಸೂಚಕ ಅಲಂಕಾರದಿಂದ ಯುಕ್ತವಾಗಿದೆ.



## ೨೬

### (ಪುರಂದರವಿಠ್ಠಲಾಂಕಿತ)

**ರಾಗ–ಸೌರಾಷ್ಟ್ರ** **ತ್ರಿಪುಟತಾಳ**

ಶರಣು ಶರಣು ಶರಣ್ಯ ವಂದಿತ ಶಂಖಚಕ್ರ ಗಧಾಧರ ॥ ॥ಪ॥

ಶರಣು ಸರ್ವೇಶ್ವರನೆ ಅಹೋಬಲ ಗಿರಿಯ ನರಸಿಂಹ ಮೂರ್ತಿಗೆ॥ ॥ಅ॥

ಶೀಲದಲಿ ಶಿಶು ನಿಮ್ಮ ಕರೆಯಲು–ಕಾಲಿಲೊದ್ದತಿ ಖಳನನು
ಲೀಲೆಯಿಂದಲಿ ಚಿಟಿಲು ಭುಗಿ ಭುಗಿ–ಲೀಳೆ ಉಕ್ಕಿನ ಕಂಭದಿ ॥
ತಾಳನಿರ್ಗದಿ ತೋಳಿನಿಂದೆದೆ–ಸೀಳಿ ಹೊಟ್ಟೆಯ ಕರುಳನು ॥
ಮಾಲೆಯನು ಕೊರಳೊಳಗೆ ಧರಿಸಿದ ಜ್ವಾಲ ನರಸಿಂಹ ಮೂರ್ತಿಗೆ
ಕರಾಳ ನರಸಿಂಹ ಮೂರ್ತಿಗೇ ॥ ಶರಣು ಶರಣು ॥ ॥೧॥

ಮೋರೆ ಕೆಂಗರೆ ಕಣ್ಣು ಕಿವಿ-ತೆರೆ ಬಾಯಿ ಮೂಗಿನ ಶ್ವಾಸದಿ
ಮೇರುವಿಗೆ ಮಿಗಿಲೆನಿಸಿ ಮೊರೆಯುವ-ಘೋರ ಕಿಡಿಗಳ ಸೂಸುತ
ಸಾರಿಸಾರಿಗೆ ಹೃದಯ ರಕುತವ-ಘೀರು ಘೀರನೆ ಘೀರುತ ॥
ಧೀರತನದ ಉಪೇಂದ್ರ, ಮೊರೆಯುವ-ವೀರ ನರಸಿಂಹ ಮೂರ್ತಿಗೆ
ಕರಾಳ ನರಸಿಂಹ ಮೂರ್ತಿಗೇ ॥ ಶರಣು ಶರಣು ॥ ॥೨॥

ಖಿಲನು ಖಿಲಿ ಖಿಲಿಸೆಂದು ಕೂಗಲು-ಕೋಟಿ ಸಿಡಿಲಿನ ರಭಸದಿ
ಜಲವು ಗುಳು ಗುಳು ಗುಳನೆ ಉಕ್ಕಲು-ಜರಿದು ಕುಲಗಿರಿ ಉರುಳಲು
ನೆಲನು ಫಳ ಫಳ ಫಳನೆ ಒಡೆಯಲು-ನಡುಗಿ ದಿಗ್ದ್ವನೆ ಬೆದರಲು ॥
ಥಳನು ಥಳ ಥಳ ಥಳನೆ ಹೊಳೆಯುವ-ಚೆಲುವ ಕೋರೆಯ ಮೂರ್ತಿಗೆ
ದಿವ್ಯ ಕುಲಶಕೋರೆಯ ಮೂರ್ತಿಗೇ ॥ ಶರಣು ಶರಣು ॥ ॥೩॥

ವರವ ಬೇಡೆನೆ ಇರುವ ತಂದೆಯ-ಪರಿಯನಲ್ಲವ ಕಂದಿರೆ
ನಿರುತದಲಿ ನಿಮ್ಮೆರಡು ತೊಡೆಯಲಿ-ಶರೀರ ಬಿಡಲೆಂದೆನುತಿರೆ
ಕರುಣಿ ಕರುಣಿಸು ಕರುಣಿಸೆನಲಾಗ-ಕರೆದು ಅಭಯವನಿತ್ತಗೆ ॥
ಸ್ಥಿರದಿ ಸಾಮ್ರಾಜ್ಯವನು ಆಳಿದ-ಸಿಂಹನಾಮದ ಮೂರ್ತಿಗೆ
ನರಸಿಂಹ ನಾಮದ ಮೂರ್ತಿಗೇ ॥ ಶರಣು ಶರಣು ॥ ॥೪॥

ಹರನು ವಾರಿಜಭವನು ಕರಯುಗ-ಮುಗಿದು ಜಯ ಜಯವೆನುತಿರೆ
ತರಳ ಪ್ರಹ್ಲಾದನು, ತಾನಾಗ-ಶಿರವ ಬಾಗಿ ಪೊಗಳಲು
ಸುರರು ಪೂಮಳೆಗರೆಯೆ ಹರುಷದಿ-ಸರಸಿಜಾಕ್ಷನು ಶಾಂತದಿ ॥
ಸಿರಿಯ ಸಹಿತದಿ ಮೆರೆದ ಅಹೋಬಲ ವರದ ಪುರಂದರವಿಠ್ಠಲಗೆ-
ನಮ್ಮ ಕರುಣಿ ಪುರಂದರವಿಠಲಗೇ ॥ ಶರಣು ಶರಣು ॥ ॥೫॥



**ಅರ್ಥವಿವರಣೆ :**

ಸಂಚಾರತ್ವೇನ ಶ್ರೀ ಪುರಂದರ ದಾಸವರ್ಯರು **ಅಹೋಬಲ ಕ್ಷೇತ್ರಕ್ಕೆ** ಬಂದಿದ್ದಾರೆ. ಆ ಕ್ಷೇತ್ರವು **ಶ್ರೀ ನರಸಿಂಹ ದೇವರ ದಿವ್ಯ ಕ್ಷೇತ್ರ.** ಅಲ್ಲಿ ಅಹೋಬಲ ನಾರಸಿಂಹನ ಸಂದರ್ಶನ ಭಾಗ್ಯ ಪಡೆದ ಸಂತರಾದ ದಾಸರಾಯರು ಶ್ರೀ ನರಸಿಂಹನ ಲೀಲಾ ವೈಭವವನ್ನು ಹೃದಯಂಗಮವಾಗಿ ವಿವರಿಸಿದ್ದಾರೆ. ಪ್ರಸಕ್ತ ಕೀರ್ತನ ಸಾಹಿತ್ಯದಲ್ಲಿ.

**ಶರಣು ಶರಣು** = ಹೇ ಲಕ್ಷ್ಮೀನರಸಿಂಹ ಮೂರ್ತಿಯೇ, ನಿನಗೆ ಸಾಷ್ಟಾಂಗ ನಮಸ್ಕಾರವು, **ಶರಣ್ಯ ವಂದಿತ** = ನಿನಗೆ ಶರಣಾಗತರಾದವ ರಿಂದ ವಂದ್ಯ ನಾದವನೇ, **ಶಂಖ ಚಕ್ರ ಗಧಾಧರ** ಚತುರ್ಭುಜಗಳಲ್ಲಿ, ಶಂಖ, ಚಕ್ರ, ಗಧಾಯುಧಗಳನ್ನು ಧರಿಸಿದ್ದಾನೆ. ನಾಲ್ಕನೆಯದು ಅಭಯ ಹಸ್ತ, **ಸರ್ವೇಶ್ವರಗೆ** ಸರ್ವ ನಿಯಾಮಕನಾದ ಸ್ವಾಮಿ, **ಅಹೋಬಲ ಗಿರಿಯ** = ಅಹೋಬಲ ಬೆಟ್ಟದ ಮೇಲೆ ವಿದ್ಯಮಾನನಾಗಿರುವ ಶ್ರೀ ನರಸಿಂಹ ಸ್ವಾಮಿ.

**ಶೀಲದಲಿ** = ಅತ್ಯಂತ ಭಕ್ತಿಯಿಂದ (ನಿರ್ಮಲ ಭಕ್ತಿ ಭಾವ), **ಶಿಶು** = ಬಾಲ ಪ್ರಹ್ಲಾದನು, **ನಿಮ್ಮ ಕರೆಯಲು** = ಸರ್ವತ್ರ ವ್ಯಾಪ್ತನೆಂಬ ನಿಮ್ಮನ್ನು ಪ್ರಾರ್ಥಿಸಲು, **ಅತ ಖಳನನು** = ಪರಮ ದುಷ್ಟನಾದ ದೈತ್ಯ ನಾಯಕ ಹಿರಣ್ಯ ಕಶಿಪುವನ್ನು ತನ್ನ ಕಾಲಿನಿಂದ ಒದ್ದು, **ಲೀಲೆಯಿಂದಲಿ** = ನಿರಾಯಾಸವಾಗಿ, **ಚಿಟಿಲು** = ಪಠಾರ್ ಎಂಬ ಶಬ್ದದಿಂದ, **ಉಕ್ಕಿನ ಕಂಭದಿ** = ಸಭಾಗೃಹದ ಮಧ್ಯದಲ್ಲಿದ್ದ ಪ್ರಧಾನ ಕಂಭವನ್ನು ಸೀಳಿಕೊಂಡು, **ತಾಳನಿರ್ಗದಿ** = ಅಡಿಗಡಿಗೆ ಪೀಡಿಸುತ್ತಾ, **ತೋಳಿನಿಂದ ಎದೆ ಸೀಳಿ** = ಕೈಯ್ಯಿನ ತೀಕ್ಷ್ಣವಾದ ಉಗುರುಗಳಿಂದ ದೈತ್ಯನ ಉದರವನ್ನು ಬಗೆದು, **ಕರುಳ ಮಾಲೆಯನು** = ಹಿರಣ್ಯ ಕಶಿಪುವಿನ ಕರಳನ್ನು ಮಾಲಾಕಾರವಾಗಿ ತನ್ನ ಕೊರಳಿನಲ್ಲಿ ಧರಿಸಿದ, **ಜ್ವಾಲ** = ಉರಿಮೋರೆಯ, **ಕರಾಳ** = ಭಯಂಕರ ಸ್ವರೂಪದ.

**ಮೋರೆ ಕೆಂಗರೆ** ಕೆಂಪೇರಿದ ಮುಖ, ಕಣ್ಣು, ಗೂಟದಂತಿರುವ ಕಿವಿಗಳು, **ತೆರೆ ಬಾಯಿ** = ಅಗಲವಾಗಿ ತೆರೆದ ಬಾಯಿ, ಅದರ ದ್ವಾರಾ ಕೋರೆ ದಾಡೆಗಳ ದರ್ಶನ, **ಮೂಗಿನ ಶ್ವಾಸದಿ** = ತಿದಿಯಂತೆ ಒತ್ತು-ತ್ತಿರುವ ಮೂಗಿನ ನಾಳಗಳಿಂದ ಬರುತ್ತಿರುವ ಉಸಿರಿನ ಭರಾಟೆ, **ಮೇರು ವಿಗೆ ಮಿಗಿಲೆನಿಸಿ** = ಮೇರು ಪರ್ವತದ ಔನ್ನತ್ಯವನ್ನೂ ಮೀರಿದ ಘರ್ಜನೆ ಯಿಂದ (ಮೊರೆಯುವ), **ಘೋರ ಕಿಡಿಗಳ ಸೂಸುತ** ಹಾರುತ್ತಿರುವ ಕ್ರೋಧಾಗ್ನಿಯ ಕಿಡಿಗಳನ್ನು ಚೆಲ್ಲುತ್ತಿರುವ, **ಸಾರಿಸಾರಿಗೆ ಹೃದಯ**

**ರಕುತವ** = ಮೇಲಿಂದ ಮೇಲೆ ಪುಟಿಯುತ್ತಿರುವ ಉದರದ ರಕ್ತವನ್ನು, **ಪೀರು ಪೀರನ ಪೀರುತ** = ಸುರಿದುಕೊಳ್ಳುತ್ತಾ (ರಕ್ತಾಭಿಷೇಕ).

**ಧೀರತನದ** = ಅವನು ಪರಾಕ್ರಮಿಯಾದ, **ಉಪೇಂದ್ರ** - ಇಂದ್ರನ ಅನುಜನಾದ ಉಪೇಂದ್ರ ನಾಮಕ ಪರಮಾತ್ಮ.

**ಖಲನು** = ಪರಮ ದೈತ್ಯನಾದ ಹಿರಣ್ಯ ಕಶಿಪುವು, **ಖಿಲಿ ಖಿಲಿನೆಂದು** = ಸೋವಿನಿಂದ ಚೀರುತ್ತಿರಲು, **ಕೋಟಿ ಸಿಡಿಲಿನ ರಭಸದಿ** = ಒಂದು ಕೋಟಿ ಸಿಡಿಲುಗಳು ಏಕ ಕಾಲದಲ್ಲಿ ಸಂಭವಿಸಿದರೆ, ಉಂಟಾಗುವ ಘೋರ ಆರ್ಭಟದ ಸದ್ದು, **ಜಲವು ಗುಳು ಗುಳು ಗುಳನೆ** - ಸಮುದ್ರಗತ ಜಲರಾಶಿ ಉಕ್ಕಿ ಹರಿಯಲು, **ಜರಿದು ಕುಲಗಿರಿ ಉರುಳಲು** - ಮೇರುಪರ್ವತದ ಸಡಿಲವಾಗಿ ಉರುಳುತ್ತಿರಲು, **ಫಳ ಫಳನೆ** - ನೇಲವು ಫಳಾರನೆ ಬಿರುಕು ಬಿಡುತ್ತಿರಲು, **ನಡುಗಿ ದಿಗ್ದೆಸೆ** ದಶದಿಕ್ಕುಗಳೂ ಮತ್ತು ಆಕಾಶ ಚೆದರಿ ನಡುಗುತ್ತಿರಲು, **ಥಳನು** - ಹೇಮ ವರ್ಣ ಕಾಂತಿಯುಕ್ತನಾದ ನರಸಿಂಹನು ಬೆಳಗುತ್ತಿರಲು, **ಚಲುವ ಕೋರೆಯು** - ಸುಂದರವಾದ (ಅಪ್ರಾಕೃತವಾದ) ಕೋರೆದಾಡಿಗಳಿಂದ ನರಸಿಂಹನು ಶೋಭಾಯಮಾನವಾಗಿರುತ್ತಿರಲು, **ದಿವ್ಯ ಕುಲಶ ಕೋರಿಯು** = ಭವ್ಯವಾದ ಮಂಗಳಪ್ರದವಾದ ಕೋರೆ-ದಾಡಿಯ ನರಸಿಂಹನಿಗೆ ಶರಣು ಶರಣು (ಕೋರೆ ದಾಡಿಯಿಂದ ಅಸುರನನ್ನು ಸೀಳಿದ್ದರಿಂದ, ದೇವತಾವರ್ಗಕ್ಕೆ ಶುಭಪ್ರದನು),

**ವರವ ಬೇಡನೆ** = ಯಾವ ವರವನ್ನೂ ಬೇಡದೆ ಅಂಜಲೀ ಬದ್ಧನಾಗಿ ನಿಂತಿದ್ದ ಬಾಲಕ ಪ್ರಹ್ಲಾದ, **ಶರೀರ ಬಿಡಲೆಂದೆನುತಿರೆ** = ನರಸಿಂಹನ ಉಭಯ ತೊಡೆಗಳ ಮೇಲೆ ಮಲಗಿ ಗತ ಪ್ರಾಣನಾದ ತಂದೆಯನ್ನು **ಕಂಡ** ಬಾಲಕ ಪ್ರಹ್ಲಾದನು, **ಕರುಣಿಸನಲಾಗ** - ನಾರಸಿಂಹನನ್ನು ತನ್ನ ತಂದೆಗೆ ಸದ್ಗತಿಯನ್ನು ಕೊಡೆಂದು ಪ್ರಾರ್ಥಿಸಲಾಗ, **ಅಭಯುವನಿತ್ತಗೆ** - ಅಭಯ ಪ್ರಧಾನ ಮಾಡಿದ ನರಸಿಂಹ ಸ್ವಾಮಿಗೆ, **ಸ್ಥಿರದಿ ಸಾಮ್ರಾಜ್ಯವನು** - ಧೀರ್ಘಕಾಲ ದೇವಮಾನದಲ್ಲಿ ಪ್ರಹ್ಲಾದನಿಗೆ ಸಾಮ್ರಾಜ್ಯವನ್ನು ಕೊಟ್ಟು, **ಸಿಂಹನಾಮದ** - ನರಸಿಂಹ ನಾಮಾತ್ಮಕನಾದ ಶ್ರೀ ಹರಿಗೆ ಶರಣು ಶರಣು.

**ಹರನು** = ಶ್ರೀ ರುದ್ರದೇವರು, **ವಾರಿಜಭವನು** = ಶ್ರೀ ಪದ್ಮನಾಭ ದೇವರ ನಾಭೀಕಮಲ ಸಂಜಾತರಾದ ಶ್ರೀ ಬ್ರಹ್ಮದೇವರು, **ಕರಯುಗ ಮುಗಿದು** = ಎರಡು ಕೈಯ್ಗಳನ್ನೂ ಭಕ್ತಿಯಿಂದ ಮುಗಿದುಕೊಂಡು, **ಜಯ ಜಯವೆನುತಿರೆ** = ಉಘೇ–ಉಘೇ–ನಿನಗೆ ಜಯವಾಗಲಿ (ನಮಗೆ ಮಂಗಳ ಪ್ರದನಾಗೆಂದು ಅರ್ಥ) ಎಂದು ಬೇಡುತ್ತಿರೆ, **ಶಿರವ ಬಾಗಿ ಪೊಗಳಲು** = ಬಾಲ ಪ್ರಹ್ಲಾದನು ತಲೆಯನ್ನು ತಗ್ಗಿಸಿ ಸ್ತೋತ್ರ ಮಾಡುತ್ತಿರಲು, **ಸುರರು ಪೂಮಳೆಗರೆಯೆ** = ಆಕಾಶದಿಂದ ದೇವತಾವರ್ಗ ಪುಷ್ಪ ವೃಷ್ಟಿಯನ್ನು ಮಾಡುತ್ತಿರಲಾಗಿ, **ಸರಸಿಜಾಕ್ಷನು** = ಕಮಲ ದಳ ದಂತೆ ವಿಶಾಲ ನೇತ್ರನಾದ ಕಮಲಾ ರಮಣನು, **ಶಾಂತದಿ ಸಿರಿಸಹಿತದಿ** = ಉಗ್ರ ರೂಪವನ್ನು ಬಿಟ್ಟು, ಶಾಂತ ಭಾವವನ್ನು ತಾಳಿ, ಶ್ರೀ ಲಕ್ಷ್ಮೀ ಸಮೇತನಾಗಿ, **ಮೆರೆದ** = ವೈಭವದಿಂದ ನಲಿದಾಡಿದ ಶ್ರೀ ಲಕ್ಷ್ಮೀನರಸಿಂಹ ನಿಗೆ ಶರಣು-ಶರಣು.



## ೨೭

### (ವಿಜಯವಿಠ್ಠಲಾಂಕಿತ)

### ಶ್ರೀನರಸಿಂಹ ಸುಳಾದಿ

### ॥ ಧ್ರುವತಾಳ ॥

**ವೀರಸಿಂಹನೆ ನಾರಸಿಂಹನೆ ದಯಾ-**
**ಪಾರವಾರನೆ ಭಯನಿವಾರಣ ನಿರ್ಗುಣ**
**ಸಾರಿದವರ ಸಂಸಾರ ವೃಕ್ಷದ ಮೂಲ–**
**ಬೇರೊರಸೆ ಕೀಳುವ ಬಿರುದು ಭಯಂಕರ**
**ಘೋರಾವತಾರ ಕರಾಳವದನ ಅ-**
**ಘೋರ ದುರಿತ ಸಂಹಾರ ಮಾಯಾಕಾರ**

ಕ್ರೂರ ದೈತ್ಯರ ಶೋಕಕಾರಣ ಉದುಭವ
ಈರೇಳು ಭುವನ ಸಾಗರದೊಡೆಯ
ಆ ರೌದ್ರನಾಮ ವಿಜಯವಿಠ್ಠಲ ನಾರಸಿಂಹ
ವೀರರಸೋತ್ತುಂಗ ಕಾರುಣ್ಯಾಪಾಂಗ ॥ ॥೧॥

॥ **ಮಠ್ಯತಾಳ** ॥

ಮಗುವಿನ ರಕ್ಕಸನು ಹಗಲಿರುಳು ಬಿಡದೆ
ಹಗೆಯಿಂದಲಿ ಹೊಯಿದು ನಗ ಪನ್ನಗ ವನಧಿ
ಗಗನ ಮಿಗಿಲಾದ ಅಗಣಿತ ಬಾಧೆಯಲಿ
ನೆನೆದು ಬಗೆದು ಸಾವು ಬಗೆದು ಕೊಲ್ಲುತಿರಲು
ಜಗದ ವಲ್ಲಭನೆ ಸುಗುಣಾನಾಡಿಗನೆ
ನಿಗಮವಂದಿತನೆ ಪೊಗಳಿದ ಭಕುತರ
ತಗಲಿ ತೊಲಗನೆಂದು ಮಗ ಕೂಗುತಿರಲು
ಯುಗ ಯುಗದೊಳು ದಯಾಳುಗಳ ದೇವರ ದೇವ
ಯುಗಾದಿಕೃತಿನಾಮ ವಿಜಯವಿಠ್ಠಲ ಹೋ ಹೋ
ಯುಗಳ ಕರವ ಮುಗಿದು ಮಗುವು ಮೊರೆಯಿಡಲು ॥ ॥೨॥

॥ **ರೂಪಕತಾಳ** ॥

ಕೇಳಿದಾಕ್ಷಣದಲಿ ಲಾಲಿಸಿ ಭಕುತರ
ಪಾಳಿಯ ವೇಗದಲಿ ಪಾಲಿಸುವೆನೆಂದು
ತಾಳಿ ಸಂತೋಷವ ತೂಳಿ ತುಂಬಿದಂತೆ
ಮೂಲೋರ್ಲೋಕದ ಪರಿಪಾಲಯದಿಂದ ಸು-
ಶೀಲ ದುರ್ಲಭನಾಮ ವಿಜಯವಿಠ್ಠಲ ಪಂಚ
ಮೌಳಿಮಾನವ ಕಂಭ ಸೀಳಿ ಮೂಡಿದ ದೈವ ॥ ॥೩॥

|| ಝಂಪೆತಾಳ ||

ಲಟಲಟಾಲಟಲಟಾ ಲಟಕರಿಸಿ ವನಜಜಾಂಡ
ಕಟಹ ಪಟ ಪಟಾ ಪಟುತ್ಕಾಟದಿ ಬಿಚ್ಚುತಿರಲು
ಪುಟ ಪುಟಾ ಪುಟನೆಗೆದು ಚೀರಿ ಹಾರುತ ಪಲ್
ಕಟಕಟಾ ಕಟಕಟ ಕಡಿದು ರೋಷದಿಂದ
ಮಿಟಿಮಿಟಿ ಮಿಟಮಿಟನೆ ರಕ್ತಾಕ್ಷಿಯಲಿ ನೋಡಿ
ತಟಿತ್ಕೋಟಿ ಉದ್ಧಟನೆ ಆರ್ಭಟವಾಗಿ ತೋರಲು
ಕುಟಿಲರಹಿತವ್ಯಕ್ತ **ವಿಜಯವಿಠ್ಠಲ ಶಕ್ತ**
ಧಿಟ ನಿಟಿಲನೇತ್ರ ಸುರಕಟಕ ಪರಿಪಾಲ || ||೪||

|| ತ್ರಿಪುಟಿತಾಳ ||

ಬೊಬ್ಬಿರಿಯೆ ವೀರಧ್ವನಿಯಿಂದ ತರುಗಿರಿ
ಹಬ್ಬಿ ಮುಂಚೂಣಿ ಉರಿ ಹೊಗರೆದ್ದು ಸುತ್ತೆ
ಉಬ್ಬಸ ರವಿಗಾಗೆ ಅಬ್ಧಿಜ ನಡುಗುತಿರೆ
ಅಬ್ಧಿ ಸಮ ಉಕ್ಕಿ ಹೊರ ಚೆಲ್ಲಿ ಬರುತಿರೆ
ಅಬ್ಜ ಭವಾದಿಗಳು ತಬ್ಬಿಬ್ಬುಗೊಂಡರು
ಅಚ್ಚರವೇನೆನುತ ನಭದ ಗುಳೆಯು ತೆಗೆಯ
ಶಬ್ದ ತುಂಬಿತು ಅವ್ಯಾಕೃತಾಕಾಶ ಪರಿಯಂತ
ನಿಚ್ಚರ ತರುಗಿರಿಗಳು ಜಜ್ಜರಿಸಿ
ಒಬ್ಬರಿಗೊಶವಲ್ಲ ಹೋ ಹೋ **ವಿಜಯವಿಠ್ಠಲ**
ಇಬ್ಬಗೆ ಯಾಗೆ ಕಂಭದಿಂದಲಿ ಪೊರವಂಟ || ||೫||

|| ಅಟ್ಟತಾಳ ||

**ಘುಡು ಘುಡಿಸುತ ಕೋಟಿ ಸಿಡಿಲು ಗಿರಿಗೆ ಬಂದು**
**ಹೊಡೆದಂತೆ ಚೀರಿ ಬೊಬ್ಬಿಡುತಲೆ ಲಂಘಿಸಿ**

ಪಿಡಿದು ರಕ್ಕಸನ ಕೆಡಹಿ ಮುಡಿಯು ತುಡುಕಿ
ತೊಡೆಯ ಮೇಲೀರಿಸಿ ಹೇರೊಡಲ ಕೂರುಗುರಿಂದ
ಪಡವಲಗಡಿಯ ಕಡೆಯ ತರಣಿ ನೋಡಿ
ಕಡುಗೋಪದಲಿ ಸದೆ ಬಡಿದು ರಕ್ಕಸನ್ನ
ನಿಡುಗರಳನು ಕೊರಳಡಿಯಲ್ಲಿ ಧರಿಸಿದ
ಸಡಗರದ ದೈವ ಕಡುಗಲಿ ಭೂರ್ಭುವ **ವಿಜಯವಿಠ್ಠಲ** ಪಾ
ಲ್ಗಡಲೊಡೆಯ ಶರಣರ ವಡವೆ ಒಡನೊಡನೆ ॥ ॥೬॥

|| **ಆದಿತಾಳ** ||

ಉರಿಮುಸಗಿ ಚತುರ್ದಶ ಧರಣಿ ತಲ್ಲಣಿಸಲು
ಪರಮೇಷ್ಠಿ ಹರ ಸುರರು ಸಿರಿದೇವಿಗೆ ಮೊರೆಯಿಡಲು
ಕರುಣದಿಂದಲಿ ತನ್ನ ಶರಣನ ಸಹಿತ ನಿನ್ನ
ಚರಣಕೆ ಎರಗಲು ಪರಮ ಶಾಂತನಾಗಿ
ಹರಹಿದಿ ದಯವನ್ನು ಸುರರು ಕುಸುಮ ವರುಷ
ಗರೆಯಲು ಭೇರಿವಾದ್ಯ ಮೊರೆವುತ್ತರರೇ ಎನಲು
ಪರಿವಾರ ವಾಲಗ ವಿಸ್ತರದಿಂದ ಕೈಕೊಳುತ
ಮೆರೆದು ಸುರುದುಪದ್ರ ಹರಿಸಿ ಬಾಲನ್ನ ಕಾಯ್ದ
ಪರದೈವ ಗಭೀರಾತ್ಮ **ವಿಜಯವಿಠ್ಠಲ** ನಿನ್ನ
ಚರಿತೆ ದುಷ್ಟರಿಗೆ ಭೀಕರವೋ ಸಜ್ಜನಪಾಲ ॥ ॥೭॥

|| **ಜೊತೆ** ||

ಪ್ರಹ್ಲಾದವರದ ಪ್ರಪನ್ನ ಕ್ಲೇಶಭಂಜನೆ
ಮಹ ಹಂಸ **ವಿಜಯವಿಠ್ಠಲ** ನರಮೃಗರೂಪ ॥



**ಅರ್ಥವಿವರಣೆ :**

ಶ್ರೀ ವಿಜಯ ದಾಸವರ್ಯರಿಂದ ವಿರಚಿತವಾದ ಈ **ನರಸಿಂಹ ಸುಳಾದಿಯು** ವಿಶಿಷ್ಟ ಪೂರ್ಣವಾದುದು. ಇದನ್ನು ಭಕ್ತಿಪೂರ್ವಕವಾಗಿ ಪಠಿಸುವವರ ಸಕಲ ದುರಿತಗಳ ಪರಿಹಾರ. ಸುಳಾದಿಯ ಮುಖ್ಯ ಪ್ರತಿಪಾದ್ಯನಾದ **ಶ್ರೀ ಲಕ್ಷ್ಮೀನರಸಿಂಹನು** ಸಕಲ ಪಾಪ ಪರಿಹಾರಕ ಭಗವದ್ರೂಪವು.

**ವೀರಸಿಂಹನೆ** = ಸರ್ವಶಕ್ತನೂ ಸಮರ್ಥನೂ ಆದ ಶ್ರೀ ನರಸಿಂಹ ಮೂರ್ತಿಯೇ (ಲಯಕಾರಕ ರೂಪ), **ನಾರಸಿಂಹನೆ** = ನಾರ–ನ + ಅರ–ಅರ–ಎಂದರೆ ದೋಷಗಳು. ನ–ನಿಷೇಧಾರ್ಥದಲ್ಲಿ ದೋಷ ವಿದೂರನೆಂದರ್ಥ–ಸಿಂಹ-ಮೃಗರಾಜ-ಸರ್ವಶ್ರೇಷ್ಠನೆಂದರ್ಥ. ಅಂದರೆ ಅನಂತ ಕಲ್ಯಾಣ ಗುಣ ಪರಿಪೂರ್ಣನು, ಅತಏವ ಸಮಸ್ತ ದೋಷವಿದೂರನೂ, ಸರ್ವೋತ್ತಮನೂ ಆದ ಶ್ರೀಮನ್ನಾರಾಯಣನೇ "ನರಸಿಂಹ"ವಾಚ್ಯನು. ಇದೇ "ನಾರಸಿಂಹ" ಶಬ್ದಾರ್ಥದ ಪರಿಷ್ಕಾರ ಕ್ರಮ, **ದಯಾಪಾರವಾರನೆ** = ಕರುಣಾ ಸಮುದ್ರನೇ, (ದಯಾ + ಅಪಾರವಾರ), **ಭಯ ನಿವಾರಣ** = ಜೀವರಿಗೆ ಬರುವ ಸಕಲ ಭಯ ನಿವಾರಣನು (ಇದರಿಂದ ಅಡವಿಯಲ್ಲಿ ಪ್ರಯಾಣ ಮಾಡುತ್ತಿರುವಾಗ, ನರಸಿಂಹನ ಭಜನೆಯು ಅಗತ್ಯ), **ನಿರ್ಗುಣ** ಪ್ರಾಕೃತ ಗುಣತ್ರಯಗಳಿಂದ ವಿದೂರನು (ಅಪ್ರಾಕೃತ ಸಾರರೂಪನು), **ಸಂಸಾರ ವೃಕ್ಷದ ಮೂಲ** = ಶರಣಾಗತರಾದ ಭಕ್ತರ ಕರ್ಮ ಬಂಧನ ರೂಪವಾದ ಸಂಸಾರವೆಂಬ ವೃಕ್ಷದ ಮೂಲವನ್ನೇ ಬೇರು ಸಮೇತ ಕಿತ್ತು ಬಿಸಾಡುವ ಕರ್ಮ ವಿಮೋಚಕರೂಪನು. ನರಸಿಂಹ ಸ್ತೋತ್ರ ಪಠಣದಿಂದ ಸಂಸಾರ ನಿವೃತ್ತಿ. ತನ್ಮೂಲಕ ಮೋಕ್ಷಾನಂದ ಪ್ರಾಪ್ತಿ, **ಘೋರಾವತಾರ** = ಭಯಾನಕವಾದ ಘೋರ ರೂಪವನ್ನು ಧರಿಸಿ, ಕಂಭದಿಂದ ಸಿಡಿದು ಬಂದ ನರಸಿಂಹರೂಪ, **ಕರಾಳವದನ** = ಭಯಂಕರವಾದ ಕೋರೆದಾಡೆಗಳಿಂದ ಶೋಭಾಯಮಾನವಾದ ದಾನವರ ಹೃದಯ ಭೇದಕವಾದ ದಾನವಾರಿಯ ಮುಖ, **ಅಘೋರ** = ಭಯ ರೂಪವನ್ನು ಹಿರಣ್ಯ ಕಶಿಪುವಿನ

ಭಯಾರ್ಥ ಪ್ರಕಟಿಸಿದನೇ ಹೊರತು ಕ್ರೋಧ ರೂಪದವನಲ್ಲ. ಕ್ರೋಧವು ದೋಷ. ಶ್ರೀ ಹರಿಯು ಸಮಸ್ತ ದೋಷವಿದೂರನು. ಇದರಿಂದ ಶಾಂತ ಮೂರ್ತಿಯು, **ದುರಿತ ಸಂಹಾರ** = ಸಕಲ ಪಾಪ ವಿನಾಶಕ ರೂಪ, **ಮಾಯಾಕಾರ** = ದೈತ್ಯರ ಮೋಹನಾರ್ಥ ಘೋರರೂಪ ತಾಳಿದನು, **ಕ್ರೂರ ದೈತ್ಯರ ಶೋಕ ಕಾರಣ** ತಮೋಯೋಗ್ಯರಾದ ದೈತ್ಯರ ಸ್ವರೂಪ ಗತ ಅಪಾರ ದುಃಖಕ್ಕೆ ಕಾರಣನು ಆತನ ಬಿಂಬರೂಪದಿಂದಲೇ ತಮೋ-ಯೋಗ್ಯರ ನಿತ್ಯ ದುಃಖದ ಅಭಿವ್ಯಕ್ತಿ ಮತ್ತು ಫಲಾನುಭವ, **ಉರುಭವ** = ಅವತಾರವೇ ಹೊರತು, ಅವನಿಗೆ ಜನನ ಮರಣಾದಿಗಳು ಇಲ್ಲ. ಕಂಭ ದಿಂದ ಬಗೆದು ಬಂದ ನರಸಿಂಹನಿಗೆ ಜನನೀ ಜನಕರ್ಯಾರು ? **ಈರೇಳು ಭುವನ** = 14 ಲೋಕಗತ ಬ್ರಹ್ಮಾಂಡ (ಈರೇಳು = 7 × 2 = 14), **ಸಾಗರದೊಡೆಯ** = ಕ್ಷೀರಸಾಗರ ಶಯನನು. (ಸಮುದ್ರ ರಾಜನ ತನಯಳಾದ ಶ್ರೀ ಲಕ್ಷ್ಮೀದೇವಿಯ ರಮಣ), ಆ **ರೌದ್ರನಾಮ** = ಭಯಂಕರ ರೂಪವುಳ್ಳ ನಾರಸಿಂಹ ನಾಮವಾಚಕನು, **ವೀರರಸ ಉತ್ತುಂಗ** = ವೀರರಸ ಶ್ರೇಷ್ಠನು. ನರಸಿಂಹಾವತಾರವು ವೀರರಸ ಪ್ರಧಾನ-ವಾದದ್ದು. ವೀರರಸದ ಅಭಿವ್ಯಕ್ತಿ ಅವನಿಂದಲೇ.

**ಮಗುವಿನ** = ಬಾಲಕ ಪ್ರಹ್ಲಾದನ, **ರಕ್ಕಸನು** = ತಂದೆಯಾದ ದೈತ್ಯರಾಜ ಹಿರಣ್ಯ ಕಶಿಪು, **ಹಗಲಿರುಳು ಬಿಡದೆ** = ಹಗಲು ರಾತ್ರಿ ಎಡ ಬಿಡದೆ, **ಹಗೆಯಿಂದಲಿ** = ಕೇವಲ ದ್ವೇಷ ಭಾವನೆಯಿಂದ (ಪ್ರಹ್ಲಾದ ರಾಜರು ವೈಷ್ಣವರಾದ್ದರಿಂದ), **ಹೊಯಿದು** = ಶಿಕ್ಷಿಸಿ, **ನಗ** = ಬೆಟ್ಟದಿಂದ ತಳ್ಳುವುದು, **ಪನ್ನಗ** = ಕ್ರೂರ ವಿಷಸರ್ಪಗಳಿಂದ ಕಚ್ಚಿಸುವುದು, **ವನದಿ** = ಆಳವಾದ ಸಮುದ್ರದಲ್ಲಿ ನೂಕಿದನು, **ಗಗನ** = ಆಕಾಶಕ್ಕೆ ಮೇಲಕ್ಕೆ-ಸೆಯುವುದು, **ಅಗಣಿತ ಬಾಧೆಯಲಿ** = ನಾನಾ ವಿಧವಾದ ಹಿಂಸೆಗಳಿಗೆ ಒಳಗಾದನು, **ಸಾವು ಬಗೆದು** = ಪ್ರಹ್ಲಾದನು ಪರಿಪರಿಯ ಹಿಂಸೆಗಳಿಂದ ಸಾಯುತ್ತಾನೆಂದು ಭಾವಿಸಿ, **ಜಗದ ವಲ್ಲಭನೆ** = ಜಗತ್ಪ್ರಭುವಾದ ಶ್ರೀ ಮನ್ನಾರಾಯಣನೆ, **ಸುಗುಣ ಅನಾದಿಗನ** = ಅನಂತ ಕಲ್ಯಾಣಗುಣ ಪರಿ ಪೂರ್ಣನೂ, ಅನಾದ್ಯನಂತ ಕಾಲದಿಂದಲೂ ನಿತ್ಯ ಶಾಶ್ವತ ರೂಪಿಯೇ,

**ನಿಗಮವಂದಿತನೆ** = ವೇದಾಭಿಮಾನಿಯಾದ ಶ್ರೀ ಲಕ್ಷ್ಮೀದೇವಿಯಿಂದ ನಮಸ್ಕೃತನೇ (ವೇದ ಪ್ರತಿಪಾದ್ಯನೇ), **ಪೊಗಳಿದ ಭಕುತರ** = ನಿನ್ನನ್ನೇ ನಂಬಿ ಸ್ತೋತ್ರ ಮಾಡುತ್ತಿರುವ ಭಕ್ತಜನರಿಗೆ, **ತಗಲಿ** = ಬಿಂಬರೂಪಿಯಾಗಿ ಸಮೀಪಸ್ಥನಾಗಿ, **ತೊಲಗನೆಂದು** = ನಿತ್ಯಾವಿಯೋಗಿಯಾಗಿ (ಭಕ್ತರನ್ನು ಎಡಬಿಡದೆ ಸಂರಕ್ಷಿಸುವ ಆಪದ್ಬಂಧು), **ಯುಗಾದಿ ಕೃತು-ನಾಮ** = ಯುಗವಾಚ್ಯನಾಗಿದ್ದು, ಕಾಲಾಂತರ್ಗತನಾಗಿ ಯುಗ ಪ್ರವರ್ತಕನಾಗಿರುವ, **ಹೋ ಹೋ** = ಸಂಬೋಧನಾ ಶಬ್ದ ಪ್ರಯೋಗ, **ಯುಗಳ ಕರವ** = ಎರಡು ಕೈಗಳನ್ನೂ ಜೋಡಿಸಿ, **ಮಗುವು ಮೊರೆಯಿಡಲು** = ಬಾಲಕ ಪ್ರಹ್ಲಾದನು ಶ್ರೀ ಹರಿಯನ್ನು ಮೊರೆಯಿಡುತ್ತಿರಲು.

**ಲಾಲಿಸಿ ಭಕುತರ** = ಭಕ್ತಶ್ರೇಷ್ಠನಾದ ಪ್ರಹ್ಲಾದನ ಮೊರೆಯನ್ನು ಕೇಳಿ, **ಮೌಳಿಯ** = ವೇಗದಲಿ ಪಾಲಿಸುವೆನೆಂದು-ಬೇಗ ರಕ್ಷಿಸುತ್ತೇನೆಂದು, ತಾಳಿ ಸಂತೋಷವ ಹೊಂದಿ, **ತೂಳಿ ತುಂಬಿದಂತೆ** = ಸರ್ವತ್ರ ತುಂಬಿದವನಾಗಿ, **ಪರಿವಾಲಯದಿಂದ** = ಸಮಸ್ತ ದೇವತಾ ಪರಿವಾರದಿಂದ ಒಡಗೂಡಿ, **ಸುಶೀಲ** = ಪರಮ ಪವಿತ್ರ ಮೂರ್ತಿಯಾದ (ಸಕಲ ದೋಷ ವಿದೂರನಾದ ಪರಮ ಶುದ್ಧ ವಸ್ತು), **ದುರ್ಲಭನಾಮ** = ಅಗಮ್ಯನೂ ಅಪ್ರಾಪ್ತನೂ ಆದ ಶ್ರೀಹರಿ, **ಪಂಚ ಮೌಳಿ ಮಾನವ** = ನರಸಿಂಹರೂಪ (ಪಂಚ–ಅಗಲವಾದ ಮೌಳಿ–ಮುಖವುಳ್ಳದ್ದು–ಸಿಂಹ (ಪಂಚಾನನ), ಮಾನವ–ನರವೇಷ), **ಮೂಡಿದ ದೈವ** = ಸ್ತಂಭಜನಾದ ಶ್ರೀ ಲಕ್ಷ್ಮೀ-ನರಸಿಂಹ.

**ಲಟಿ ಲಟಾ** = ವಸ್ತುವು ಒಡೆಯುವಾಗ ಉಂಟಾಗುವ ಮಹಾಶಬ್ದ, **ವನಜಾಂಡ ಕಟಹ** = ಬ್ರಹ್ಮಾಂಡದ ಖರ್ಪರ (ಬ್ರಹ್ಮಾಂಡದ ಚಿಪ್ಪು. ಒಂದುಸಾವಿರ ಯೋಜನದಷ್ಟು ಮಂದವುಳ್ಳದ್ದು), **ಪಟಿ ಪಟಾ** = ಒಡೆದು ಸೀಳುವುದು. ಬ್ರಹ್ಮಾಂಡ ಖರ್ಪರ ಒಡೆಯಿತು, **ಪಟು ಉತ್ಕಟದಿ** = ಅತ್ಯಂತ ವೇಗದಿಂದಲಿ ಬಿಚ್ಚುತ್ತಿರಲು, **ಪುಟಿ ಪುಟಾ** = ಕಂಭದಿಂದ ಸೀಳಿ ಮೂಡಿ ಬಂದ ನರಕೇಸರಿಯು ಪುಟ ಪುಟನೆ ನೆಗೆಯುತ್ತಾ, ದಾನವೇಂದ್ರ-ನನ್ನು ಆಕ್ರಮಿಸಿದನು, **ಚೀರಿ ಹಾರುತ** = ಘೋರ ಶಬ್ದದಿಂದ ಚೀರುತ್ತಾ,

ಒಂದೇ ನೆಗೆತಕ್ಕೆ ಹಾರಿ, **ಪಲ್ ಕಟಿ ಕಟಾ**=ತನ್ನ ಹಲ್ಲುಗಳನ್ನು ಕಡಿ- ಯುತ್ತಾ, **ಮಿಟಿ ಮಿಟನೆ**=ತನ್ನ ಕಣ್ಣಿನ ರೆಪ್ಪೆಗಳನ್ನು ಮಿಟುಕಿಸುತ್ತಾ, **ರಕ್ತಾಕ್ಷಿಯುಲಿ**=ರಕ್ತದಿಂದ ಕೆಂಪೇರಿದ ನೇತ್ರಗಳಿಂದ ದೈತ್ಯನನ್ನು ನೋಡುತ್ತಾ, **ತಟಿತ್ಕೋಟಿ**=ಕೋಟಿ ಸಂಖ್ಯಾಕವಾದ ಮಿಂಚಿನ ಕಾಂತಿ ಯಂತೆ, **ಉದ್ಭಟನೆ**=ಅಬ್ಬರದ ದೈವ, **ಕುಟಿಲರಹಿತ**=ಸಮಸ್ತ ದೋಷಗಳಿಂದ ವಿದೂರನಾದ, **ವ್ಯಕ್ತ**=ಅವತರಿಸಿದ, **ಶಕ್ತ**=ಸರ್ವಶಕ್ತ, **ಧಿಟ**=ಸತ್ಯಸಂಕಲ್ಪನು, **ನಿಟಿಲನೇತ್ರ**=ಶ್ರೀನೃಸಿಂಹದೇವರು, **ಸುರಕಟಕ ಪರಿಪಾಲ**=ದೇವತಾ ಸಮೂಹವನ್ನು ಸಂರಕ್ಷಿಸುವ ಪ್ರಭು.

**ಬೊಬ್ಬಿರಿಯೆ**=ಆರ್ಭಟಿಸುತ್ತಿರಲಾಗಿ, **ವೀರ ಧ್ವನಿಯಿಂದ**= ಅಟ್ಟಹಾಸದ ಶಬ್ದದಿಂದ, **ತರುಗಿರಿ ಹಬ್ಬಿ**=ಅರಣ್ಯ-ಪರ್ವತಗಳಿಗೆಲ್ಲಾ ವ್ಯಾಪಕವಾಗಿ, **ಮುಂಚಣೀ**=ಅದರಿಂದ ಪೂರ್ವಭಾವಿಯಾಗಿ ಉಂಟಾದ, **ಉರಿ**=ಕೆಂಜ್ವಾಲೆಯು, **ಹೊಗರೆದ್ದು**=ಸರ್ವತ್ರ ವ್ಯಾಪಿಸಿ, **ಉಬ್ಬಸ ರವಿಗಾಗೆ**=ಜ್ವಾಲೆಯ ಉರಿಯಿಂದುಂಟಾದ ಹೊಗೆಯಿಂದ ಸೂರ್ಯನು ಉಬ್ಬಸಪಡುತ್ತಿರಲು, **ಆಬ್ಧಿಜ**=ಕ್ಷೀರ ಸಾಗರದಲ್ಲಿ ಉತ್ಪನ್ನನಾದ ಚಂದ್ರನು, **ಅಬ್ಧಿ**=ಸಮುದ್ರವು, **ಸಮಿವುಕ್ಕಿ**=ಮೇರೆ ಮೀರಿ ಹೊರ ಚೆಲ್ಲುತ್ತಿರಲು, **ಅಬ್ಜ ಭವಾದಿಗಳು**=ಬ್ರಹ್ಮರುದ್ರಾದಿಗಳು, **ತಬ್ಬಿಬ್ಬು ಗೊಂಡರು**=ಕಂಗಾಲಾಗುತ್ತಿರಲು, **ನಭದ ಗುಳಿಯು**=ಆಕಾಶದ ಮುಚ್ಚಳವು ಬಿಚ್ಚುತ್ತಿರಲಾಗಿ, **ಅವ್ಯಾಕೃತಾಕಾಶ ಪರಿಯಂತ**=ಉಂಟಾದ ಭೀಕರ ಶಬ್ದವು ಅವ್ಯಾಕೃತಾಕಾಶ ಪರ್ಯಂತ ವ್ಯಾಪಿಸಿತು, **ನಿಚ್ಚರ**= ನಿರ್ಭರ, **ಜಜ್ಜರಿಸೆ**=ತತ್ತರಿಸುತಿರಲು, **ಒಬ್ಬರಿಗೊಳಿವಲ್ಲದ**=ಒಬ್ಬರ ಅಧೀನನೂ ಅಲ್ಲದ, ಸರ್ವ ತಂತ್ರ ಸ್ವತಂತ್ರನಾದ, **ಇಬ್ಬಗೆಯಾಗೆ**= ಕಂಭವನ್ನು ಎರಡಾಗಿ ಸೀಳಿಕೊಂಡು, **ಪೂರವಂಟಿ**=ಪ್ರತ್ಯಕ್ಷನಾದ.

**ಘುಡಿ ಘುಡಿಸುತ**=ಆರ್ಭಟಿಸುತ್ತಾ, **ಗಿರಿಗೆ ಬಂದು ಹೊಡೆದಂತೆ** =ಕೋಟಿ ಸಿಡಿಲುಗಳು ಒಂದೇ ಬಾರಿಗೆ ಪರ್ವತಕ್ಕೆ ಬಂದು ಅಪ್ಪಳಿಸುತ್ತಾ, **ಚೀರಿ**=**ಚೀರುತ್ತಾ**, **ಬೊಬ್ಬಿಡುತಲಿ**=ಕೂಗಾಡುತ್ತಾ, **ಲಂಘಿಸಿ**=

ಒಂದೇ ನೆಗೆತಕ್ಕೆ ಹಾರುತ್ತಾ, **ಹಿಡಿದು ರಕ್ಕಸನ** = ರಕ್ಕಸೇಂದ್ರನಾದ ಹಿರಣ್ಯ ಕಶಿಪುವನ್ನು ಮುಂದಲೆ ಹಿಡಿದು ಎಳೆದುಕೊಂಡು, **ಕೆಡೆಹಿ** = ಕೆಳಗೆ ಬೀಳಿಸಿ, **ಮುಡಿಯ ತುಡುಕಿ** = ತಲೆಯ ಕೂದಲನ್ನು ಹಿಡಿದೆಳೆದು, **ಹೇರೊಡಲ** = ರಾಕ್ಷಸನ ಭಾರಿ ಉದರವನ್ನು, **ಕೂರುಗುರಿಂದ** = ತೀಕ್ಷ್ಣವಾದ ತನ್ನ ಉಗುರಿನ ತುದಿಗಳಿಂದ, (ನಖಾಗ್ರ), **ಪಡುವಲಗಡಿಯ** = ಪಶ್ಚಿಮದ ದಿಕ್ಕಿನಲ್ಲಿ, **ಕಡೆಯ ತರಣಿಯ ನೋಡಿ** = ಅಸ್ತಮಿಸುತ್ತಿರುವ ಸೂರ್ಯ-ನನ್ನು ನೋಡುತ್ತಾ, **ಕಡುಗೋಪದಲಿ** = ತೀವ್ರವಾದ ಕ್ರೋಧದಿಂದ, **ರಕ್ಕಸನ್ನ ಸದೆ ಬಡಿದು** = ರಕ್ತವನ್ನು ಕಾರುತ್ತಿರುವ ರಾಕ್ಷಸನನ್ನು ನೆಲಕ್ಕೆ ಅಪ್ಪಳಿಸಿ, **ನಿಡುಗರುಳನು** = ರಾಕ್ಷಸನ ಕರುಳನ್ನು, **ಕೊರಳಡಿಯಲಿ ಧರಿಸಿದ** = ಮಾಲಾ ರೂಪದಲ್ಲಿ ತನ್ನ ಕಂಠದಲ್ಲಿ ಧರಿಸಿದ, **ಸಡಗರದ ದೈವ** = ವೈಭವದ ಮೂರ್ತಿ, **ಕಡುಗಲಿ** = ನರಶಾರ್ದೂಲನಾದ, **ಭೂರ್ಭುವ** = ಗಾಯತ್ರೀ ವ್ಯಾಹೃತೀ ಪ್ರತಿಪಾದ್ಯನಾದ ವಿಜಯವಿಠ್ಠಲಾಭಿನ್ನ ಶ್ರೀ ಲಕ್ಷ್ಮೀನರಸಿಂಹನು, **ಪಾಲ್ಗಡಲೊಡೆಯ** = ಕ್ಷೀರಸಾಗರ ಸ್ವಾಮಿ, **ಶರಣರ ವಡವೆ** = ಶರಣಾಗತರಾದ ಭಕ್ತರ ಜನರ ಅಲಂಕಾರ ರೂಪನಾದ, **ಒಡ ನೊಡನೆ** = ತ್ವರೆಯಿಂದ.

**ಉರಿಮುಸಗಿ** = ನರಸಿಂಹನ ಕೋಪದ ಜ್ವಾಲೆಯು ಸರ್ವತ್ರ ಅಡರಿತು, **ಚತುರ್ದಶ ತಲ್ಲಣಿಸಲು** = ಹದಿನಾಲ್ಕು ಲೋಕಗಳೂ ತಲ್ಲಣಿಸುತಿರಲು, **ಪರಮೇಷ್ಟಿ** = ಬ್ರಹ್ಮದೇವರು, **ಹರಸುರರು** = ರುದ್ರಾದಿ ದೇವತೆಗಳು **ಸಿರಿದೇವಿಗೆ ಮೊರೆಯಿಡಲು** = ಶ್ರೀಲಕ್ಷ್ಮೀದೇವಿಗೆ ಮೊರೆ ಇಡಲಾಗಿ, **ತನ್ನ ಶರಣನ ಸಹಿತ** = ತನಗೆ ಶರಣಾಗತನಾದ ಬಾಲಕ ಪ್ರಹ್ಲಾದನೊಡಗೂಡಿ, **ಹಗಹಿಂದಿ ದಯವನ್ನು** = ನಿನ್ನ ಕರುಣೆಯನ್ನು ಪ್ರಸರಿಸಿದೆ, **ಸುರರು ಕುಸುಮವರುಷ ಗರೆಯಲು** = ದೇವತೆಗಳು ಶ್ರೀ ನರಸಿಂಹನ ಮೇಲೆ ಪುಷ್ಪ ವೃಷ್ಟಿಯನ್ನು ಕರೆಯಲು, **ಭೇರಿವಾದ್ಯ** = ನಗಾದಿಗಳ ಶಬ್ದ ಕಿವಿಗಚ್ಚು-ತ್ತಿರಲು, **ವಾಲಗ** = ಸಕಲ ದೇವತಾವರ್ಗದಿಂದ ಸೇವೆ ಕೈಗೊಳ್ಳುತ್ತಾ, **ಸುರರುಪದ್ರ ಹರಿಸಿ** = ದೇವತೆಗಳಿಗೆ ಬಂದ ವಿಪತ್ತನ್ನು ಪರಿಹಾರಮಾಡಿ, **ಬಾಲನ್ನ ಕಾಯ್ದು** = ಬಾಲಕ ಪ್ರಹ್ಲಾದನನ್ನು ಸಂರಕ್ಷಿಸಿದೆ, **ಪರದೈವ** =

ಸರ್ವೋತ್ತಮನಾದ, **ಗಭೀರಾತ್ಮ** = ಅಪಾರ ಮಹಿಮಾತ್ಮನಾದ ಶ್ರೀ ಪರಮಾತ್ಮನೇ, **ನಿನ್ನ ಚರಿತೆ ದುಷ್ಟರಿಗೆ ಭೀಕರವೋ** = ನಿನ್ನ ಲೀಲಾ ಪೂರ್ಣವಾದ ಕಥೆ ದುಷ್ಟರಾದ ದಾನವರಿಗೆ ಅತ್ಯಂತ ಭಯಂಕರವು, **ಸಜ್ಜನ ಪಾಲ** = ಸಜ್ಜನರನ್ನು ಸಂರಕ್ಷಿಸುವ ಶ್ರೀ ಪರಮಾತ್ಮ.

**ಪ್ರಹ್ಲಾದವರದ** = ಪ್ರಹ್ಲಾದನನ್ನು ಅನುಗ್ರಹಿಸಿದ ದೈವ ಶ್ರೀ ನರಸಿಂಹ, **ಪ್ರಪನ್ನ ಕ್ಲೇಶಭಂಜನ** = ಶರಣಾಗತರಾದವರ ದುಃಖ ಪರಿಹಾರಕನು, **ಮಹ** = ಅತ್ಯಂತ ಶ್ರೇಷ್ಠ ವಸ್ತು, **ಹಂಸ** = ಭಕ್ತರ ಸಂಸಾರಾಖ್ಯವಾದ ಬಂಧವನ್ನು ಪರಿಹರಿಸುವ ಸಕಲ ದುರಿತ ಪರಿಹಾರಕ ಭಗವದ್ರೂಪ, **ನರಮೃಗರೂಪ** = ನರಸಿಂಹ ರೂಪಾತ್ಮಕನು.



## ೨೮

### (ಗೋಪಾಲವಿಠ್ಠಲಾಂಕಿತ)

**ರಾಗ–ಮುಖಾರಿ** **ಆದಿತಾಳ**

ಕಾಯೋ ಶ್ರೀ ನಾರಸಿಂಹ-ಕಾಯೋ ಜಯ ನಾರಸಿಂಹ ॥ ॥ಪ॥

ಕಾಯೋ ಶ್ರೀ ನಾರಸಿಂಹ ತ್ರ್ಯಂಬಕಾದ್ಯಮರೇಶ
ಭಯಾಂಧತಿಮಿರ ಮಾರ್ತಾಂಡ ಶ್ರೀ ನಾರಸಿಂಹ ॥ ॥ಅ॥

ಘೋರ ಅಕಾಲಮೃತ್ಯು ಮೀರಿ ಬರಲು ಕಂಡು
ಧೀರ ನೀ ಬಿಡಿಸದಿನ್ನಾರೋ ಶ್ರೀ ನಾರಸಿಂಹ ॥ ॥೧॥

ಧಿಷಣನೆ ಸುಭದ್ರ ಘೋರ ಮೃತ್ಯುವಿಗೆ ಮೃತ್ಯು
ಸುಷುಮ್ನಾನಾಡಿಸ್ಥಿತ ವಿಭುವೆ ಶ್ರೀ ನಾರಸಿಂಹ ॥ ॥೨॥

ಜ್ಞಾನರಹಿತನಾಗಿ ನಾ ನಿನ್ನ ಮರೆತರೆ
ನೀನು ಮರೆತಿದ್ದೇಕೊ ಪೇಳೋ ಶ್ರೀ ನಾರಸಿಂಹ ॥ ॥೩॥

ಪ್ರಬಲೋತ್ತಮನೆನಿಸಿ ಅಬಲರ ಕಾಯದಿರೆ
ಸುಬಲರು ಕಂಡು ಮೆಚ್ಚುವರೆ ಶ್ರೀ ನಾರಸಿಂಹ ॥ ॥೪॥

ಪಾಲಮುನ್ನೀರಾಗಾರ ಪದುಮ ಮನೋಹರ
ಗೋಪಾಲವಿಠ್ಠಲ ಜಗತ್ಪಾಲ ಶ್ರೀ ನಾರಸಿಂಹ ॥ ॥೫॥



**ಅರ್ಥವಿವರಣೆ :**

ಶ್ರೀ ಗೋಪಾಲದಾಸವರ್ಯರಿಂದ ರಚಿತವಾದ ಶ್ರೀ ಲಕ್ಷ್ಮೀನರಸಿಂಹ ದೇವರ ಪರವಾದ ಈ ಕೀರ್ತನ ಸಾಹಿತ್ಯವು ಪರಮ ಮಂಗಳ ಪ್ರದವು. ಮೃತ್ಯು ಪರಿಹಾರಕ ಮಂತ್ರ ಸಿದ್ಧವಾದ ಕೀರ್ತನೆಯು. ಸಕಲ ದುರಿತ ಪರಿಹಾರಕ ರೂಪ ಶ್ರೀ ನಾರಸಿಂಹ ರೂಪ.

**ಕಾಯೋ** = ಸಜ್ಜನರನ್ನು ಸಕಲ ವಿಪತ್ತುಗಳಿಂದ ಸಂರಕ್ಷಿಸು, **ಜಯ** = ನಮಗೆ ಸುಮುಖನಾಗು. ಜಯಪ್ರದನಾಗು.

**ತ್ರ್ಯಂಬಕಾದಿ ಅಮರೇಶ** = ತ್ರಿನೇತ್ರನಾದ ರುದ್ರ ಮೊದಲಾದ ದೇವತೆಗಳಿಗೆ ಪ್ರಭುವು (ತ್ರಿ + ಅಂಬಿಕ–ಮೂಗಣ್ಣನಾದ ರುದ್ರ), ರುದ್ರ ದೇವರ ಅಂತರ್ಗತ ಭಗವದ್ರೂಪ ಶ್ರೀ ಸಂಕರ್ಷಣಾಭಿನ್ನ ಶ್ರೀ ಲಕ್ಷ್ಮೀ ನರಸಿಂಹನು, **ಭಯಾಂಧಂತಿಮಿರ** = ಭಯ (ವಿಪತ್ತು-ದುರಿತಗಳು)ವೆಂಬ ದಟ್ಟವಾದ ಕತ್ತಲೆಗೆ, **ಮಾರ್ತಾಂಡ** = ಸೂರ್ಯ ಸದೃಶನೇ, (ಶ್ರೀ ನರಸಿಂಹನ ದರ್ಶನ ಮಾತ್ರದಿಂದ ಸಕಲ ದುರಿತಗಳು ಓಡಿ ಹೋಗುವುವು).

**ಘೋರ** = ಭಯಂಕರವಾದ, **ಅಕಾಲ ಮೃತ್ಯು** = ಅಕಾಲ ಮರಣವು, **ಮೀರಿ ಬರಲು** = ಆಯುಸ್ಸನ್ನು ಅತಿ ಕ್ರಮಿಸಿ ಬರುತ್ತಿರಲಾಗಿ, **ಧೀರ** = ಅಸಮ ಪರಾಕ್ರಮಿ.

**ಧಿಷಣನೆ** = ಸರ್ವಜ್ಞನೇ (ಜ್ಞಾನ ಸ್ವರೂಪನು), **ಸುಭದ್ರ** = ಪರಮ ಮಂಗಳರೂಪ, **ಘೋರ ಮೃತ್ಯುವಿಗೆ ಮೃತ್ಯು** = ಭಯಂಕರವಾದ ಮೃತ್ಯು ದೇವತೆಗಳಿಗೆ ಮೃತ್ಯು ಸ್ವರೂಪನು. (ಮಮ, ರುದ್ರಾದಿಗಳಿಗೂ ಸಹ ಮೃತ್ಯು ಸ್ವರೂಪನು), **ಸುಷುಮ್ನಾ ನಾಡೀಸ್ಥಿತ** = ತುಂದೆಯಿಂದ ಬ್ರಹ್ಮ ರಂಧ್ರ ಪರ್ಯಂತ ನೇರವಾಗಿ ವ್ಯಾಪಿಸಿರುವ ಬ್ರಹ್ಮನಾಡಿಯಲ್ಲಿ ಇರುವ), ಈ ಕಾರಣದಿಂದಲೇ ಬ್ರಹ್ಮ ಜ್ಞಾನಿಗಳನ್ನು ಪ್ರಾಣ ವಾಯುವನ್ನು ಸುಷುಮ್ನಾನಾಡಿಯ ದ್ವಾರಾ ಬ್ರಹ್ಮ ರಂಧ್ರಕ್ಕೆ ತಂದು ಶರೀರವನ್ನು ಬಿಡುವರು, **ವಿಭುವೆ** = ಸರ್ವತ್ರ ವ್ಯಾಪ್ತನಾದ ಹರಿಯೇ.

**ಜ್ಞಾನರಹಿತನಾಗಿ** = ಅಜ್ಞಾನ ವಶನಾಗಿ, **ನಾ ನಿನ್ನ ಮರೆತರೆ** = ನಿನ್ನ ಸ್ಮರಣೆ ಮಾಡದೇ, ಮರೆತರೆ, **ನೀನು ಮರೆತದ್ದೇಕೋ** = ಸರ್ವಜ್ಞನಾದ, ಸಕಲ ಜೀವರ ಪರಿಪಾಲಕನಾದ ನೀನು ನನ್ನನ್ನು ಏಕೆ ಮರೆತೆ ? ಹೇಳು-ಎಂದು ಪ್ರಶ್ನಾರ್ಥರೂಪದಲ್ಲಿ ಶ್ರೀ ನರಸಿಂಹನನ್ನು ಪ್ರಾರ್ಥಿಸು-ತ್ತಾರೆ.

**ಪ್ರಬಲೋತ್ತಮನೆನಿಸಿ** = ಬಲಿಷ್ಠರಲ್ಲಿ ಬಲಿಷ್ಠತಮನೆಂದು (ಸರ್ವ-ಶಕ್ತನಾದ) ನೀನು ಕರೆಯಿಸಲ್ಪಡುತ್ತೀಯೆ, **ಅಬಲರ** = ತಮ್ಮನ್ನೇ ರಕ್ಷಿಸಿ-ಕೊಳ್ಳಲು ಅಶಕ್ತರಾದ, ಅಲ್ಪಶಕ್ತಿ, ಅಲ್ಪಸಾಮರ್ಥ್ಯವುಳ್ಳ ನಮ್ಮಂತಹ ಜೀವರನ್ನು, **ಕಾಯದಿರೆ** = ಸಂರಕ್ಷಿಸದಿದ್ದರೆ, **ಸುಬಲರು** = ಜ್ಞಾನಿಗಳು (ಜ್ಞಾನಬಲವುಳ್ಳವರು), **ಮೆಚ್ಚುವರೆ** = ನಿನ್ನನ್ನು ಒಪ್ಪುವರೇ ? ಇಲ್ಲಿ ಶ್ರೀ ಪರಮಾತ್ಮನ ಶರಣಾಗತ ವಾತ್ಸಲ್ಯವನ್ನು ಎತ್ತಿ ಹಿಡಿದಿದ್ದಾರೆ ದಾಸಾರ್ಯರು.

**ಪಾಲಮುನ್ನೀರಾಗಾರ** = ಕ್ಷೀರಸಾಗರ ನಿವಾಸಿಯಾದ ಶ್ರೀಹರಿಯೇ, (ಪಾಲ = ಕ್ಷೀರ ಮುನ್ನೀರ = ಸಮುದ್ರ, ಆಗಾರ = ಆವಾಸಸ್ಥಾನ), **ಪದುಮ ಮನೋಹರ** = ಶ್ರೀ ಲಕ್ಷ್ಮೀದೇವಿಯರ ಮನೋಪಹಾರಕನೇ, **ಜಗತ್ಪಾಲ** = ಜಗದ್ರಕ್ಷಕನಾದ ಶ್ರೀ ನಾರಸಿಂಹನೇ.

**ವಿಶೇಷ ವಿಷಯ :–**

(1) ಮಹಾಪ್ರಳಯ ಕಾಲದಲ್ಲಿ ಶ್ರೀ ಪರಮಾತ್ಮನು ಶ್ರೀ ನರಸಿಂಹ ರೂಪದಿಂದ ರುದ್ರಾಂತರ್ಗತನಾಗಿ ವಿದ್ಯಮಾನನಾಗಿದ್ದು, ತನ್ನಿಂದ ಸೃಷ್ಟಿತ ವಾದ ಸಮಸ್ತ ಜಗತ್ತನ್ನೂ ಲಯ ಗೊಳಿಸುವನು ಶ್ರೀ ನಾರಸಿಂಹನೇ ಲಯ ಕಾರಕನು. ಅಂತಹ ಲಯಕ್ಕೆ ಕಾರಣನಾದ ನೀನು ಪಾಲಕನಾಗೆಂದು ಪ್ರಾರ್ಥಿಸುವ ವೈಖರಿ ಎಷ್ಟು ಚೆನ್ನ !

(2) "ಹರಿ"-ಎಂಬ ಶಬ್ದಕ್ಕೆ ಸಕಲ ಪಾಪಪರಿಹಾರಕನೆಂದರ್ಥ. ನರಸಿಂಹ ರೂಪವು ಸಕಲ ದುರಿತ ಪರಿಹಾರ ಭಗವದ್ರೂಪವು. "ಹರಿ"- ಶ್ರೇಷ್ಠತ್ವವಾದವುವು. ಹಾಗೆಯೇ "ನರಸಿಂಹ" ಪದವು ಸರ್ವೋತ್ತಮತ್ವ ಮತ್ತು ಶ್ರೇಷ್ಠತೆಯನ್ನು ತೋರಿಸುವುದು.



## ೨೯

### (ಜಗನ್ನಾಥವಿಠ್ಠಲಾಂಕಿತ)

**ರಾಗ–ಸಾವೇರಿ** **ಆದಿತಾಳ**

ನಮೋ ನಮಸ್ತೇ ನರಸಿಂಹ ದೇವಾ
ಸ್ಮರಿಸುವವರ ಕಾವಾ ॥ ॥ಪ॥

ಸುಮಹಾತ್ಮ ನಿನಗೆಣೆ ಲೋಕದೊಳಾ ವಾ-ತ್ರಿಭುವನ ಸಂಜೀವಾ
ಉಮೆಯರಸನ ಹೃತ್ಕಮಲ ದ್ಯುಮಣಿ ಮಾ-
ರಮಣ ಕನಯ ಸಂಯಮಿ ವರವರದಾ ॥ ॥ಅ

ಕ್ಷೇತ್ರಜ್ಞ ಕ್ಷೇಮ ಧಾಮ-ಭೂಮಾ-ದಾನವ ಕುಲಭೀಮಾ
ಗಾತ್ರ ಸನ್ನುತ ಬ್ರಹ್ಮಾದಿ ಸ್ತೋಮ-ಸನ್ಮಂಗಳ ನಾಮಾ

ಚಿತ್ರ ಮಹಿಮ ನಕ್ಷತ್ರನೇಮಿಸ-
ರ್ವತ್ರ ಮಿತ್ರ ಸುಚರಿತ್ರ ಪವಿತ್ರ ॥ ॥೧॥

ಅಪರಾಜಿತ ಅನಘ–ಅನಿರ್ವಿಣ್ಣ-ಲೋಕೈಕ ಶರಣ್ಯ
ಶಫರಕೇತು ಕೋಟಿ ಲಾವಣ್ಯ-ದೈತ್ಯೇಂದ್ರ ಹಿರಣ್ಯ ಕ-
ಶಿಪು ಸುತನ ಕಾಯ್ದೆ ಪೇನೆಸುತಲಿ ನಿ-
ಷ್ಕಪಟ ಮನುಜ ಹರಿ ವಪುಷ ನೀನಾದೆ ॥ ॥೨॥

ತಪನಕೋಟಿ ಪ್ರಭಾವ ಶರೀರಾ–ದುರಿತೌಘ ವಿದೂರಾ
ಪ್ರಪಿತಾಮಹ ಮಂದಾರ-ಖಳವಿಪಿನ ಕುಠಾರಾ
ಕೃಪಣ ಬಂಧು ತವ ನಿಪುಣತನಕೆ ನಾ
ನುಪಮೆಗಾಣೆ ಕಾಶ್ಯಪಿವರವಹನಾ ॥ ॥೩॥

ವೇದ ವೇದಾಂಗ ವೇದ್ಯಾ–ಸಾಧ್ಯ–ಅಸಾಧ್ಯ
ಶ್ರೀ ದ ಮುಕ್ತಾ ಮುಕ್ತ ರಾರಾಧ್ಯಾ–ಅನುಪಮ ಅನ-
ವದ್ಯ ಮೋದಮಯನೆ ಪ್ರಹ್ಲಾದವರದ ನಿ-
ತ್ಯೋದಯ ಮಂಗಳ ಪಾದ ಕಮಲರೆ ॥ ॥೪॥

ಅನಿಮಿತ್ತ ಬಂಧು ಜಗನ್ನಾಥವಿಠ್ಠಲ–ಸಾಂಪ್ರತ
ನಿನಗೆ ಬಿನ್ನೈಸುವೆ-ಎನ್ನಯ ಮಾತಾ-ಲಾಲಿಸುವುದು ತಾತಾ
ಗಣನೆಯಿಲ್ಲದವ ಗುಣವೆನಿಸಿದೆ ಪ್ರತಿ-
ಕ್ಷಣಕೆ ಕಥಾಮೃತ ಉಣಿಸು ಕರುಣದಿ ॥ ॥೫॥



**ಅರ್ಥವಿವರಣೆ :**

**ಗರುಡವಾಹನ ಶ್ರೀ ಲಕ್ಷ್ಮೀನರಸಿಂಹ ದೇವರು** ಶ್ರೀ ಜಗನ್ನಾಥ ದಾಸರಾಯರ ಕುಲದೈವ ಮತ್ತು ಇಷ್ಟ ದೈವನು.

**ನಮೋ ನಮಸ್ತೇ** = ಪುನಃ ಪುನಃ ನಿನಗೆ ನಮಸ್ಕಾರವು, **ಸ್ಮರಿಸು-ವವರ ಕಾವಾ** = ದುರಿತ ಪರಿಹಾರಕನಾದ ಶ್ರೀ ಲಕ್ಷ್ಮೀನರಸಿಂಹ ದೇವರ ಸ್ಮರಣೆ ಪರಮ ತಾರಕವು.

**ಸುಮಹಾತ್ಮ** = ಸಮಾನರಾದವರು ಅಪಾರ ಮಹಿಮಾ ಸಂಪನ್ನನು, **ನಿನಗಣೆ** - ನಿನಗೆ ಲೋಕದೊಳಾವ-ಮೂರುಲೋಕಗಳಲ್ಲೂ ಯಾರಿದ್ದಾರೆ ! **ಮನ್ಮನದೊಳು** = ನನ್ನ ಮನಸ್ಸಿನಲ್ಲಿ,**ಅನುದಿನ** ಪ್ರತಿನಿತ್ಯವೂ(ನಿರಂತರ), **ಪ್ರಕಾಶಿಸು** = ಸರ್ವ ವಿಘ್ನ ಪರಿಹಾರಕನಾಗಿ ವಿದ್ಯಮಾನನಾಗಿರು,**ಪ್ರೇಮಾತಿಶಯದಿಂದ** = ಅತ್ಯಂತ ಭಕ್ತಿ ಭಾವದಿಂದ, **ಪ್ರಾರ್ಥಿಸುವೆ** = ಪ್ರಾರ್ಥನಾ ಮಾಡುತ್ತೇನೆ, **ಕೈಪಿಡಿದು** = ನಮ್ಮ ಕೈ ಹಿಡಿದು (ಕರಾವಲಂಬನ ದ್ವಾರಾ,**ಎಮ್ಮನು** = ನಮ್ಮಗಳನ್ನು (ಇದರಿಂದ ಸಕಲ ಸಜ್ಜನರನ್ನೂ-ಎಂದುಗ್ರಾಹ್ಯ). **ಉದ್ಧರಿಸು** ಉದ್ಧಾರಮಾಡು.

**ಕ್ಷೇತ್ರಜ್ಞ** = ಸ್ಥೂಲದೇಹದಲ್ಲಿ ವಿದ್ಯಮನನಾದ ಬಿಂಬಮೂರ್ತಿ. (ಕ್ಷೇತ್ರ-ಸಾಧನ ಶರೀರವಾದ ಈ ಸ್ಥೂಲದೇಹ), **ಕ್ಷೇಮ ಧಾಮ** = ವೈಕುಂಠ-ಅನಂತಾಸನ-ಶ್ವೇತದ್ವೀಪಗಳೆಂಬ ಮುಕ್ತಿ ಧಾಮತ್ರಯಗಳಲ್ಲಿ ವಾಸಿಸುವವನೇ (ಕ್ಷೇಮ-ಜೀವರ ಸ್ವರೂಪಾನಂದಾ ವಿರ್ಭಾವರೂಪವಾದ ಮುಕ್ತಿ), **ಭೂಮಾ** = ಸಕಲ ವಿಧಗಳಲ್ಲಿಯೂ ಪರಿಪೂರ್ಣನು, **ದಾನವ ಕುಲ ಭೀಮಾ** = ದೈತ್ಯರ ಕುಲಕ್ಕೆ ಭಯಂಕರ ಸ್ವರೂಪನು. (ದಾನವಾದಿ), **ಗಾತ್ರ ಸನ್ನುತ ಬ್ರಹ್ಮಾದಿ ಸ್ತೋಮಾ** = ಪೂರ್ಣಜ್ಞಾನಾನಂದಮಯ-ನಾದ ನಿನ್ನನ್ನು ಸದಾ ಸಂಸ್ತುತಿಸುತ್ತಿರುವ ಬ್ರಹ್ಮಾದಿ ದೇವತಾಸಮೂಹ-ವುಳ್ಳವನೇ, **ಸನ್ಮಂಗಳ ನಾಮಾ** ಶ್ರವಣ ಮಂಗಳ ನಾಮಧೇಯನು. (ಶ್ರೀ ನರಸಿಂಹನ ನಾಮಸ್ಮರಣೆ ಸಮಸ್ತ ಮಂಗಳ ಪ್ರದವು), **ಚಿತ್ರ ಮಹಿಮ** = ಚಿತ್ರ ವಿಚಿತ್ರವಾದ ಅತ್ಯಾಶ್ಚರ್ಯ ಮಹಿಮಾ ಸಂಪನ್ನನು, **ನಕ್ಷತ್ರ ನೇಮಿ** = ಶ್ರೀ ವಿಷ್ಣುವಿನ ಹೆಸರು, **ಸರ್ವತ್ರ ಮಿತ್ರ** = ಸಚ್ಚೇತನರ ಮಿತ್ರ (ಆಪ್ತ ಬಂಧು), **ಸುಚರಿತ್ರ** = ಸಮೀಚೀನವಾದ ನಿರ್ದೋಷವಾದ

ಚಾರಿತ್ರ್ಯವುಳ್ಳವನು, **ಪವಿತ್ರ** = ಪಾವನಕೆ ಪಾವನನು (ಅತ್ಯಂತ ಪವಿತ್ರ ವಸ್ತು).

**ಅಪರಾಜಿತ** = ಯಾರಿಂದಲೂ ಜಯಿಸಲು ಅಸಾಧ್ಯನು(ಅಜೇಯನು), **ಅನಘ** = ಸಮಸ್ತ ದೋಷವಿದೂರನು. (ಅವನ ಸ್ಮರಣೆ ಮಾತ್ರದಿಂದ ಸಕಲ ಪಾಪ ಪರಿಹಾರವು), **ಅನಿರ್ವಿಣ್ಣ** = ಎಂದೆಂದಿಗೂ ಶಕ್ತಿ ಗುಂದದ ಅಸಮ ಪರಾಕ್ರಮಿ, **ಲೋಕೈಕ ಶರಣ್ಯ** = ಸಕಲ ಲೋಕದ ಜನರಿಂದ ಶರಣ್ಯನು, **ಶಫರ ಕೇತು** = ಮೀನ ಕೇತನನಾದ ಮನ್ಮಥ. (ಶಫರ-ಮೀನು, ಕೇತು-ಧ್ವಜ), **ಕೋಟಿ ಲಾವಣ್ಯ** ಕೋಟಿ ಮನ್ಮಥ ಲಾವಣ್ಯನು, **ದೈತ್ಯೇಂದ್ರ** = ದಾನವಾಧಿಪತಿಯಾದ ಹಿರಣ್ಯ ಕಶಿಪು, **ಸುತನ ಕಾಯ್ದೆ** = ಬಾಲಕ ಪ್ರಹ್ಲಾದನನ್ನು ಸಂರಕ್ಷಿಸಿದ ಪ್ರಹ್ಲಾದವರದನು, **ನಿಷ್ಕಪಟ** = ಬಾಲಕ ಪ್ರಹ್ಲಾದನನ್ನು ಸಂರಕ್ಷಿಸಬೇಕೆಂಬ ಉದ್ದೇಶದಿಂದ ನಿರ್ದೋಷನಾದ ನೀನು (ಸತ್ಯಂ ವಿಧಾತುಂ), **ಮನುಜ ಹರಿ** = ನರಸಿಂಹ ರೂಪೀ (ಹರಿ-ಸಿಂಹ ಮನುಜ-ಮಾನವ ಈ ಶಬ್ದ ತ್ರಯಾಗದ ವ್ಯತ್ಯಾಸದ ಚಮತ್ಕಾರ ಗಮನೀಯ), **ವಪುಷ ನೀನಾದೆ** = ದೇಹವನ್ನು (ಅವತಾರವನ್ನು) ನೀ ತಾಳಿದೆ.

**ತಪನ ಕೋಟಿ ಪ್ರಭಾವ ಶರೀರಾ** = ಕೋಟಿ ಸೂರ್ಯ ಪ್ರಭಾವನ್ವಿತರಾದ ದೇಹವುಳ್ಳವನು. (ತಪನ–ಸೂರ್ಯ–ಪ್ರಭಾವ–ಕಾಂತಿಯುಳ್ಳ), **ದುರಿತೌಘ ವಿದೂರಾ** = ಪಾಪಗಳ ಸಮೂಹಗಳಿಂದ ದೂರನಾದವನು ದುರಿತ–ಪಾಪಗಳು-ಓಘ-ಸಮೂಹ), **ಪ್ರಪಿತಾಮಹ** = ಬ್ರಹ್ಮದೇವರ ತಂದೆ, **ಮಂದಾರ** = ಭಕ್ತ ಜನರಿಗೆ ಕಲ್ಪವೃಕ್ಷ ಸದೃಶನು, **ಖಳವಿಪಿನ ಕುಠಾರಾ** = ದೈತ್ಯರೆಂಬ ಅರಣ್ಯಕ್ಕೆ ಕುಠಾರ (ಗಂಡುಗೊಡಲಿ) ಸದೃಶನು, **ಕೃಪಣ ಬಂಧು** = ದೀನಜನರ ಬಂಧು, **ತವ ನಿಪುಣತನಕೆ** = ನಿನ್ನ ಅತ್ಯದ್ಭುತ ಕೌಶಲ್ಯಕ್ಕೆ, **ಉಪಮೆಗಾಣೆ** = ಸರಿಸಮಾನವಾಗಿರುವುದು ನಾವೆಲ್ಲಿಯೂ ಅರಿಯೆ, **ಕಾಶ್ಯಪಿವರವಹನಾ** = ಗರುಡವಾಹನನೆ, (**ಕಾಶ್ಯಪಿ** = **ಕಶ್ಯಪ**

ಮುನಿಗಳಿಂದ ವಿನುತಾ ದೇವಿಯಲ್ಲಿ ಜನಿಸಿದ ಗರುಡದೇವರು-ವರ-ಶ್ರೇಷ್ಠ-ವಹನಾ ವಾಹನ).

**ವೇದ** ಅನಂತಸಾಂತ ವೇದಗಳಿಂದಲೂ, **ವೇದಾಂಗ**=ನಿರುಕ್ತ್ಯಾದಿ ಷಡಂಗಗಳಿಂದಲೂ, **ವೇದ್ಯಾ**=ಚೆನ್ನಾಗಿ ಪ್ರತಿಪಾದ್ಯನಾದವನೇ, **ಸಾಧ್ಯೆ**=ಲಭ್ಯನು, (ಭಕ್ತರಿಂದ), **ಅಸಾಧ್ಯೆ** = ಅಲಭ್ಯನು (ಅಭಕ್ತರಿಂದ), **ಶ್ರೀ ದ**=ಶ್ರೀ ಲಕ್ಷ್ಮೀದೇವಿಯನ್ನು ತನ್ನ ವಕ್ಷದಲ್ಲಿ ಧರಿಸಿರುವವನೇ (ಶ್ರೀ-ಮಂಗಳ–ದ–ಕೊಡುವವನು. ಅಂದರೆ ಮಂಗಳಪ್ರದನು), **ಮುಕ್ತ ಅಮುಕ್ತ ಆರಾಧ್ಯೆ**=ಮುಕ್ತರಿಂದಲೂ ಮತ್ತು ಅಮುಕ್ತರಿಂದಲೂ ಚೆನ್ನಾಗಿ ಪೂಜಿತನು, **ಅನುಪಮ**=ಅಸದೃಶನು (ಸಮಾಭ್ಯಧಿಕ ಶೂನ್ಯನು), **ಅನವದ್ಯ**=ಸಮಸ್ತ ದೋಷವಿದೂರನು, **ನೋದಮಯನೆ**=ಆನಂದ ಪರಿಪೂರ್ಣನೇ, **ಪ್ರಹ್ಲಾದವರದ** ಬಾಲಕ ಪ್ರಹ್ಲಾದನನ್ನು ಅನುಗ್ರಹಿಸಿದ ನರಸಿಂಹನೇ, **ಪಾದಕಮಲಕೆ**=ನಿನ್ನ ಚರಣಾರವಿಂದಗಳಿಗೆ, **ನಿತ್ಯೋದಯ ಮಂಗಳ**=ನಿತ್ಯ ಮಂಗಳವು. ಅಂದರೆ ನಿನ್ನಾಂಘ್ರಿಕ ಮಂಗಳ ಧ್ಯಾನದಿಂದ ನಮಗೆ ಮಂಗಳ ಉಂಟಾಗಲಿ.

**ಅನಿಮಿತ್ತ ಬಂಧು**=ಜೀವರನ್ನು ಎಂದೆಂದಿಗೂ ಬಿಟ್ಟಗಲದ ಪರ–ಮಾಪ್ತ ಬಾಂಧವನಾದ ಬಿಂಬಮೂರ್ತಿ, **ಸಾಂಪ್ರತ**=ಸಧ್ಯದಲ್ಲಿ (ಈಗ), **ನಿನಗೆ ಬಿನ್ನೈಸುವೆ**=ನಿನ್ನ ಸನ್ನಿಧಾನಕ್ಕೆ ಬಿನ್ನಹ ಮಾಡಿಕೊಳ್ಳುತ್ತೇನೆ, **ತಾತಾ**=ಜಗಜ್ಜನಕನೇ ನನ್ನ ಮೊರೆಯನ್ನು ಲಾಲಿಸು, **ಗಣನೆಯಿಲ್ಲದವ** = ಅಗಣಿತನು (ಅಪ್ರಮೇಯನು), **ಗುಣವೆನಿಸಿದ** = ಅಗಣಿತ ಗುಣಗಣ ಧಾಮನೆನಿಸಿರುವೆ, **ಕಥಾಮೃತ** ಭಗವದ್ವಿಷಯವಾದ ಕಥಾ ಸುಧೆ-ಯನ್ನು, **ಉಣಿಸು**=ನಿರಂತರದಿ, ದಯದಿಂದ ಪಾನಮಾಡಿಸೆಂದು ಶ್ರೀ ನಾರಸಿಂಹನನ್ನು ದಾಸಾರ್ಯರು ಪ್ರಾರ್ಥಿಸಿದ್ದಾರೆ.



## ೩೦

### (ಶ್ರೀಜಗನ್ನಾಥವಿಠ್ಠಲಾಂಕಿತ)

**ರಾಗ–ಸಾವೇರಿ** **ಝಂಪೆತಾಳ**

ಶ್ರೀ ನಾರಸಿಂಹ ಚಿತ್ಸುಖಮಯ ಕಾಯ ॥ ॥ಪ॥

ದಾನವಾರಣ್ಯ ಪಾವಕ ವೀತಶೋಕ ॥ ॥ಅ॥

ಆನತೇಷ್ಟ ಪ್ರದಾಯಕ ನಮಿಸುವೆನು ಸದಾ
ಪೈನಾಕಿಧರ ಬಿಂಬ ಸುರಮುನಿ ಕದಂಬ
ಧ್ಯಾನಗಮ್ಯನೆ ಭಕ್ತರಾಪತ್ತು ಕಳೆ ಶಕ್ತ
ನೀನೆ ಗತಿ ಎಂಬೆ ಮುನಿಮನವನಜ ತುಂಬಿ ॥ ॥೧॥

ಶ್ರವಣ ಮಂಗಳನಾಮಧೇಯ ನಿರ್ಜಿತಕಾಮ
ಸವನ ದ್ವಿತೀಯರೂಪ ವಿಗತ ಕೋಪ
ಸ್ವವಶ ಸ್ವಾತಂತ್ರ್ಯ ವಿಖನಸ ಪೂಜ್ಯ ವಜ್ರನಖ
ಹವಿ ದಂಷ್ಟ್ರದರ್ಶ ಭಾರ್ಗವಿ ರಮಣಅಶನಾ ॥ ॥೨॥

ಆದಿ ದೇವಾನಂತ ಮಹಿಮನೇ ನಿಶ್ಚಿಂತ
ಕಾದುಕೋ ನಿನ್ನವರ ವಿಬುಧ ಪ್ರವರಾ
ಮೋದಮಯ ಶ್ರೀಜಗನ್ನಾಥವಿಠ್ಠಲರೇಯ
ವೈದಿಕವ ನಡಿಸು ಲೌಕೀಕ ಮಾರ್ಗವ ಬಿಡಿಸು ॥ ॥೩॥



**ಅರ್ಥವಿವರಣೆ :**

**ಚಿತ್ಸುಖಮಯ** = ಜ್ಞಾನಾನಂದ ಸ್ವರೂಪಿ, **ಕಾಯ** = ದೇಹ-ವುಳ್ಳವನು ಶ್ರೀ ಪರಮಾತ್ಮನ ಶರೀರವೇ ಜ್ಞಾನಾನಂದಮಯವು, **ದಾನವ ಅರಣ್ಯಪಾವಕ** = ದೈತ್ಯರೆಂಬ ಕಾಡಿಗೆ ಅಗ್ನಿ ಸದೃಶನು, **ವೀತಶೋಕ** = ಹೋಗಲಾಡಿಸಲ್ಪ ಶೋಕ–ಅಂದರೆ ನಿರ್ದುಃಖಿಯು (ಸದಾ ಆನಂದ–ಮಯನು).

**ಆನತೇಷ್ಟಪ್ರದಾಯಕ** = ತನಗೆ ಶರಣಾಗತರಾದವರಿಗೆ ಸಕಲ ಇಷ್ಟಾರ್ಥಗಳನ್ನು ಸಲ್ಲಿಸುವವನು, **ಮೈನಾಕಿಧರ** = ಮೈನಕಾ ಪುತ್ರಿಯಾದ ಪಾರ್ವತಿಯ ಪತಿ ಶಂಕರನ, **ಬಿಂಬ** = ಬಿಂಬಮೂರ್ತಿಯು (ಶ್ರೀ ರುದ್ರ ದೇವರ ಬಿಂಬನು ಶ್ರೀ ನಾರಸಿಂಹನು), **ಸುರಮುನಿ ಕದಂಬ** = ದೇವತೆಗಳು, ಋಷಿಗಳು ಇವರ ಸಮೂಹ (ವರ್ಗ), **ಧ್ಯಾನಗಮ್ಯನೆ** = ಧ್ಯಾನಕ್ಕೆ ವಿಷಯನೇ ತದ್ವಿರಾ ಅವರಿಗೆ ಪ್ರಾಪ್ತನೇ, **ಮುನಿಮನ ವನಜ ತುಂಬಿ** = ಜ್ಞಾನಿಗಳ ಮನಸ್ಸೆಂಬ ಕಮಲಕ್ಕೆ ದುಂಬಿಯಂತಿರುವವನೇ, (ತುಂಬಿ–ದುಂಬಿ).

**ಶ್ರವಣ ಮಂಗಳನಾಮಧೇಯ** = ನಿನ್ನ ನಾಮಸ್ಮರಣೆಯು ಪರಮ ಶುಭಪ್ರದವು, **ನಿರ್ಜಿತಕಾಮ** = ಬಿಡಲ್ಪಟ್ಟ ಕಾಮವುಳ್ಳವನು, ಅಂದರೆ ಅಕಾಮಿ, (ನಿತ್ಯತೃಪ್ತ-ಸ್ವರಮಣ), **ಸವನ ತ್ರಿತಿಯರೂಪ** = ಸವನ–ತ್ರಯಗಳಿಗೆ ಪ್ರತಿಪಾದ್ಯ ರೂಪನೇ (ಪ್ರಾತಃ ಸವನ-ಮಾಧ್ಯಂ ಸವನ–ಸಂಧ್ಯಾಸವನ–ತ್ರಿಕಾಲರೂಪಿ), **ವಿಗತಕೋಪ** = ಹೋಗಲ್ಪಟ್ಟ ಕೋಪ ವುಳ್ಳವನು. ಅಂದರೆ ಪರಮ ಶಾಂತಮೂರ್ತಿ (ಸೌಮ್ಯಸ್ವರೂಪನು). **ಸ್ವವಶ ಸ್ವಾತಂತ್ರ್ಯ** = ತನ್ನ ಸ್ವಾತಂತ್ರ್ಯ ಗುಣವನ್ನು ತನ್ನ ವಶದಲ್ಲಿಯೇ ಇಟ್ಟು ಕೊಂಡಿರುವವನು (ಪರಾಧೀನ ರಹಿತನು), **ವಿಖನಸ ಪೂಜ್ಯ** = ದೇವತೆಗಳಿಂದ ಪೂಜಿತನು, **ವಜ್ರನಖಪವಿ** = ವಜ್ರಾಯುಧ ಸದೃಶವಾದ ಕಠಿಣ ತಮವಾದ ಉಗುರಿನ ತುದಿಗಳುಳ್ಳವನೇ (ಹಿರಣ್ಯ ಕಶಿಪುವಿನ ಉದರ ವಿದಾರಕ ಪ್ರಸಂಗ) (ವಿಪಾಟನಾಧಿಕಪಟು ಪ್ರತ್ಯೇಕ ವಜ್ರಾಯುತಾ;-

ಶ್ರೀವಾಯುಸ್ತುತಿ), **ದಂಷ್ಟ್ರ ದರ್ಶ** = ಕೋರೆ ಹಲ್ಲುಗಳನ್ನು ಪ್ರದರ್ಶಿಸುತ್ತಿರುವ ರೂಪ, **ಭಾರ್ಗವಿರಮಣ** = ಭಾರ್ಗವೀನಾಮಕಳಾದ ಶ್ರೀ ಲಕ್ಷ್ಮೀದೇವಿಯ ಪತಿ, **ಅಶನಾ** = ಅನ್ನ ನಾಮಕನಾದ ಸರ್ವಸಾರಭೋಕ್ತನು.

**ಆದಿದೇವ** = ಆದಿಮೂಲ ಸ್ವರೂಪನು. (ಮಹಾಪ್ರಳಯ ಕಾಲದಲ್ಲಿ ಏಕಾಮೇವಾದ್ವಿತೀಯನಾಗಿರುವ ಶ್ರೀಮನ್ನಾರಾಯಣನ ಮೂಲರೂಪ), **ಅನಂತಮಹಿಮನೇ** = ಅಪಾರ ಗುಣ ಮತ್ತು ಮಹಿಮಾ ಸಂಪನ್ನನೇ, **ನಿಶ್ಚಿಂತ** = ಯಾವ ವಿಧವಾದ ಚಿಂತಾಲೇಪವಿಲ್ಲದವನು (ವಿದೋಶನು), **ಕಾದುಕೋ ನಿನ್ನವರ** = ನಿನ್ನ ಭಕ್ತರನ್ನು ಸಂರಕ್ಷಿಸು, **ವಿಬುಧ ಪ್ರವರಾ** = ಜ್ಞಾನಿಗಳಿಂದ ಸ್ತುತ್ಯನಾದ ಸರ್ವೋತ್ತಮನೇ (ಕವಿಭಿರೀಡಿತ), **ಮೋದಮಯ** = ಆನಂದಮಯ ಸ್ವರೂಪನು, **ವೈದಿಕವ ನಡಿಸು** = ಆಧ್ಯಾತ್ಮ ಮಾರ್ಗದಲ್ಲಿ ನನ್ನನ್ನು ನಡೆಯಿಸು, **ಲೌಕೀಕ ಮಾರ್ಗವ ಬಿಡಿಸು** = ಪ್ರಾಪಂಚಿಕ ವಿಷಯಗಳಿಂದ ದೂರವಿರಿಸೆಂದು ಪ್ರಾರ್ಥಿಸಿದ್ದಾರೆ, ತಮ್ಮ ಕುಲ ದೈವನೂ ಮತ್ತು ಇಷ್ಟ ದೈವನೂ ಆದ ಗರುಡವಾಹನ ಶ್ರೀಲಕ್ಷ್ಮೀನರಸಿಂಹ ದೇವರ ಸನ್ನಿಧಾನದಲ್ಲಿ.



## ೩೧

## (ಶ್ರೀಜಗನ್ನಾಥವಿಠ್ಠಲಾಂಕಿತ)

## ಶ್ರೀನರಸಿಂಹಸ್ತುತಿ

**ರಾಗ—ಶಂಕರಾಭರಣ** **ಆದಿತಾಳ**

**ನರಸಿಂಹಾ-ಪಾಹೀ—ಲಕ್ಷ್ಮೀನರಸಿಂಹಾ ||** **||ಪ||**

ನರಸಿಂಹ ನಮಿಪೆ ನಾನಿನ್ನ—ಚಾರು
ಚರಣ ಕಮಲಕೆ ನೀ ಎನ್ನ

ಕರವಪಿಡಿದು ನಿಜ ಶರಣನೆಂದೆನಿನೋ ಭಾ-
ಸುರ ಕರುಣಾಂಬುಧೇ-ಗರುಡವಾಹನ ಶ್ರೀ ಲಕ್ಷ್ಮೀನರಸಿಂಹಾ ॥ಅ॥

ತರಳ ಪ್ರಹ್ಲಾದನ್ನ ನುಡಿಯಾ-ಕೇಳಿ
ತ್ವರಿತಾದಿ ಬಂದ್ಯೋ ಎನ್ನೊಡೆಯಾ-ಏನು
ಕರುಣಾಳು ಭಕ್ತರ ಭಿಡೆಯಾ-ವೀರ
ಲರಿಯುನೆಂದೆಂದು ಕೆಂಗಿಡಿಯಾ ॥ಆಹಾ॥
ಭರದಿಂದುಗುಳುತ ಬೊಬ್ಬಿರಿದು ಬೆಂಬತ್ತಿ ಕ-
ರ್ಬುರ ಕಶಿಪುವಿನ ಹಿಂಗುರುಳ ಪಿಡಿದೆ ಲಕ್ಷ್ಮೀನರಸಿಂಹಾ ॥ ॥೧॥

ಪ್ರಳಯಾಂಬುನಿಧಿ ಘನಘೋಷ-ದಂತೆ
ಘುಳಿಘುಳಿಸುತಲಿ ಪ್ರದೋಷ-ಕಾಲ
ತಿಳಿದು ದೈತ್ಯನ ಅತಿರೋಷ-ದಿಂದ
ಪ್ಪಳಿಸಿ ಮೇರಿನಿಗೆ ನಿರ್ದೋಷ ॥ಅಹಾ॥
ಸೆಳೆ ಸೆಳೆಯುತ ಚರ್ಮಸುಲಿದು ಕೆನ್ನತ್ತ ರೋ-
ಕುಳಿಯನಾಡಿದೆ ದಿಶಾವಳಿಗಳೊಳಗೆ-ಲಕ್ಷ್ಮೀನರಸಿಂಹಾ ॥ ॥೨॥

ಕ್ರೂರ ದೈತ್ಯನ ತೋರಗರುಳಾ-ತೆಗೆ
ದ್ಹಾರ ಮಾಡಿದೆ ನಿಜ ಕೊರಳ-ಕಂಡು
ವಾರಿಜಾಸನ ಮುಖ್ಯರರಳ-ಪುಷ್ಪ
ಧಾರೆಗರೆದು ವೇಗ ತರಳಾ-॥ಆಹಾ॥
ಸೂರಿ ಪ್ರಹ್ಲಾದಗೆ ತೋರಿ ತವಾಂಘ್ರಿ ಸ-
ರೋರುಹವನು ಕಾಯ್ದೆ-ಕಾರುಣ್ಯ ನಿಧಿ ಶ್ರೀ ಲಕ್ಷ್ಮೀನರಸಿಂಹ ॥
॥೩॥

ಜಯ ಜಯ ದೇವ ವರೇಣ್ಯ-ಮಹ
ದ್ಭಯ ನಿವಾರಣನೆ ಅಗಣ್ಯ-ಗುಣಾ
ಶ್ರಯ ಘೋರ ದುರಿತಾರಣ್ಯ-ಧನಂ
ಜಯ ಜಗದೇಕ ಶರಣ್ಯ ॥ಆಹಾ॥

ಲಯವಿವರ್ಜಿತ ಲೋಕತ್ರಯವ್ಯಾಪ್ತ ನಿಜ ಭಕ್ತ
ಪ್ರಿಯ ಘೋರಾಮಯ ಹರ ದಯಮಾಡೆನ್ನೊಳು ಲಕ್ಷ್ಮೀನರಸಿಂಹ॥
॥೪॥

ಕುಟಿಲ ದ್ವೇಷದವ ನೀನಲ್ಲ-ನಿನ್ನಾ
ಭ್ರುಟಿಕೆ ಅಂಜಿದರು ಸುರರೆಲ್ಲ-ನರ
ನಟನೆಯ ತೋರಿದ್ಯೋ ಲಕ್ಷ್ಮೀನಲ್ಲ–ನಾ ಪಾ
ಸಟಿ ಕಾಣೆನಪ್ರತಿಮಲ್ಲ-॥ಆಹಾ॥
ವಟಪತ್ರಶಯನ ಧೂರ್ಜಟಿವಂದ್ಯ ಜಗನ್ನಾಥ
ವಿಠ್ಠಲ ಕೃತಾಂಜಲಿಪುಟದಿ ಬೇಡುವೆ-ಲಕ್ಷ್ಮೀನರಸಿಂಹ ॥ ॥೫॥



**ಅರ್ಥವಿವರಣೆ :**

ಶ್ರೀ ಲಕ್ಷ್ಮೀನರಸಿಂಹದೇವರ ಸ್ತೋತ್ರ ರೂಪವಾದ ಸುಂದರ ಸಾಹಿತ್ಯ ಕೀರ್ತನೆ ಇದು. **ಪಾಹಿ** = ಸಂರಕ್ಷಿಸು, **ಚಾರು ಚರಣ ಕಮಲ** = ಸುಂದರವಾದ ಪಾದಾರವಿಂದಗಳಿಗೆ (ಇಲ್ಲಿ "ಚಾರು" ಶಬ್ದ ಪ್ರಯೋಗವು ಅಪ್ರಾಕೃತ ಸ್ವರೂಪನೆಂಬ ಸಾಂಕೇತವು), **ಕರವ ಪಿಡಿದು** = ಕರಾವಂಬಲ ನೀಡಿ, **ನಿಜ ಶರಣನೆಂದೆನಿಸೋ** = ನಿನ್ನ ನಿಜ ದಾಸನೆಂದು ನನ್ನನ್ನು ಅನುಗ್ರಹಿಸಿ ಸ್ವೀಕರಿಸು, **ಭಾಸುರ** = ಸರ್ವಾಂಗ ಸುಂದರರೂಪನು, **ಕರುಣಾಂಬುಧೇ** = ದಯಾಸಾಗರನೇ, **ಗರುಡವಾಹನ** = ಗರುಡವಾಹನನಾದ ಶ್ರೀ ಲಕ್ಷ್ಮೀನರಸಿಂಹದೇವರು ಶ್ರೀ ಜಗನ್ನಾಥ ದಾಸರಾಯರ ಕುಲ ದೈವನೂ ಮತ್ತು ಇಷ್ಟ ದೈವನು.

**ತರಳ** = ಬಾಲಕ ಪ್ರಹ್ಲಾದನ, **ನುಡಿಯಾ** = ಶ್ರೀ ಹರಿಯು ಸರ್ವತ್ರ ವ್ಯಾಪ್ತನೆಂಬ ಬಾಲಕನ ವಚನವನ್ನು ಸತ್ಯವಾಗಿಸುವುದಕ್ಕಾಗಿ ಶ್ರೀನರಸಿಂಹನ ಅವತಾರ (ಸತ್ಯಂ ವಿಧಾತುಂ-ಶ್ರೀಮದ್ಭಾಗವತ ವಚನ), **ತ್ವರಿತಾದಿ** = ತಡ

**ಮಾಡದೇ**, ಕಂಭವನ್ನು ಸೀಳಿ ಪ್ರತ್ಯಕ್ಷನಾದ, **ಭಕ್ತರ ಭಿಡಿಯ** = ಭಕ್ತವತ್ಸಲನು (ಭಿಡೆ–ದಾಕ್ಷಿಣ್ಯ-ಭಕ್ತರ ವಚನ ಪಾಲಕ), **ಕೆಂಗಿಡಿಯ** = ಕೆಂಪಾದ ನಿನ್ನ ಕಣ್ಣುಗಳಿಂದ ಕೆಂಪು ಕಿಡಿಗಳನ್ನು ಕಾರುತ್ತಾ, **ಭರದಿಂದ ಉಗುಳುತ** = ಅತ್ಯಂತ ರಭಸದಿಂದ ಕೆಂಗಿಡಿಗಳನ್ನು ಕಾರುತ್ತಾ, **ಬೊಬ್ಬಿರಿದು** = ಆರ್ಭಟಿಸುತ್ತಾ, **ಬೆಂಬತ್ತಿ** ಹಿರಣ್ಯ ಕಶಿಪುವನ್ನು ಹಿಮ್ಮೆಟ್ಟಿ, **ಕರ್ಬುರ ಕಶಿಪುವಿನ** = ಹಿರಣ್ಯ ಕಶಿಪುವಿನ (ಕರ್ಬುರ–ಚಿನ್ನ–ಹಿರಣ್ಯ), **ಹಿಂಗುರುಳು** = ಹಿಂದಕ್ಕೆ ಹಾರಿ ಅವನ ಹಿಂಬದಿಯ ತಲೆಗೂದಲನ್ನು ಹಿಡಿದೆಳೆದು.

**ಪ್ರಳಯಾಂಭುನಿಧಿ** = ಪ್ರಳಯಕಾಲದ ಜಲಮಯವಾದ ಸಮುದ್ರದಂತೆ, **ಘನಘೋಷ** = ಅಬ್ಬರದ ತೆರೆಗಳ ಶಬ್ದದಿಂದ, **ಘುಳು ಘುಳಿಸುತಲಿ** = ಘುಡು ಘುಡಿಸುತ್ತಾ, **ಪ್ರದೋಷ ಕಾಲ ತಿಳಿದು** = ಮುಂಬರುತ್ತಿರುವ ಸಂಜೆಯ ಕಾಲವನ್ನು ಅರಿತು, **ಮೇದಿನಿಗೆ** = ಅತ್ಯಂತ ರೋಷಾನ್ವಿತನಾಗಿ, ಆ ದೈತ್ಯನನ್ನು ಹಿಡಿದು ಮೇಲಕ್ಕೆತ್ತಿ, ರಭಸವಾಗಿ ಭೂಮಿಗೆ ಅಪ್ಪಳಿಸಿದೆ, **ನಿರ್ದೋಷ** = ಇದರಿಂದ (ದೈತ್ಯ ಸಂಹಾರದಿಂದ) ನಿನಗೆ ದೋಷವಿಲ್ಲ. ಅದು ನಿನ್ನ ಸಂಕಲ್ಪ (ದುಷ್ಟ ಶಿಕ್ಷಣ-ಶಿಷ್ಟ ಪರಿಪಾಲನ), **ಸೆಳಿ ಸೆಳಿಯುತ** = ದೈತ್ಯನನ್ನು ದರದರನೆ ಎಳೆದಾಡುತ್ತಾ, **ಕೆನ್ನತ್ತರೋಕುಳಿಯನಾಡಿದೆ** = ಉದರದಿಂದ ಪುಟಿಯುತ್ತಿರುವ ರಕ್ಕಸನ ರಕ್ತವನ್ನು ಬೊಗಸೆಯಿಂದ ತೆಗೆದು ಓಕುಳಿ ಆಡಿದೆ (ಕೆನ್ನವರು-ಕೆಂಪಾದ ರಕ್ತ, ಓಕುಳಿ-ಎರಚಾಡುವುದು), **ದಿಶಾವಳಿಗಳೊಳಗೆ** = ಸಕಲ ದಿಕ್ಕುಗಳಲ್ಲೂ.

**ಕೊರಗರುಳಾ** = ದುಷ್ಟ ದಾನವನ ದೊಡ್ಡ ಕರುಳನ್ನು, **ಹಾರಮಾಡಿದ** = ಉದರದಿಂದ ಬಗೆದು ತೆಗೆದು, ನಿನ್ನ ಕೊರಳಿಗೆ ಹಾಕಿಕೊಂಡೆ ಮಾಲಾಕಾರವಾಗಿ, **ವಾರಿಜಾಸನ ಮುಖ್ಯ** = ಬ್ರಹ್ಮಾದಿಗಳೇ ಮೊದಲಾದ ದೇವತಾವರ್ಗ, **ಅರಳ ಪುಷ್ಪ ಧಾರೆಗರೆದು** = ನಿನ್ನ ಮೇಲೆ ಅರಳೂ ಮತ್ತು ಹೂವಿನ ಮಳೆಗರೆದರು, **ತರಳಾ** = ಬಾಲಕನಾದ ಪ್ರಹ್ಲಾದನ ಮೇಲೂ ಸಹ, **ಸೂರಿ** ಭಾಗವತೋತ್ತಮನೂ, ಜ್ಞಾನಿಯೂ ಆದ

ಬಾಲಕ ಪ್ರಹ್ಲಾದ, **ತವಾಂಘ್ರಿ ಸರೋರುಹವನು** = ಪ್ರಹ್ಲಾದನಿಗೆ ನಿನ್ನ ಪಾದ ಕಮಲಗಳ ದರ್ಶನ ಭಾಗ್ಯವನ್ನು ನೀಡಿ, **ಕಾಯ್ದ** = ಬಾಲಕನನ್ನು ಸಂರಕ್ಷಿಸಿದೆ.

**ಜಯ ಜಯ** = ನಿನ್ನ ಸ್ಮರಣೆಯಿಂದ ನಮಗೆ ಜಯ ಲಭಿಸಲಿ (ಮೃತ್ಯು ಪರಿಹಾರಕ ರೂಪ), **ದೇವವರೇಣ್ಯ** = ದೇವೋತ್ತಮನಾದ ಶ್ರೀ ನಾರಸಿಂಹನೇ, **ಮಹದ್ಭಯ ನಿವಾರಣನೆ** = ಮಹತ್ತಾದ ಭಯ ರೂಪವಾದ ಆಪತ್ತುಗಳನ್ನು ಪರಿಹರಿಸುವವನೇ, **ಅಗಣ್ಯ** = ಅಸದೃಶನೇ, **ಗುಣಾಶ್ರಯ** = ಅನಂತಾನಂತ ಕಲ್ಯಾಣ ಗುಣಗಳಿಗೇ ಆಶ್ರಯ ಭೂತನಾದ (ಗುಣ ಗಣಧಾಮನು), **ಘೋರ ದುರಿತಾರಣ್ಯ ಧನಂಜಯ** = ಭಯಂಕರವಾದ ಪಾಪಗಳೆಂಬ ಕಾಡಿಗೆ ಅಗ್ನಿ ಸದೃಶನೇ (ಧನಂಜಯ-ಅಗ್ನಿ), **ಜಗದೇಕ-ಶರಣ್ಯ** = ಸರ್ವಜೀವರಿಗೆಲ್ಲಾ ಏಕಮಾತ್ರನಾದ ಶರಣ್ಯನೇ, **ಲಯ ವಿವರ್ಜಿತ** = ನಾಶರಹಿತನಾದ (ಅಂತ್ಯವಿಲ್ಲದ), **ಲೋಕತ್ರಯವ್ಯಾಪ್ತ** = ಮೂರು ಲೋಕಾತ್ಮಕ ಸಮಗ್ರ ಬ್ರಹ್ಮಾಂಡದಲ್ಲಿ ಸರ್ವತ್ರ ವ್ಯಾಪಿಸಿರುವವನೇ, **ನಿಜ ಭಕ್ತ ಪ್ರಿಯ** = ನಿನ್ನ ಅಂತರಂಗದ ಭಕ್ತರಿಗೆ ಅತ್ಯಂತ ಪ್ರಿಯವನಾದವನೇ, **ಘೋರ ಆಮಯ ಹರ** = ಘೋರ ವ್ಯಾಧಿಗಳನ್ನು ಪರಿಹಾರ ಮಾಡುವ (ಅಪಮೃತ್ಯು ಪರಿಹಾರಕ ರೂಪ-ಮೃತ್ಯುವಿಗೆ ಮೃತ್ಯು ಸ್ವರೂಪನು ಶ್ರೀ ಲಕ್ಷ್ಮೀನರಸಿಂಹನು).

**ಕುಟಿಲ ದ್ವೇಷದವ ನೀನಲ್ಲ** = ಪಕ್ಷಪಾತ ನೈರ್ಘೃಣ್ಯ ಮುಂತಾದ ದೋಷಗಳು ಯಾವತ್ತೂ ಶ್ರೀ ಪರಮಾತ್ಮನಲ್ಲಿ ಇಲ್ಲವೇ ಇಲ್ಲ. ದೇವತೆಗಳಲ್ಲಿ ಸ್ನೇಹವಾಗಲೀ, ರಾಜರಸರಲ್ಲಿ ಉದಾಸೀನವಾಗಲೀ ದೈತ್ಯರಲ್ಲಿ ದ್ವೇಷವಾಗಲೀ ಇಲ್ಲ. ಅವರವರ ಸ್ವರೂಪ ಯೋಗ್ಯತೆಗನುಸಾರ ಫಲಪ್ರದನಾಗಿದ್ದಾನೆ. ಇದರಿಂದ **ಸಮನೆನಿಸಿದ್ದಾನೆ. ಸುರರೆಲ್ಲ** = ಶ್ರೀನರಸಿಂಹಾವತಾರವಾದಾಗ, ಸಮಸ್ತ ದೇವತಾವರ್ಗ ಅವನ ಆರ್ಭಟಕ್ಕೆ ಹೆದರಿದರು, **ನರನಟನೆ ತೋರಿದ್ಯೊ** = ಆ ಭಯಂಕರ ತಮ ರೂಪ, ಆರ್ಭಟ, ಕೋಪ, ಇತ್ಯಾದಿ ದೋಷ ರೂಪವಾದ ಧರ್ಮಗಳು ಶ್ರೀ

ಪರಮಾತ್ಮನಲ್ಲಿ ಅನಾದ್ಯಂತ ಕಾಲದಿಂದಲೂ ಇಲ್ಲ ಅವನು ಸಮಸ್ತ ದೋಷ ವಿದೂರನು. ಪರಮ ದುರುಳನಾದ ಹಿರಣ್ಯ ಕಶಿಪುವಿಗೆ ಭಯವನ್ನುಂಟು ಮಾಡಿ, ತದ್ದ್ವಾರಾ ನಿಸ್ತೇಜಸನ್ನಾಗಿ ಮಾಡಲೋಸುಗ, ಕೋಪ ತಾಪ ಗಳನ್ನು ತೋರಿಸಿದಂತೆ ನಟಿಸಿದನು (ವಿಡಂಬನ ರೂಪ), **ಲಕ್ಷ್ಮೀನಲ್ಲ**= ರಮಾರಮಣನು, **ಸಾಸಟಿ**=ಎಣೆ, ಸದೃಶಭಾವ, **ಅಪ್ರತಿಮಲ್ಲ**= ಅಸದೃಶ ಪರಾಕ್ರಮಿ, **ವಟಪತ್ರ ಶಯನ**=ಮಹಾ ಪ್ರಳಯ ಕಾಲದಲ್ಲಿ ಆಲದಡಿಯ ಮೇಲೆ ಮಲಗಿರುವ ಶಿಶು ರೂಪ, **ಧೂರ್ಜಟಿ ವಂದ್ಯ**= ರುದ್ರದೇವರಿಂದ ನಮಿತನು, **ಕೃತಾಂಜಲಿ ಪುಟದಿ**=ಎರಡು ಕೈಗಳನ್ನೂ ಜೋಡಿಸಿ, **ಬೇಡುವೆ**=ನಿನ್ನನ್ನು ಪ್ರಾರ್ಥಿಸುತ್ತೇನೆ.

❋

## ೩೨

## (ಜಗನ್ನಾಥವಿಠ್ಠಲಾಂಕಿತ)

**ರಾಗ–ಶಂಕರಾಭರಣ** **ಅಟ್ಟತಾಳ**

ಪಾಲಿಸೋ–ನರಸಿಂಹ–ಪಾಲಿಸೋ ॥ ॥ಪ॥

ಪಾಲಿಸೋ ಪರಮ ಪಾಪನ್ನ-ಕವು
ಲಾಲಯ ನಂಬಿದೆ ನಿನ್ನ-॥ಅಹ॥
ಬಾಲೇಂದು ಕೋಟಿಯ ಸೋಲಿಪ ನಖತೇಜ
ಮೂಲೋಕದರಸನೆ ಪಾಲಯ ಬಿಡದಲೆ ॥ ॥ಅ॥

ಹಿಂದೆ ಪ್ರಹ್ಲಾದನ ಮೊರೆಯ–ಕೇಳಿ
ಬಂದು ಕಾಯ್ದೆಯೊ ಭಕ್ತಪ್ರಿಯ-ಸುಖ
ಸಂದೋಹ ಮೂರುತಿ ಆಯ- ತಾಕ್ಷ
ಎಂದೆಂದು ಬಿಡದಿರು ಕೈಯ-॥ಅಹ॥

ವೃಂದಾರಕೇಂದ್ರರ ಬಂದ ದುರಿತಗಳ
ಹಿಂದೆ ಮಾಡಿ ಕಾಯ್ದ ಇಂದಿರಾರಮಣನೆ ॥ ॥೧॥

ಹರಣದಲಿ ನಿನ್ನ ರೂಪ-ತೋರಿ
ಪರಿಹರಿಸೋ ಎನ್ನ ತಾಪ-ದೂರ
ಇರದಿರೋ ಹರಿ ಸಪ್ತದ್ವೀಪಾ-ಧಿಪ
ಸಿರಿಪತಿ ಭಕ್ತ ಸಲ್ಲಾಪ-॥ಅಹ॥
ಕರಣಶುದ್ಧನ ಮಾಡಿ ಕರೆಯೋ ನಿನ್ನ ಬಳಿಗೆ
ನರ ಕಂಠೀರವ ನಿನ್ನ ಚರಣವಾಶ್ರೈಸಿದೆ ॥ ॥೨॥

ಶರಣ ಪಾಲಕನೆಂಬೋ ಬಿರುದು-ಕೇಳಿ
ತ್ವರಿತದಿ ಬಂದೆನೋ ಅರಿದು-ಇನ್ನು
ಪರಿಪರಿಯುಪರಾಧ ಮರೆದು-ಪರ
ತರನೆ ನೋಡೆನ್ನ ಕಣ್ದೆರೆದು-॥ಅಹ॥
ಮರಣ ಜನನಗಳ ತಂದು ಬಿಸುಟು ನಿನ್ನ
ಶರಣರ ಸಂಗದಲ್ಲಿರಿಸಿ ಉದ್ಧರಿಸೆನ್ನ ॥ ॥೩॥

ಸಂಸಾರ ಸಾಗರದೊಳಗೆ-ಎನ್ನ
ಹಿಂಸೆಗೊಳಿಸುವರೆ ಹೀಗೆ-ಎಲೋ
ಕಂಸಾರಿ ಬಾಗೆ ಅನ್ಯರಿಗೆ-ಮತ್ತೆ
ಸಂಶಯವಿಲ್ಲೀ ಮಾತಿಗೆ-॥ಅಹ॥
ಹಂಸಡಿಬಿಕರನ್ನು ಧ್ವಂಸ ಮಾಡಿದ ಶೌರಿ
ಶಿಂಶುಮಾರಮೂರ್ತಿ ದಿವಸ ದಿವಸದಲ್ಲಿ ॥ ॥೪॥

ಸಿರಿಬೊಮ್ಮ ಭವ ಶಕ್ರಸುರರ-ಕೈಯ
ನಿರುತ ಸ್ತುತಿಸಿ ಕೊಂಬ ಧೀರ-ಶುಭ-
ಪರಿಪೂರ್ಣ ಗುಣ ಪಾರಾವಾರ-ಪೊರೆ-
ವರ ಕಾಣೆನಂತ ಸುಂದರ-॥ಅಹ॥

ಸ್ಮರನ ಕಾಂತಿಯು ನಿರಾಕರಿಸುವ ತೇಜನೆ
ಎರವು ಮಾಡದೆ ಹೃತ್ಸರಸಿಜದೊಳು ತೋರಿ ॥ ॥೫॥

ಮೊದಲು ಮತ್ಸ್ಯಾವತಾರದಿ–ವೇದ
ವಿಧಿಗೆ ತಂದಿತ್ತೆ ವಿನೋದಿ–ಅಶ–
ರಧಿಯೊಳ್ ಸುರರಿಗೋಸ್ಕರದಿ-ನೀನು
ಸುಧೆಯು ಸಾಧಿಸಿ ಉಣಿಸಿದಿ ॥ಅಹ॥
ಅದುಭುತ ಭೂಮಿಯು ತೆಗೆದೊಯ್ದವನ ಕೊಂದು
ಮುದದಿ ಹಿರಣ್ಯಕಸುದರ ಬಗೆದ ಧೀರ ॥ ॥೬॥

ಬಲಿಯು ಮನೆಗೆ ಪೋಗಿ ದಾನ–ಬೇಡಿ
ತುಳಿದೆ ಪಾತಾಳಕ್ಕೆ ಅವನ-ಪೆತ್ತ-
ವಳ ಶಿರ ತರಿದ ಪ್ರವೀಣ–ನಿನ್ನ
ಫಲಕೆಣೆಗಾಣೆ ರಾವಣನ-॥ಅಹ॥
ತಲೆಯನಿಳುಹಿ ಯದುಕುಲದಿ ಜನಿಸಿ ಮತ್ತೆ
ಲಲನೇರ ಪತಿವ್ರತವಳಿದ ಅಶ್ವಾರೂಢ ॥ ॥೭॥

ಮಾನಸ ಪೂಜೆಯು ದಯದಿ-ಇತ್ತು
ಶ್ರೀನಾಥ ಕಳೆ ಭವವ್ಯಾಧಿ-ಕಾಯೋ
ಅನಾಥ ಬಂಧು ಸುವೇಲಾದಿ-ಚತು
ರಾನನಪಿತ ಕೃಪಾಂಭೋಧಿ-॥ಅಹ॥
ನಾನೊಬ್ಬರ ನರಿಯೆ ಗಾನ ವಿನೋದಿಯೆ
ಏನೇನು ಮಾಡುವ ಸಾಧನ ನಿನ್ನದು ॥ ॥೮॥

ನಿನ್ನ ಸಂಕಲ್ಪವಲ್ಲದೆ-ಇನ್ನು
ಅನ್ಯಥಾವಾಗಬಲ್ಲುದೇ–ಇದು
ಚೆನ್ನಾಗಿ ನಾ ತಿಳಿಯದೆ-ಮಂದ-
ಮಾನವನಾಗಿ ಬಾಳಿದೇ-॥ಅಹ॥

ಎನ್ನಪರಾಧವ ಇನ್ನು ನೀನೋಡದೆ
ಮನ್ನಿಸು ದಯದಿ **ಶ್ರೀಜಗನ್ನಾಥವಿಠ್ಠಲ** || ||೯||



**ಅರ್ಥವಿವರಣೆ :**

**ಪರಮಪಾವನ್ನ** = ಅತ್ಯಂತ ಮಂಗಳ ಸ್ವರೂಪನು (ಅತ್ಯಂತ ಪವಿತ್ರ ವಸ್ತು-ನಿರ್ದೋಷ), **ಕಮಲಾಲಯ** = ಶ್ರೀ ಮಹಾಲಕ್ಷ್ಮೀಯನ್ನು ತನ್ನ ಆಶ್ರಯದಲ್ಲಿಟ್ಟು ಕೊಂಡಿರುವವನು (ಕಮಲ+ಆಲಯ), **ಬಾಲೇಂದು ಕೋಟಿಯ** = ಕೋಟಿ ಬಾಲ ಚಂದ್ರರನ್ನು (ಆಗ ತಾನೇ ಉದಯಿಸುತ್ತಿ-ರುವ ಚಂದ್ರ), **ಸೋಲಿಪ ನಖತೇಜ** = ಸೋಲಿಸುವ ಉಗುರುಗಳ ಕಾಂತಿ ಉಳ್ಳ. (ಶ್ರೀ ಪರಮಾತ್ಮನ ನಖಗಳ ಕಾಂತಿಯೇ ಕೋಟಿ ಬಾಲೇಂದು ಪ್ರಭಾ ಎಂದ ಮೇಲೆ ಎಷ್ಟಿರಬಹುದು !), **ಮೂರ್ಲೋಕದರಸನೆ** = ಸ್ವರ್ಗ-ಭೂ-ಪಾತಾಳಗಳೆಂಬ ಮೂರು ಲೋಕಗಳುಳ್ಳ ಬ್ರಹ್ಮಾಂಡದ ಪ್ರಭುವೆ, **ಪಾಲಯ ಬಿಡದಲೆ** = ತಪ್ಪದೇ ಜ್ಞಾನಾಶ್ರಯನಾಗಿದ್ದು.

**ಹಿಂದೆ ಪ್ರಹ್ಲಾದನ ಮೊರೆಯ** = ಕೃತ ಯುಗದಲ್ಲಿ ಬಾಲ ಪ್ರಹ್ಲಾದನ ಪ್ರಾರ್ಥನೆಯನ್ನು ಲಾಲಿಸಿ. (ಸತ್ಯಂ ವಿಧಾಯಂ ನಿಜ ಭೃತ್ಯ ಭಾಷಿತಂ), **ಸುಖ ಸಂದೋಹ ಮೂರುತಿ** = ಆನಂದಮಯ ಸ್ವರೂಪನು, **ಆಯ-ತಾಕ್ಷ** = ವಿಶಾಲನೇತ್ರನು (ಆಯತ-ವಿಸ್ತಾರವಾದ ಅಗಲವಾದ ಅಕ್ಷ-ನೇತ್ರ), **ವೃಂದಾರ ಕೇಂದ್ರರ** = ದೇವ ಶ್ರೇಷ್ಠರಾದ ಇಂದ್ರಾದಿಗಳಿಗೆ (ವೃಂದಾರಕ-ದೇವತೆಗಳು. ಇಂದ್ರ-ಸುರಶ್ರೇಷ್ಠ ಇಂದ್ರ), **ಬಂದ ದುರಿತಗಳ** = ಒದಗಿದ ಆಪತ್ತುಗಳನ್ನು, **ಹಿಂದೆ ಮಾಡಿ** = ಪರಿಹರಿಸಿ, **ಕಾಯ್ದ** = ಸಂರಕ್ಷಿಸಿದ, **ಇಂದಿರಾರಮಣನೆ** = ಲಕ್ಷ್ಮೀಪತಿಯಾದ ಶ್ರೀ ಮನ್ನಾ-ರಾಯಣನೇ.

**ಹರಣದಲಿ** = ಈ ದೇಹದಲ್ಲಿ, **ನಿನ್ನ ರೂಪ** = ಹೃದ್ಗುಹಾವಾಸಿ-ಯಾದ ಬಿಂಬಮೂರ್ತಿಯ ದರ್ಶನ ಭಾಗ್ಯವನ್ನು ನೀಡಿ, **ಎನ್ನ ತಾಪ** =

**ಕರೆಯೋ ನಿನ್ನ ಬಳಿಗೆ** = ನಿನ್ನ ಹತ್ತಿರಕ್ಕೆ ನನ್ನನ್ನು ಕರೆದುಕೋ ನಿನ್ನ ಮನಸ್ಸಿನ ವ್ಯಥೆಯನ್ನು ಪರಿಹರಿಸು (ಬಿಂಬದರ್ಶನ ದ್ವಾರಾ ಹೃತ್ತಾಪ ಪರಿಹಾರ), **ದೂರ ಇರದಿರೋ** = ನನ್ನ ಸಮೀಪದಲ್ಲಿರುವ (ಸುಮುಖ– ನಾಗು), **ಸಪ್ತದ್ವೀಪಾಧಿಪ** = ಸಪ್ತ ದ್ವೀಪಗಳಿಂದ ಆವೃತವಾದ ಪೃಥ್ವಿಗೆ ಯಜಮಾನನಾದ, **ಸಿರಿಪತಿ** = ಶ್ರೀ ಲಕ್ಷ್ಮೀರಮಣನು, **ಭಕ್ತ ಸಲ್ಲಾಪ** = ಭಕ್ತರೊಡನೆ ಸುಖಕರವಾದ ಮಾತುಗಳನ್ನಾಡುವ, **ಕರಣಶುದ್ಧನ** = ಪುನಃ ಶುದ್ಧಿಯನ್ನು ಅನುಗ್ರಹಿಸಿ,ಮಾಡಿ (ತ್ರಿಕರಣ ಶುದ್ಧಿ), **ನರಕಂಠೀರವ** = ನರಸಿಂಹನೇ ನಿನ್ನ, **ಚರಣವಾಶ್ರೈಸಿದೆ** = ಪಾದಾರವಿಂದಗಳನ್ನು ಆಶ್ರಯಿಸಿದ್ದೇನೆ.

**ಶರಣ ಪಾಲಕ** = ನೆಂಬೊ ಬಿರುದು ಕೇಳಿಆಶ್ರಿತರ ರಕ್ಷಕನೆಂಬ ಬಿರುದನ್ನು ಕೇಳಿ, **ತ್ವರಿತದಿ ಬಂದೆನೋ** = ಬೇಗನೆ ನಿನ್ನ ಬಳಿಗೆ ಬಂದೆ, **ಅರಿದು** = ಶರಣಾಗತ ರಕ್ಷಕನೆಂದು ತಿಳಿದು, **ಪರಿಪರಿಯ ಅಪರಾಧ ಮರೆದು** = ನಾನು ಮಾಡಿದ ಅನೇಕ ವಿಧವಾದ ಪಾಪಗಳನ್ನು ಮರೆತು, (ಮನ್ನಿಸಿ), **ಪರತರನೆ** = ಪರನಾಮಕಳಾದ ಶ್ರೀಲಕ್ಷ್ಮೀದೇವಿಗಿಂತ ಉತ್ತಮೋತ್ತಮನಾದ ಶ್ರೀಹರಿಯೇ, **ನೋಡೆನ್ನ ಕಣ್ದೆರೆದು** = ಕೃಪಾಕಟಾಕ್ಷದಿಂದ ನೋಡೆನ್ನ, **ಮರಣ ಜನನಗಳ ತಂದು** ಜನನ ಮರಣಾಖ್ಯವಾದ ಸಂಸಾರ ಬಂಧ- ವನ್ನು, **ತಂದು ಬಿಸುಟು** = ಪರಿಹರಿಸಿ (ಕರ್ಮವಿಮೋಚನೆಗೈದು), **ನಿನ್ನ ಶರಣರ ಸಂಗದಲ್ಲಿ ಇರಿಸಿ** = ನಿನ್ನ ದಾಸರ ಸಹವಾಸದಲ್ಲಿಟ್ಟು.

**ಸಂಸಾರ ಸಾಗರದೊಳಗೆ** = ಜನನ ಮರಣಾಖ್ಯವಾದ ಕರ್ಮಾನುಭವ ರೂಪದಲ್ಲಿರುವ ಭವವೆಂಬ ಈ ಅಪಾರ ಸಮುದ್ರದಲ್ಲಿ, **ಹಿಂಸೆ ಗೊಳಿಸು ವವರೆ** = ಈ ರೀತಿಯಲ್ಲಿ ಪೀಡಿಸಬಹುದೇ ?, **ಕಂಸಾರಿ** = ಕಂಸಾಸುರನನ್ನು ಸಂಹರಿಸಿದ ಶ್ರೀ ಕೃಷ್ಣ, **ಬಾಗೆ ಅನ್ಯರಿಗೆ** = ನಿನ್ನ ಹೊರತು ಬೇರೆ ಯಾರಿಗೂ ನಾನು ತಲೆ ಬಾಗಿಸುವುದಿಲ್ಲ (ವಿಷ್ಣು ಸರ್ವೋತ್ತಮತ್ವದಲ್ಲಿ ದೃಢವಾದ ದೀಕ್ಷೆ), **ಸಂಶಯವಿಲ್ಲ ಈ ಮಾತಿಗೆ** = ನನ್ನೀ ಮಾತಿನಲ್ಲಿ ಎಳ್ಳಷ್ಟಾದರೂ ಸಂದೇಹವಿಲ್ಲ.

**ಹಂಸಡಿಬಿಕರನ್ನು** = ಕರೂಶ ದೇಶದ ಅರಸು-ಹಂಸನೆಂಬುವನು. ಇವನ ತಮ್ಮನೇ, **ಡಿಬಿಕನು** = ಡಿಬಿಕನು ಜರಾಸಂಧನ ಪ್ರಧಾನ ಮಂತ್ರಿಗಳಲ್ಲಿ ಒಬ್ಬನು. ಹಂಸ ಮತ್ತು ಡಿಬಿಕರೆಂಬ ಸಹೋದರರೀರ್ವರು ಕರೂಶ ದೇಶದ ಅರಸರಾಗಿದ್ದರು. ಇಬ್ಬರೂ ಶಸ್ತ್ರದಿಂದ ಹತರಾಗದಂತೆ ವರ ಪಡೆದಿದ್ದರು. ಜರಾಸಂಧಾನಿಗೂ ಮತ್ತು ಕೃಷ್ಣನಿಗೂ ಘೋರ ಸಂಗ್ರಾಮ ನಡೆದಾಗ, ಬಲರಾಮನಿಂದ ಹಂಸ ಮೂರ್ಛಿತನಾಗಿ ಬಿದ್ದ. ಡಿಬಿಕನು ಹಂಸನು ಮರಣ ಹೊಂದಿದನೆಂಬ ಭ್ರಾಂತಿಯಿಂದ, ಯಮುನಾ ನದಿಯಲ್ಲಿ ಬಿದ್ದು ಪ್ರಾಣತ್ಯಾಗ ಮಾಡಿದ. ಹಂಸನು ಮೂರ್ಛೆಯಿಂದ ಎಚ್ಚೆತ್ತು. ಡಿಬಿಕನ ಮರಣ ವಾರ್ತೆಯನ್ನು ಕೇಳಿ, ತಾನೂ ಯಮುನೆಯಲ್ಲಿ ದುಮ್ಮಿಕ್ಕಿ ದೇಹ ತೊರೆದ, **ಶೌರಿ** = ಶೂರಸೇನನ ಮೊಮ್ಮಗನಾದ ಶ್ರೀ ಕೃಷ್ಣ, **ಶಿಂಶುಮಾರ ಮೂರ್ತಿ** = ಶ್ರೀಪರಮಾತ್ಮನ ಕಾಲರೂಪ. **ಚೇಳಿನ** ರೂಪದಲ್ಲಿ ಶಿಂಶುಮಾರನು ತನ್ನ ಬಾಲದ ತುದಿಯನ್ನು ಧ್ರುವ ಮಂಡಲದಲ್ಲಿ ಆಧಾರ ಬಿಂದುವಾಗಿಟ್ಟು, ಅಧೋಮುಖನಾಗಿ ಬಗ್ಗಿ ತನ್ನ ಎರಡು ಕೊಂಡಿಗಳಿಂದ ಕಾಲ ಚಕ್ರವನ್ನು ಮೇರು ಪರ್ವತಾಗ್ರದಲ್ಲಿ ಗಿರಗಿರನೆ ತಿರುಗಿಸುತ್ತಿರುವನು. ಏಕಾಂಡವಾದ ಕಾಲ ಸಾಂಕೇತ ರೂಪವಿದು. ಸಕಲ ನಕ್ಷತ್ರ ಮಂಡಲಗಳೂ, ನವಗ್ರಹಗಳೂ, ದೇವತೆಗಳೂ ಶಿಂಶುಮಾರನ ದೇಹದ ವಿವಿಧ ಭಾಗಗಳಲ್ಲಿರುವರು. ಜ್ಞಾನಿಗಳು ಅರ್ಚಿರಾದಿ ಮಾರ್ಗದಿಂದ ಪ್ರಯಾಣ ಮಾಡಿ, ಶಿಂಶುಮಾರ ಮೂರ್ತಿಯನ್ನು ದರ್ಶನ ಮಾಡಿಕೊಂಡು, ಮಹಾ ಪ್ರಳಯದ ಪರ್ಯಂತ ತಾವು ಗಮಿಸಬೇಕಾದ ಸ್ಥಳವನ್ನು ಸೇರುವರು.

**ಸಿರಿಬೊಮ್ಮ ಭವ ಶಕ್ರಸುರರ** ಕೈಯ ಲಕ್ಷ್ಮೀ, ಬ್ರಹ್ಮ, ರುದ್ರ, ಇಂದ್ರಾದಿ ದೇವತಾವರ್ಗದಿಂದ, **ನಿರುತ ಸ್ತುತಿಸಿ ಕೊಂಬ** = ಅನವರತ ಲಕ್ಷ್ಮೀ ಬ್ರಹ್ಮಾದಿ ಸಕಲ ದೇವತೆಗಳಿಂದ ಸಂಸ್ತುತ್ಯನಾದವನು, **ಧೀರ** = ಅಸಮ ಪರಾಕ್ರಮಿ, **ಶುಭ ಪರಿಪೂರ್ಣ ಪಾರಾವಾರ** = ಪರಮ ಮಂಗಳ ಗುಣಗಳ ಸಮುದ್ರನೇ (ಅನಂತ ಕಲ್ಯಾಣ ಗುಣಗಣ ಸಾಗರನು), **ಅನಂತ-ಸುಂದರ** = ಅಖಂಡ ಸೌಂದರ್ಯದ ಸ್ವರೂಪನು. (ಸೌಂದರ್ಯಸಾರನು),

**ಸ್ಮರನ ಕಾಂತಿಯ**=ಮನ್ಮಥನ ಪ್ರಕಾಶವನ್ನು, **ನಿರಾಕರಿಸುವ ತೇಜನೆ** =ಮೀರಿಸುವ ಅನಂತಾನಂತ ಪ್ರಕಾಶವುಳ್ಳವನೇ (ಸಾಕ್ಷಾತ್ ಮನ್ಮಥ ಮನ್ಮಥಃ), **ಎರವು ಮಾಡದೆ**=ಭೇದವೆಣಿಸದೆ (ನಾನು ಬೇರೆಯವನು ಎಂದೆಣಿಸದೆ), **ತೋರಿ**=ನಿನ್ನ ಹೃತ್ಪದ್ಮದಲ್ಲಿ ನಿನ್ನ ದರ್ಶನ ಭಾಗ್ಯವನ್ನು ಕರುಣಿಸಿ.

೭ನೆಯ ನುಡಿಯಲ್ಲಿ ಶ್ರೀ ಹರಿಯ ದಶಾವತಾರ ಸ್ತೋತ್ರವನ್ನು ಮಾಡಿರುತ್ತಾರೆ. **ಮೊದಲು**= ಪ್ರಥಮತಃ, **ಮತ್ಸ್ಯಾವತಾರದಿ**= ಮತ್ಸ್ಯ ರೂಪವನ್ನು ತಾಳಿ, **ವೇದ** ಅನಂತಾನಂತ ವೇದ ರಾಶಿಗಳನ್ನು, **ವಿಧಿಗೆ ತಂದಿತ್ತೆ** ಹಯಗ್ರೀವಾಸುರರನ್ನು ಸಂಹರಿಸಿ, ಬ್ರಹ್ಮನಿಗೆ ಪುನಃ ತಂದು ಕೊಟ್ಟೆ, **ವಿನೋದಿ**=ಲೀಲಾ ವಿನೋದಿಯಾದ ಶ್ರೀ ಹರಿ, **ಆಶರಧಿಯೊಳ್**=ಆ ಕ್ಷೀರ ಸಾಗರದಲ್ಲಿ, **ಸುರರಿಗೋಸ್ಕರದಿ**= ದೇವತೆಗಳಿಗೋಸ್ಕರವಾಗಿ (ದೇವ ದಾನವರಿಬ್ಬರೂ ಕ್ಷೀರ ಸಮುದ್ರವನ್ನು ಕಡೆದರು. ಅಮೃತ ಪ್ರಾಪ್ತಿಗೆ ದೈತ್ಯರು ಯೋಗ್ಯರಲ್ಲವೆಂದು ತಿಳಿದ ಶ್ರೀ ಹರಿಯು ಅಮೃತವನ್ನು ದೇವತೆಗಳಿಗೆ ಮಾತ್ರ ಹಂಚಿದನು. ಅವರವರ ಸ್ವರೂಪ ಯೋಗ್ಯತಾನುಸಾರ ಮಾಡಿದ್ದರಿಂದ ಶ್ರೀ ಹರಿಗೆ ವೈಷಮ್ಯವೆಂಬ ದೋಷ ಬರಲಿಲ್ಲ), **ಸುಧೆಯ**= ಅಮೃತವನ್ನು, **ಸಾಧಿಸಿ**=ಕೂರ್ಮಾವತಾರದಿಂದ ಮಂದರಗಿರಿಯನ್ನು ತನ್ನ ಬೆನ್ನಿನ ಮೇಲೆ ಹೊತ್ತು, ಅಜಿತರೂಪನಾಗಿ ದೇವತೆಗಳೊಡನೆ ಸಮುದ್ರ ಮಂಥನ ಕಾರ್ಯದಲ್ಲಿ ತಾನೂ ಸೇರಿ, **ಉಣಿಸಿದಿ**= ಮೋಹಿನೀ ವೇಷದಿಂದ ದೇವತೆಗಳಿಗೆ ಹಂಚಿದೆ, **ಅದುಭುತ ಭೂಮಿಯ**= ಇತರರಿಂದ ಎತ್ತಲಾಗದ ಭೂಮಿಯನ್ನು, **ಸೆಗೆದುಒಯ್ದನ** = ಹೊತ್ತುಕೊಂಡು ಹೋದ ಹಿರಣ್ಯಾಕ್ಷನನ್ನು, **ಕೊಂದು** = ವರಹಾವತಾರದಿಂದ ಸಂಹರಿಸಿ, **ಮುದದಿ**=ಬಾಲ ಪ್ರಹ್ಲಾದನ ಸಂರಕ್ಷಣೆಗಾಗಿ ಅತ್ಯಂತ ಸಂತೋಷದಿಂದ, (ಲೀಲಾತಿಶಯದಿಂದ), **ಹಿರಣ್ಯಕನ ಉದರ ಬಗೆದ ಧೀರ**= ಹಿರಣ್ಯ ಕಶಿಪುವಿನ ಉದರ ಸೀಳಿ, ಸಂಹರಿಸಿದ ಲೀಲಾವೈಭವಮೂರ್ತಿ ಶ್ರೀ ನರಸಿಂಹನು ಅಸಮ ಪರಾಕ್ರಮಿ.

**ಬಲಿಯ ಮನೆಗೆ ಪೋಗಿ** = ೧೦೦ನೆಯ ಅಶ್ವಮೇಧ ಯಾಗ ಮಾಡುತ್ತಿದ್ದ ಬಲಿಚಕ್ರವರ್ತಿಯ ಯಜ್ಞ ಶಾಲೆಗೆ ಹೋಗಿ, **ದಾನ ಬೇಡಿ** = ಮೂರು ಪಾದ ಭೂಮಿಯನ್ನು ದಾನ ರೂಪವಾಗಿ ಬೇಡಿ, **ತುಳಿದೆ ಪಾತಾಳಕ್ಕೆ ಅವನ** = ಆ ಬಲಿ ಚಕ್ರವರ್ತಿಯನ್ನು ನಿನ್ನ ಪಾದದಿಂದ ಸುತಲ ಲೋಕಕ್ಕೆ ತುಳಿದೆ, **ಪೆತ್ತವಳ ಶಿರ ತರಿದ ಪ್ರವೀಣ** = ನಿನ್ನನ್ನು ಹೆತ್ತ ಮಾತೆ ರೇಣುಕಾ ದೇವಿಯನ್ನು ಜಮದಗ್ನಿಗಳ ಆದೇಶದಂತೆ, ಶಿರಚ್ಛೇಧನ ಮಾಡಿದ ಪಿತೃವಾಕ್ಯ ಪರಿಪಾಲಕನಾದ ಶ್ರೀ ಪರಶುರಾಮ, **ನಿನ್ನ ಛಲಕೆ** = ದೈತ್ಯ ಸಂಹಾರ ರೂಪವಾದ ನಿನ್ನ ಸಂಕಲ್ಪಕ್ಕೆ, **ಎಣೆಗಾಣೆ** = ಸರಿ ಸಮಾನನಾದವರನ್ನು ಯಾರನ್ನೂ ನಾಕಾಣೆ, **ರಾವಣನ ತಲೆಯನು ಇಳುಹಿ** = ದುಷ್ಟ ರಾವಣಾಸುರನ ಶಿರವನ್ನು ಕತ್ತರಿಸಿ, ಆತನನ್ನು ಸಂಹರಿಸಿದ ದಾಶರಥಿ ಶ್ರೀ ರಾಮಚಂದ್ರಮೂರ್ತಿ, **ಯದುಕುಲದಿ ಜನಿಸಿ** = ಯಾದವ ಕುಲದಲ್ಲಿ ಅವತರಿಸಿದ ಶ್ರೀ ಕೃಷ್ಣ (ಯಾದವ ಕೃಷ್ಣ), **ಮತ್ತೆ ಲಲನೇರ ಪತಿ ವ್ರತವ ಅಳಿದ** ತ್ರಿಪುರಾಸುರರ ಭಾರ್ಯೆಯರನ್ನು ಮೋಹಗೊಳಿಸಿ, ಅವರ ಪಾತಿವ್ರತ್ಯ ಭಂಗ ಮಾಡಿ,ತದ್ದ್ವಾರಾಸುರರನ್ನು ಸಂಹರಿಸಲು ಕಾರಣನಾದ ಶ್ರೀ ಬುದ್ಧರೂಪೀ, **ಅಶ್ವಾರೂಢ** = ಕೊನೆಯಲ್ಲಿ ಶಂಬಲವೆಂಬ ಗ್ರಾಮದಲ್ಲಿ ವಿಷ್ಣು ಯಶನೆಂಬ ಬ್ರಾಹ್ಮಣನಲ್ಲಿ ಕಲ್ಕಿ ನಾಮದಿಂದ ಅವತರಿಸಿದ ಅಶ್ವಾರೋಹೀ ಶ್ರೀ ಹರಿ.

**ಮಾನಸ ಪೂಜೆಯ ದಯದಿ** = ಮಾನಸ ಧ್ಯಾನವೆಂಬ ಧ್ಯಾನ ಸಿದ್ಧಿಯನ್ನು ಅನುಗ್ರಹಿಸಿ, **ಶ್ರೀನಾಥ** = ಹೇ ಲಕ್ಷ್ಮೀಪತಿಯೇ, **ಭವವ್ಯಾಧಿ ಕಳೆ** = ಸಂಸಾರವೆಂಬ ರೋಗವನ್ನು ಪರಿಹರಿಸು (ಕರ್ಮ ಬಂಧನದಿಂದ ವಿಮೋಚನಗೊಳಿಸು), **ಅನಾಥ ಬಂಧು** = ದೀನರಾದ ನಿನ್ನ ಭಕ್ತರಿಗೆ ಆಪ್ತ ಬಾಂಧವನು, **ಸುಮೋದಿ** = ಪೂರ್ಣಾನಂದಮಯನೇ, **ಚತುರಾನನ ಪಿತ** ಚತುರ್ಮುಖ ಬ್ರಹ್ಮದೇವರ ತಂದೆ. (ಹಿರಣ್ಯ ಗರ್ಭಕನಾಮಕ ಬ್ರಹ್ಮದೇವರು ಶ್ರೀ ಪರಮಾತ್ಮನ ನಾಭೀಕಮಲದಿಂದ ಸಂಜಾತರಾದರು), **ಕೃಪಾಂಭೋಧಿ** = ದಯಾ ಸಮುದ್ರನು, **ನಾನೊಬ್ಬರ ನರಿಯೆ** = ಸರ್ವೋತ್ತಮನಾದ ನಿನ್ನನ್ನು ಬಿಟ್ಟು ಅನ್ಯರನ್ನು ಅರಿಯೇ (ಏಕಮೇವಾ–

ದ್ವಿತೀಯನು), **ಗಾನ ವಿನೋದಿಯು** = ಸ್ತೋತ್ರ ಪ್ರಿಯನೆ, ಸಾಮಗಾನ ಲೋಲನು, **ಏನೇನು ಮಾಡುವ** = ನನ್ನಿಂದಾಗುವ ಕಾಯಿ, ಮಾನಸಿಕ, ಬೌದ್ಧಿಕ, ಐಂದ್ರಿಕ, ವಾಚನಿಕ ಇತ್ಯಾದಿ ಸಕಲ ಸಾಧನಗಳೆಲ್ಲವೂ (ವ್ಯಾಪಾರ ವಿಶೇಷಗಳೆಲ್ಲವೂ), **ನಿನ್ನದು** = ನೀನೇ ಬಿಂಬರೂಪದಿಂದ ಇದ್ದು, ಬಿಂಬ ಕ್ರಿಯಾ ದ್ವಾರಾ ಮಾಡಿ ಮಾಡಿಸಿದ್ದು ಎಂಬ ಅನುಸಂಧಾನವು.

**ನಿನ್ನ ಸಂಕಲ್ಪವಲ್ಲದೆ** = ನಿನ್ನ ಇಚ್ಛೆಯಾನುಸಾರ, ಇನ್ನು ಅನ್ಯಥಾ **ವಾಗಬಲ್ಲುದೆ** = ಸಕಲವೂ ನಡೆಯುವುವು. ಬೇರೆ ನಡೆಯುವುದಕ್ಕೆ ಎಂದೆಂದಿಗೂ ಸಾಧ್ಯವೇ ಇಲ್ಲ, ಸತ್ಯ ಸಂಕಲ್ಪ ಮೂರ್ತಿಯು ನೀನು, **ಇದು ಚೆನ್ನಾಗಿ ತಿಳಿಯದೆ** = ಸಕಲವೂ ನಿನ್ನ ಸಂಕಲ್ಪಾನುಸಾರ ನಡೆಯುವು ದೆಂಬ ಪರಮ ತತ್ತ್ವವನ್ನು ಅರಿಯದೇ, **ಮಂದ ಮಾನವನಾಗಿ ಬಾಳಿದೆ** = ಕೇವಲ ಅಲ್ಪ ಮತಿಯಾಗಿ, ಅಹಂಕರ್ತೃತ್ವಾಭಿಮಾನನಿಂದ ಆಯುಸ್ಸನ್ನು ಕಳೆದೆ, **ಎನ್ನಪರಾಧವ** = ಎನ್ನಿಂದ ಆದ ತಪ್ಪು ಮತ್ತು ಪಾಪಗಳನ್ನು ನೀ ಪರಿಗಣಿಸದೆ, **ಮನ್ನಿಸು ದಯದಿ** = ದಯಾ ದೃಷ್ಟಿಯಿಂದ ನನ್ನ ಕಡೆಗೆ ವೀಕ್ಷಿಸಿ, ನನ್ನನ್ನು ಕ್ಷಮಿಸಿ, ಸಂರಕ್ಷಿಸು ಹೇ ಲಕ್ಷ್ಮೀನರಸಿಂಹ, ಸಜ್ಜನರ ಸಕಲ ದುರಿತ ಪರಿಹಾರಕನೇ-ಎಂದು ಶ್ರೀಲಕ್ಷ್ಮೀನರಸಿಂಹ ದೇವರನ್ನು ಪ್ರಸಕ್ತ ಕೀರ್ತನ ಸಾಹಿತ್ಯದಲ್ಲಿ ಮಹಾತ್ಮ ಜ್ಞಾನಪೂರ್ವಕ ಸ್ತುತಿಗೈದಿದ್ದಾರೆ ಮಂಗಳಾತ್ಮರಾದ ರಂಗವಲಿದ ದಾಸಾರ್ಯರು.

❋

## ೩೩

**(ಜಗನ್ನಾಥವಿಠ್ಠಲಾಂಕಿತ)**

**ರಾಗ–ಪಂತುವರಾಳಿ** **ತ್ರಿಪುಟತಾಳ**

**ನೀರ ತರಂಗಿಣಿ ತೀರ ನಾರಸಿಂಹ ॥** **॥ಪ॥**

ಸಾರಿದೆನೋ ತವ ಪಾದ ಪಂಕಜ
ತೋರು ಮನದಲಿ ತವಕದಿ ॥ ||೫||

ನಾರದಸುತ ಬಿಚ್ಚರೀರವ ಶ್ರೀ ಭೂ ದು-
ರ್ಗಾರಮಣ ದುರಿತಾರಿ ಬ್ರಹ್ಮ ಸ-
ಮೀರ ಮುಖ ವಿಬುಧಾರ್ಚಿತ
ಚಾರು ಚರಣ ಯುಗ ಕ್ಷೀರಾಬ್ಧಿ ಶಯನ ಮ-
ದ್ಧಾರ ನಿನ್ನದು ಮೂರು ಲೋಕದ
ಸೂರಿಗಮ್ಯ ಸುಖಾತ್ಮಕ ॥ ||೬||

ವೇದವೇದ್ಯ ಸಂಸಾರೋದಧಿ ತಾರಕ
ಭೇದ ಬೇದ ವಿಷಾದವೇ ಮೊದ
ಲಾದ ದೋಷವರ್ಜಿತ
ಶ್ರೀ ದ ಶ್ರೀಶ ಅನಂತ ಅಪ್ತಕಾಮ
ಬಾದರಾಯಣ ಭಕ್ತಪರ ಪ್ರ-
ಹ್ಲಾದ ಪೋಷಕ ಪಾಹಿಮಾ ॥ ||೭||

ಹೋತ ಹೃದ್ಯ ಜಗನ್ನಾಥವಿಠ್ಠಲ ನಿನ್ನ
ಮಾತು ಮಾತಿಗೆ ಸ್ಮರಿಸುತಿಹ ಸ-
ಚ್ಚೀತನರನು ನೀ ಸರ್ವದಾ
ವೀತಶೋಕ ಭವ ಭೀತಿ ಬಿಡಿಸಿ ತವ
ದೂತರೊಳಗಿಡು ಮಾತದ್ವಿಗ ಭೂತ ಭಾವನ ಭವ್ಯದ ॥ ||೮||



**ಅರ್ಥವಿವರಣೆ :**

**ನೀರ ತರಂಗಿಣಿ** = ಹರಿಯುತ್ತಿರುವ ನದಿ, ನದೀ ತೀರಸ್ಥ ನಾರಸಿಂಹನ ಸ್ತೋತ್ರ, **ಸಾರಿದೆನೋ** = ನಿನ್ನ ಬಳಿಗೆ ಬಂದಿದ್ದೇನೆ ಶರಣಾಗತನಾಗಿ, **ತವಪಾದ ಪಂಕಜ ತೋರು** = ನಿನ್ನ ಚರಣಾರವಿಂದಗಳ ದರ್ಶನ ಭಾಗ್ಯವನ್ನು ನೀಡು, **ಮನದಲಿ ತವಕದಿ** = ನನ್ನ ಮನಸ್ಸಿನಲ್ಲಿ ಜಾಗ್ರತಿಯಾಗಿ (ತ್ವರಿತವಾಗಿ), ಮನಸಾ ನಿನ್ನ ಪಾದ ಧ್ಯಾನ.

**ನಾರದನುತ** = ದೇವರ್ಷಿಗಳಾದ ನಾರದರಿಂದ ಸಂಸ್ತುತ್ಯ ಮಾನನಾದ, **ಬಿಚ್ಚರೀವ** = ಸ್ವರೂಪ ಶರೀರ ಅಂದರೆ ಸ್ವರೂಪಾಂತರ್ಗತ ಭವದ್ರೂಪ-ನರಸಿಂಹರೂಪವೆಂದು ತಾತ್ಪರ್ಯ, **ಶ್ರೀ ಭೂ ದುರ್ಗಾರಮಣ** = ಸತ್ತ್ವಗುಣಾಭಿಮಾನಿ ಶ್ರೀ ರಜೋಗುಣಾಭಿಮಾನಿ ಭೂ, ತಮೋಗುಣಾಭಿಮಾನಿ ದುರ್ಗಾ. ಈ ಶ್ರೀಲಕ್ಷ್ಮೀದೇವಿಯರ ತ್ರಿಗುಣಾಭಿಮಾನಿ ರೂಪ ತ್ರಯಗಳು. ಅವರಿಗೆ ಪತಿಯಾದ ಶ್ರೀಹರಿ, **ದುರಿತಾರಿ** = ಸಜ್ಜನರ ಸಕಲ ಪಾಪಪರಿಹಾರಕ ರೂಪ, **ಬ್ರಹ್ಮ** = ಚತುರ್ಮುಖ ಬ್ರಹ್ಮದೇವರು, **ಸಮೀರ** = ಶ್ರೀವಾಯುದೇವರು, **ಮುಖ** = ಇವರೇ ಮೊದಲಾದ, **ವಿಬುಧಾರ್ಚಿತ** = ದೇವತಾ ಸಮೂಹದಿಂದ ಪೂಜಿತನಾದವನೇ, **ಚಾರು ಚರಣ ಯುಗ** = ಸುಂದರವಾದ ಪಾದದ್ವಯಗಳು ಇಲ್ಲಿ **ಚಾರು**-ಎಂಬ ಶಬ್ದ ಪ್ರಯೋಗವು ಔಚಿತ್ಯಪೂರ್ಣವಾಗಿದೆ. ಅಪ್ರಾಕೃತವಾದ. ಜಗದ್ವಿಲ್ಲಕ್ಷಣವಾದ ಎಂಬರ್ಥ, **ಕ್ಷೀರಾಬ್ಧಿಶಯನ** = ಕ್ಷೀರ ಸಮುದ್ರದಲ್ಲಿ ಮಲಗಿರುವ ಶ್ರೀಮನ್ನಾರಾಯಣನು, **ಮುದ್ಧಾರ ನಿನ್ನದು** = ನನ್ನ ಸಂರಕ್ಷಣೆಯ ಹೊಣೆ ನಿನ್ನದು. (ಯೋಗಕ್ಷೇಮಂ ವಹಾಮ್ಯಹಂ), **ಮೂರು ಲೋಕದ ಸೂರಿಗಮ್ಯ** = ತ್ರಿಲೋಕಾತ್ಮಕವಾದ ಜಗತ್ತಿನಲ್ಲಿರುವ ಸಕಲ ಜ್ಞಾನಿಗಳಿಂದ ಪ್ರಾಪ್ಯನು, (ಜ್ಞಾನಗಮ್ಯನು), **ಸುಖಾತ್ಮ** = ಅನಂತಪೂರ್ಣನು.

**ವೇದ ವೇದ್ಯ** = ವೇದಗಳಿಂದ ಮುಖ್ಯವಾಗಿ ಪ್ರತಿಪಾದ್ಯನಾದವನು, **ಸಂಸಾರೋದಧಿತಾರಕ** = ಜೀವರನ್ನು ಜನನ ಮರಣಾಖ್ಯವಾದ ಸಂಸಾರ ವೆಂಬ ಅಪಾರವಾದ ಸಮುದ್ರದಿಂದ ದಾಟಿಸುವವನು, **ಭೇದ ಭೇದ ವಿಷಾದ ಮೊದಲಾದ** = ದೊಡ್ಡ ತುಂಡಾಗಿ ಕತ್ತರಿಸುವುದು (ಭೇದ), ಸಣ್ಣ ಸಣ್ಣ ಭಾಗಗಳಾಗಿ ಕತ್ತರಿಸುವುದು (ಛೇದ), ದುಃಖ ಇವೇ ಮೊದಲಾದ, **ದೋಷವರ್ಜಿತ** = ದೋಷಗಳಿಂದ ದೂರನಾದವನು. (ನಿರ್ದೋಷನು), **ಶ್ರೀ ದ** = ಶುಭಪ್ರದನು, **ಶ್ರೀಶ** = ಶ್ರೀಲಕ್ಷ್ಮೀದೇವಿಗೆ ಪತಿ ಹಾಗೂ ನಿಯಾಮಕನು, **ಅನಂತ** = ಕೊನೆಯಿಲ್ಲದವನು, **ಆಪ್ತಕಾಮ** = ಸ್ವಾನಂದ ಪರಿಪೂರ್ಣ, **ಬಾದರಾಯಣ** = ಭಗವಾನ್ ಶ್ರೀ ವೇದವ್ಯಾಸ ದೇವರು, **ಭಕ್ತವರ ಪ್ರಹ್ಲಾದ ಪೋಷಕ** = ಭಾಗವೋತ್ತಮರಾದ ಬಾಲ ಪ್ರಹ್ಲಾದ ನನ್ನು ಸಂರಕ್ಷಿಸಿದ ಶ್ರೀಲಕ್ಷ್ಮೀನರಸಿಂಹನು, **ಪಾಹಿಮಾಂ** = ನನ್ನನ್ನು ಸಂರಕ್ಷಿಸು.

**ಹೋತ** = ಸಕಲ ಯಜ್ಞ ಫಲ ಭೋಕ್ತ, **ಹೃದ್ಯ** = ಸಕಲ ಜೀವರ ಹೃತ್ಪದ್ಮಸ್ಥಿತ ಬಿಂಬಮೂರ್ತಿ, **ಮಾತು ಮಾತಿಗೆ ಸ್ಮರಿಸುತಿಹ** = ಬಾರಿ ಬಾರಿಗೂ ಧ್ಯಾನಿಸುತ್ತಿರುವ, **ಸಚ್ಚೇತನರನು** = ಮುಕ್ತಿಯೋಗ್ಯ ಜೀವರನು, **ನೀ ಸರ್ವದಾ** = ನೀನು ನಿರಂತರದಲ್ಲಿ, **ಭವ ಭೀತಿ ಬಿಡಿಸಿ** = ಸಂಸಾರದ ಭಯದಿಂದ ದೂರನಾಗಿಸಿ, **ತವ ರೂಪರೊಳಗಿದು** = ಮಂಗಳಾತ್ಮರಾದ ನಿನ್ನ ದಾಸರ ಸತ್ಸಂಗದಲ್ಲಿ ಇಡು, **ವೀತಶೋಕ** = ಏಕೆಂದರೆ ನೀನು ಸಕಲ ಶೋಕವಿದೂರನು (ಅಪ್ರಾಕೃತ ಆನಂದಸ್ವರೂಪ), **ಮಾತರಿಶ್ವಗ** = ವಾಯುವಂತರ್ಗತನಾದ, **ಭೂತ ಭಾವನ** = ಸಕಲ ಜೀವರ ಬಿಂಬರೂಪನಾದ, **ಭವ್ಯದ** = ಪರಮ ವೈಭವ ಹಾಗೂ ಮಂಗಳ ಸ್ವರೂಪಿಯು.



## ೩೪

### (ಶ್ರೀನರಸಿಂಹ ಸುಳಾದಿ) (ಶ್ರೀಜಗನ್ನಾಥವರ್ಯರ ಕೃತಿ)

#### ॥ ಧ್ರುವತಾಳ ॥

ದುರಿತವನ ಕುಠಾರೀ ದುರ್ಜನ ಕುಲವೈರಿ
ಶರಣಾಗತ ವಜ್ರಪಂಜರ ಕುಂಜರ
ವರ ಸಂರಕ್ಷಕ ಜನ್ಮಮರಣರಹಿತ ಮಹಿತ
ಪರಮ ಕರುಣಾಸಿಂಧು ಭಕ್ತ ಬಂಧು
ಸ್ವರತ ಸ್ವತಂತ್ರ ಜಗದ್ಭರಿತ ಚಿತ್ಸುಖಪೂರ್ಣ
ಹರಿಯೆ ಕ್ಷರಾಕ್ಷರ ಪುರುಷೋತ್ತಮ
ಉರಗಶಯನ ವೈಕುಂಠವರ ಮಂದಿರ ಚಂದಿರ
ತರಣಿಕೋಟಿ ಸಂಕಾಶ ವಿಮಲಕೇಶ
ಧುರದೊಳಗರ್ಜುನನ ತುರಗ ನಡೆಸಿದ ಸಂ–
ಗದ ಭಯಂಕರ ಲೋಕೈಕ ಧೀರ
ಸ್ಮರಣೆ ಮಾತ್ರದಿ ಅಜಾಮಿಳಗೆ ಮುಕ್ತಿಯನಿತ್ತೆ
ಅರಿದೇನೊ ನೀ ಎಮ್ಮ ಪೊರೆವುದಕ್ಕೆ
ಸರುವ ಕಾತುರ ಜಗನ್ನಾಥವಿಠ್ಠಲ ಭಕ್ತ–
ಪರಿಪಾಲಕನೆಂಬ ಬಿರುದು ನಿನ್ನದೆಲ್ಲವೆ ॥ ೧ ॥

#### ॥ ಮಟ್ಟತಾಳ ॥

ವಿಧಿಪಿತನೀನಲ್ಲದೆ ನಿಧಿಪತಿಗಳು ಉಂಟೆ
ಸಧನನಾಗಿ ಇಪ್ಪ ನಿನ್ನದಾಸರಿಗಾಗಿ
ಮಧುಸೂದನ ಜಗನ್ನಾಥವಿಠ್ಠಲರೀಯೆ
ನಿ ಧನನೆನಿಸಿಕೊಂಡೆ ನಿನ್ನ ದ್ವೇಷಿಗಳಿಗೆ ॥ ೨ ॥

|| ರೂಪಕತಾಳ ||

ಮೂರುಲೋಕಸ್ವಾಮಿ ಸರ್ವಜ್ಞ ಸುಖಪೂರ್ಣ
ಪ್ರೇರಕ ಸಾಕ್ಷಿ ಕಾರಣ ಕಾರ್ಯ ದೋಷ ವಿ-
ದೂರ ಸದ್ಗುಣಸಾಂದ್ರ ಸುಜನಾಂಬುಧಿ ಚಂದ್ರ
ಭಾರಕರ್ತನೆ ಜಗಕೆ ನೀನಿರೆ ಎಮ್ಮ ಮ-
ನೋರಥವ ಸರಿಸುವುದೇನಾಶ್ಚರ್ಯವೊ
ಕ್ರೂರ ಮಾನವರ ಸಂಹಾರ ಮಾಡಿಸು ಗುರು-
ಮಾರುತನಿಂದಲೆ ಶೀಘ್ರನಾಗೀ
ನೀ ರಕ್ಷಿಸೆಂದು ಪ್ರಾರ್ಥಿಸುವ ಭಕ್ತರಿಗೆ ಭೂರಿ-
ಸಾರ ಭಾಗ್ಯವನಿತ್ತು ನೀ ರಕ್ಷಿಸನುದಿನ
**ಶೂರ ಜಗನ್ನಾಥವಿಠ್ಠಲ** ನೀನಲ್ಲದಿನ್ನಾರು ಭ-
ಕ್ತರ ಕಾವ ಕಾರುಣಿಗಳು ಜಗದೀ || ೩ ||

|| ಝಂಪಿತಾಳ ||

ಪಿತನಿಂದ ನೊಂದ ಪ್ರಹ್ಲಾದನ್ನ ಕಾಯಿದೆ ದೇ-
ವತೆಗಳಿಗೆ ಬಂದ ಭಯ ಪರಿಹರಿಸಿ ದಯದಿ ದ್ರೌ-
ಪದಿಯ ಮೊರೆಕೇಳಿ ದಿವ್ಯಾಂಬರವ ಕರುಣಿಸಿದೆ
ಕ್ಷಿತಿಜನಾಬಯದಿ ಬಳಲುವ ಬಾಲೆಯರ ದ್ವಾರಾ-
ವತಿಗೆ ಕರೆದೊಯ್ದು ಒಲಿದವರ ಪೋಷಿಸಿದೆ ಮಾ-
ರುತಿಯ ಕರದಿಂದ ಬೃಹದ್ರಥನ ಕುವರನ ಕೊಲಿಸಿ
ಕ್ಷಿತಿಪರನ ಬಿಡಿಸಿ ಪಾಲಿಸಿದೆ ಕರುಣದಲಿ ಕುರು-
ಪೃತನದೊಳು ಪಾಂಡವರ ಗೆಲಿಸಿ ಕೀರ್ತಿಯ ಪಡೆದೆ
ಶತಮೋದನಾಸ್ತ್ರದಲಿ ಗರ್ಭದೊಳಗೆ ಪೀ-
ಡಿತನಾದ ಶಿಶು ಪರೀಕ್ಷಿತನ ಸಂತೈಸಿದೇ
ಶಿತ ಕಂಠಗೊಲಿದು ಸಾರಥಿಯಾಗಿ ಮುಪ್ಪುರದ

ಸತಿಪುರನ ಕೊಲಿಸಿ ಕೀರುತಿಯಿತ್ತೆ ಭಕುತನಿಗೆ
ಮಿತಿಯುಂಟೆ ನಿನ್ನ ಕರುಣಕೆ ದೇವವರಿಯ ಸಾಂ-
ಪ್ರತ ಬೇಡಿಕೊಂಬೆ ಬಿನ್ನಪ ಕೇಳಜಸ್ರ ಸಂ-
ತುತಿಪ ಭಕುತನ ಮನೋರಥವ ಪೂರೈಸು ಸು-
ಪ್ರತನಾಮ ಶ್ರೀಜಗನ್ನಾಥವಿಠ್ಠಲ ಭಾಗ-
ಪತಜನಪ್ರಿಯ ನೀನೆಗತಿ ಎಮಗೆ ಇಹಪರದಿ || ೪ ||

|| ತ್ರಿಪುಟತಾಳ ||

ನೀ ಸಲಿಹಲಿನ್ನಾರು ಬಂದ-
ಡ್ಡೈಸುವರು ಮೂಲೋಕದೊಳಗ್ಹೊರ
ಗೀ ಸಮಸ್ತ ದಿವೌಕಸರು ನೀನೆ
ಗೇ ಸಮರ್ಪಕವಾದ ಕಾರ್ಯ ಮ-
ಹಾ ಸುಖದಿ ನಡೆಸುವರು ಲಕ್ಷ್ಮೀ
ದಾಸಿ ಎನಿಪಳು ನಿನ್ನ ಮನೆಯಲ್ಲಿ
ದೇಶ ಕಾಲಾದಿಗಳು ನಿನಗಾ-
ವಾಸ ಯೋಗ್ಯಸ್ಥಾನವೆನಿಪವು
ಶ್ರೀಶ ಲೋಕತ್ರಯಕೆ ಲೇಸಾ-
ಯಾನವೆಂಬುದು ಕಾಣೆನೋ ಕರು-
ಣಾ ಸಮುದ್ರನೆ ಒಲಿದು ಎಮ್ಮಭಿ-
ಲಾಷೆ ಪೂರೈಸಿಂದು ವೇದವ್ಯಾಸ ಕೀಟಕೆ ಒಲಿದು
ಮಹಿ ಸಿಂಹಾಸನವೇರಿಸಿ ಮೆರೆಸಿದೆ ಪ-
ರಾಶಾತ್ಮಜ ನಿನ್ನ ಬಣ್ಣಿಸಿ
ನಾ ಸಮರ್ಥನೆ ಎಂದಿಗಾದರು
ನೀ ಸುಲಭನೆಂದರಿದು ನಾ ಬಿ-
ನ್ನೈಸಿದೆನೊ ಈ ರೀತಿಯಲಿ ಸ-

ವಾಸನಿಲಯ **ಜಗನ್ನಾಥವಿಠ್ಠಲೇಸು**
ಮಾತುಗಳ್ಯಾಕೆ ಮನ್ಮನ-
ದಾಸೆ ಪೂರ್ತಿಯ ಮಾಡಿ ಎಮ್ಮನು
ದಾಸಿಸದೆ ದಯದಿಂದ ನೋಳ್ಪುದು ॥ ೫ ॥

## ॥ ಅಟ್ಟತಾಳ ॥

ನಿಗಮ ತತಿಗಳಿಗೆ ವೇದ್ಯವಾದ ನಿನ್ನ
ಅಗಣಿತ ಮಹಿಮೆ ಲಕುಮಿ ಬೊಮ್ಮ ಭವಾ-
ದಿಗಳು ತಾವರಿಯರು ಸಾಕಲ್ಯಮಂದ ಜೀ-
ವಿಗಳಿಗೆ ಗೋಚರಿಸುವುದೆ ನಿನ್ನ ರೂಪ
ಭಗವಂತ ನೀನೆ ದಯಾಳು ಎಂದರಿದು ನಾ-
ಪೊಗಳಿದನೊ ಯಥಾಮತಿಯೊಳಗೆ ಲೇಶ
ಬಗೆಯಾದೀಗನ್ನಪರಾಧ ಕೋಟಿಗಳನು
ಜಗತಿಪತಿ ತನ್ನ ಮಗುವಿನ ತೊದಲು ಮಾ-
ತುಗಳನು ಕೇಳಿ ತಾ ನಗುತಲಿ ಕಾಮಿತ
ಬಗೆಬಗೆಯಿಂದ ಪೂರ್ತಿಸಿಮಗೆ ಹರುಷದಿ
ಬಿಗಿದಪ್ಪಿ ಮೋದಿಪನಲ್ಲದೆ ಶಿಶುವಿನ
ತೆಗೆದು ಬಿಸುಟು ಮತ್ತೆ ಹಗೆಗೊಂಬನೇಸೋ ತ್ರೈ-
ಯುಗನೆ ಬಿಡದೆ ಪಾಪಿ ಪೊಗಳುವ ದಾಸನೀ
ಬಗೆ ಬಡತನವ್ಯಾಕೋ ಸಂಸಾರದೊಳಗೆ ನಾ-
ಲ್ಮೊಗನಯ್ಯ ಅರ್ಥ ಕಾಮಗಳೊಳಗಿಪ್ಪ ಈ
ವರ್ಗಗೆ ರೂಪವೊಂದಾಗೆ ಆವುದಸಾಧ್ಯವೋ
ಗಗನ ಪಾತಾಳ ವ್ಯಾಪ್ತ ರೂಪನೆ ಕರ-
ಮುಗಿವೆ ಗೋಚರಿಸೆಮ್ಮ
ದೃಗಯುಗಗಳಿಗಿದು ಯುಗಾವರ್ತ

**ಜಗನ್ನಾಥವಿಠ್ಠಲ** ನರ-
ಮೃಗನಾಗಿ ಸ್ತಂಭದಿಂದೊಡೆದು ಬಂದೊದಗಿದೆ || ೬ ||

|| **ಏಕತಾಳ** ||

ಶ್ರೀನಿಧೆ ಪ್ರತಿದೇಹಗಳಲ್ಲಿ ಗತಿ
ನೀನಲ್ಲದೆ ಎಮಗಾರಿಹ ಪರದಲ್ಲಿ
ಆ ನಳಿನಭವ ಭವಾದ್ಯನಿಮೇಷರ ನಿ-
ಜಾನಂದವರಿತು ಫಲಗಳ ಕೊಡುವಿ ಮ-
ಹಾನುಭಾವ ಎಮ್ಮಭಿಮತ ನಲಿಸುವು-
ದೇನಚ್ಚರಿ ನಿನ್ನರಸಿ ಲಕುಮಿ ಕಡೆ
ಗಾಣಳು ಪರಮೈಶ್ವರ್ಯದ ಪ್ರಾಂತ ಚಿ-
ದಾನಂದಮಯನೆ ಪ್ರಣತರ ಅಧಿಕಾ-
ರಾನುಸಾರ ಸುಖ ಪಾನೀಯಧೀಯೊಳು ಲೋಲ್ಯಾಡಿಸುತಿಹೆ
ದಾನಿಗಳರಸ ಮನಾದಿಕರಣಗಳ
ಮಾನಿಗಳೊಡೆಯನೆನಿಸುವ ಮುಖ್ಯ
ಪ್ರಾಣಪತಿಗೆ ನೂತನ ವಿಜ್ಞಾಪನ-
ವೇನುಂಟನುದಿನದಲಿ ಮಾಳ್ಪುದು
ಮಾನದ ಗುರು **ಜಗನ್ನಾಥವಿಠ್ಠಲ** ಕರು-
ಣಾನಿಧೆ ಸರ್ವರ ಸುಲಭ ನೀನಲ್ಲದೆ || ೭ ||

|| **ಜೊತೆ** ||

ಚಟುಲಕಾರ್ಯಗಳ ಸಂಘಟನೆ ಮಾಡಿಸುವಿ ನಿ-
ಷ್ಕುಟಿಲ **ಜಗನ್ನಾಥ ವಿಠ್ಠಲ** ದೇವೋತ್ತಮ



**ಅರ್ಥವಿವರಣೆ :–**

ಜಗನ್ಮಾನ್ಯರಾದ ಶ್ರೀ ಜಗನ್ನಾಥದಾಸವರ್ಯರಿಂದ ವಿರಚಿತ ಈ **ನರಸಿಂಹಸುಳಾದಿಯು** ಪೂರ್ವ ಪ್ರಾಸಂಗಿಕ ಇತಿಹಾಸವು ಮಹತ್ವ ಪೂರ್ಣ ವಾದುದು.

ಶ್ರೀ ಜಗನಾಥದಾಸರ ಕಾಲದಲ್ಲಿ **ವೆಂಕಟಪ್ಪನಾಯಕ** ನೆಂಬಾತನು ಸುರಪುರದ ರಾಜನಾಗಿದ್ದನು. ನಾಯಕನು ತಿರುಪತಿಯ ತಿಮ್ಮಪ್ಪನ ಭಕ್ತನಾಗಿದ್ದನು. ಒಮ್ಮೆ ದಾಸರಾಯರು ಪರಿವಾರ ಸಹಿತರಾಗಿ ಸುರ ಪುರದ ಮಾರ್ಗವಾಗಿ ಧರ್ಮಪ್ರಚಾರ ಕಾರ್ಯಕ್ಕಾಗಿ ಸಂಚಾರ ಕೈಗೊಂಡಿದ್ದರು ದಾಸರ ಮಹಾಮಹಿಮೆಗಳನ್ನು ಕೇಳಿ, ಅರಿತಿದ್ದ ವೆಂಕಟಪ್ಪನಾಯಕನು ಸಕಲ ಮರ್ಯಾದಾಪೂರ್ವಕ ದಾಸರನ್ನು ಸ್ವಾಗತಿಸಿ, ಸತ್ಕರಿಸಿದನು. ಅವರ ಜ್ಞಾನಪ್ರಭಾವದಿಂದ ಅವರ ಶಿಷ್ಯನಾದನು.

ಆ ಸಮಯದಲ್ಲಿ ಒಬ್ಬ ಬಡ ಗೃಹಸ್ಥ ವಿಪ್ರನು ಬಡತನದ ಬೇಗೆ ಯಿಂದ ಬೆಂದು ಬೇಸತ್ತು ಬಾಳಿನಲ್ಲಿ ನಿರಾಶನಾಗಿ, ನಿಸ್ಸಾಹಕನಾಗಿದ್ದನು. ಆ ದರಿದ್ರ ಬ್ರಾಹ್ಮಣನು ದಾಸರನ್ನು ಮೊರೆ ಹೋಗಬೇಕೆಂಬ ಉದ್ದೇಶ ದಿಂದ ಸುರಪುರಕ್ಕೆ ಆಗಮಿಸಿದನು. ದಾಸರಿಗೆ ದುಂಬಾಲು ಬಿದ್ದನು. ಒಮ್ಮೆ ತೀರ್ಥಪ್ರದಾನ ಸಮಯ ಮ್ಲಾನವದನನಾಗಿ ಆ ದರಿದ್ರನು ದಾಸರಿಗೆ ಎದುರಿಗೆ ನಿಂತಿದ್ದಾನೆ. ದಾಸರು ದಯಾಂತಃಕರಣ ಹೃದಯರಾಗಿ ಆತನನ್ನು ವಿಚಾರಿಸಿದ್ದಾರೆ. ವಿಪ್ರನು ಬಿಕ್ಕಿ ಬಿಕ್ಕಿ ಅಳುತ್ತಾ, ತನ್ನ ದುರಂತ ದ್ದಾರಿದ್ರ್ಯಾವಸ್ಥೆಯನ್ನು ದಾಸರಲ್ಲಿ ಭಿನ್ನವಿಸಿಕೊಂಡ,

ದಾಸರು ಆ ಬ್ರಾಹ್ಮಣನ ಮುಖವನ್ನೇ ದಿಟ್ಟಿಸಿ ನೋಡಿದ್ದಾರೆ. ಕರುಣಾವಾಣಿಯಿಂದ ಆತನನ್ನು ಕುರಿತು– "ಅಪ್ಪಾ ಹಿಂದಿನ ಏಳುಜನ್ಮ ಗಳಲ್ಲಿ ಹುಡುಕಿದರೂ ನಿನ್ನಂಥ ಸತ್ಪಾತ್ರದಾನವಾಗಿಲ್ಲ. ಇದರಿಂದ ನಿನಗೆ ಈ ದಾರಿದ್ರ್ಯಾವಸ್ಥೆ ಪ್ರಾಪ್ತವಾಗಿದೆ" ಎಂದರು. ಅವನಲ್ಲಿದ್ದ ಮುರುಕು ತಂಬಿಗೆಯನ್ನು ತಾವೇ ದಾನರೂಪದಲ್ಲಿ ಸ್ವೀಕರಿಸಿದ್ದಾರೆ. ಆ ತಂಬಿಗೆ

ಯನ್ನು ಮಾರಿ, ಸಕ್ಕರೆಯನ್ನು ತಾರೆಂದು ಅವನಿಗೆ ಹೇಳಿ ಕಳುಹಿಸಿದರು. ಅದರಿಂದ ಪಾನಕ ತಯಾರಿಸಿ ವಸಂತಮಾಧವನ ಪ್ರೀತ್ಯಾರ್ಥವಾಗಿ ಬ್ರಾಹ್ಮಣ ಸುವಾಸಿನಿಯರಿಗೆ ಕೃಷ್ಣಾರ್ಪಣಪೂರ್ವಕ ಅವನ ದ್ವಾರವೇ ಕೊಡಿಸಿದರು. ಆ ವಿಪ್ರನ ದಾರಿದ್ರ್ಯ ಪರಿಹಾರವಾಗಲೆಂದು ತಮ್ಮ ಕುಲ ದೈವನಾದ ಗರುಡವಾಹನ ಶ್ರೀ ಲಕ್ಷ್ಮೀನರಸಿಂಹ ದೇವರನ್ನು ಪ್ರಾರ್ಥಿಸಿ. **ಪ್ರಸಕ್ತ ನರಸಿಂಹ ಸುಳಾದಿಯನ್ನು** ರಚಿಸಿ ಅದರ ಅರ್ಥವನ್ನು ಅವನಿಗೆ ಉಪದೇಶಿಸಿ ಪಠಿಸುವಂತೆ ಆದೇಶವಿತ್ತು ಅನುಗ್ರಹಿಸಿದ್ದಾರೆ.

ಆ ಗೃಹಸ್ಥನು ಸುರಪುರ ಪ್ರಾಂತದ ಗುಡ್ಡಸಾಲನ್ನು ಆಶ್ರಯಿಸಿ, ಒಂದು ಪ್ರಾಣದೇವರ ದೇವಾಲಯದಲ್ಲಿ ಕೂತು, ಪ್ರತಿನಿತ್ಯವೂ ಭಕ್ತಿ ಪುರಸ್ಸರವಾಗಿ ಸುಳಾದಿಯನ್ನು ಪಠಿಸ ಹತ್ತಿದನು.

ಆ ಸಮಯದಲ್ಲಿ ಸುರಪುರದ ವೆಂಕಟಪ್ಪನಾಯಕನು ಬೇಟೆಯಾಡುತ್ತಾ ಆ ಗುಡ್ಡದ ಸಮೀಪಕ್ಕೆ ಬಂದನು, ಆ ಸಮಯದಲ್ಲಿ ರಾಹುತನೊಬ್ಬನು ರಾಜಧಾನಿಯಿಂದ ಒಂದು ಪತ್ರವನ್ನು ತಂದು ರಾಜನ ಕೈಗೆ ಒಪ್ಪಿಸಿದನು. ಪತ್ರದ ಒಕ್ಕಣೆಯಲ್ಲಿ ಓದಲು, ಬ್ರಾಹ್ಮಣರನ್ನು ಆರಿಸಿ, ತರುವಂತೆ ರಾಜಾಜ್ಞೆ ಇತ್ತನು. ದೈವಯೋಗದಿಂದ ಆ ರಾಹುತನಿಗೆ ಸುಳಾದಿಯನ್ನು ಪಠಿಸುತ್ತಿದ್ದ ಆ ಬಡ ಬ್ರಾಹ್ಮಣನೇ ಕಣ್ಣಿಗೆ ಬಿದ್ದನು, ಗೃಹಸ್ಥನಿಂದ ಪತ್ರಗತ ವಿಷಯವನ್ನು ಕೇಳಿ, ನಾಯಕನಿಗೆ ಪರಮಸಂತೋಷವಾಗಿದೆ. ತಕ್ಷಣ ದೊರೆಯು ಆ ಗೃಹಸ್ಥನ ಸಕಲ ವೃತ್ತಾಂತಗಳನ್ನೂ ತಿಳಿದುಕೊಂಡು, ಅರಮನೆಯ ಖಜಾನೆಯ ಅಧಿಕಾರಿಯನ್ನಾಗಿ ನೇಮಿಸಿದನು. ಕಾಲಾಂತರ ದಲ್ಲಿ ಸುರಪುರದ ದಿವಾನ ಪದವಿ ಸೇರಿದನು. ಮಹಾ ಶ್ರೀಮಂತನಾದರೂ ನರಸಿಂಹ ಸುಳಾದಿಯ ಪಠನವನ್ನು ತನ್ನ ಬಾಳಿನ ಉದ್ದಕ್ಕೂ ಬಿಡಲಿಲ್ಲ. ಮಹಾನುಭಾವರಾದ ಶ್ರೀ ದಾಸರ ಉಪಕಾರವನ್ನು ಮರೆಯಲಿಲ್ಲ.

ಸಕಲ ದುರಿತಗಳನ್ನು ಪರಿಹರಿಸಿ, ಇಹಪರಂಗಳಲ್ಲಿ ಸೌಖ್ಯವನ್ನೀಯುವ ಈ **ನರಸಿಂಹ ಸುಳಾದಿಯು** ಸತ್ಸಾಧಕರಿಗೆ ತಾರಕ ಮಂತ್ರವಾಗಿದೆ–ಎಂದರೆ **ಅತಿಶಯೋಕ್ತಿ** ಎನಿಸಲಾರದು.

**ದುರಿತವನ ಕುಠಾರೀ** = ಪಾಪಗಳೆಂಬ ಅರಣ್ಯಕ್ಕೆ ಕೊಡಲಿಯು ಸದೃಶವಾಗಿದೆ ಶ್ರೀನರಸಿಂಹನ ನಾಮಸ್ಮರಣೆ, **ದುರ್ಜನ ಕುಲವೈರಿ** = ದುಷ್ಟ ಜನರೆಂಬ ದೈತ್ಯರ ವಂಶಕ್ಕೆ ಶತ್ರು ರೂಪವಾಗಿದೆ, **ಶರಣಾಗತ ವಜ್ರ ಪಂಜರ** = ಮೊರೆಹೊಕ್ಕ ಜನರಿಗೆ ವಜ್ರ ಕವಚದಂತೆ ರಕ್ಷಕನು, **ಕುಂಜರವರ ಸಂರಕ್ಷಕ** = ಗಜೇಂದ್ರ ಪಾಲಕನು (ಕುಂಜರ-ಗಜ), **ಜನ್ಮ ಮರಣ ರಹಿತ** = ಆದ್ಯಂತ ವಿದೂರ (ನಿತ್ಯ ಶಾಶ್ವತ ಸ್ವರೂಪನು), **ಮಹಿಮ** = ಅಪಾರ ಮಹಿಮಾ ಸಂಪನ್ನನು, **ಪರಮ ಕರುಣಾಸಿಂಧು** = ಅತ್ಯಂತ ಶ್ರೇಷ್ಠನಾದ ದಯಾಸಾಗರನು, **ಭಕ್ತ ಬಂಧು** = ಭಕ್ತರಿಗೆ ಆಪ್ತ ಬಾಂಧವನು (ಬಿಂಬಗಲವ ಬಿಂಬರೂಪಿಯು), **ಸ್ವರತ** = ತನ್ನ ಭಗವದ್ರೂಪಗಳಲ್ಲಿಯೇ ಕ್ರೀಡಿಸುವವನು (ಸ್ವರಮಣನು), **ಸ್ವತಂತ್ರ** = ಯಾರಿಂದಲೂ ಪರಾಧೀನನಲ್ಲ. (ಸ್ವಾತಂತ್ರ್ಯ ಎಂಬುದು ಶ್ರೀಪರಮಾತ್ಮನ ಸ್ವರೂಪಗತ ಧರ್ಮವು), **ಜಗದ್ಭರಿತ** = ಜಗತ್ತಿನ ಎಲ್ಲೆಡೆಯಲ್ಲಿಯೂ ವ್ಯಾಪಕನು (ತುಂಬಿ ಹರಡಿರುವವನು), **ಚಿತ್ಸುಖಪೂರ್ಣ** = ಅಪ್ರಾಕೃತ (ಜಗದ್ವಿಲಕ್ಷಣವಾದ) ಜ್ಞಾನ ಆನಂದ ಸ್ವರೂಪನು. (ಚಿತ್–ಜ್ಞಾನ, ಸುಖ–ಆನಂದ), **ಹರಿಯು** = ಸಜ್ಜನರ ಸಕಲ ಪಾಪ ಪರಿಹಾರಕವಾದ ಬಿಂಬರೂಪವು. (ಹರಿ–ಎಂದರೆ ಸಿಂಹ–ನರಸಿಂಹನೆಂತಲೂ ಅರ್ಥ), **ಕ್ಷರಾ ಕ್ಷರ ಪುರುಷೋತ್ತಮ** = ಕ್ಷರ ನಾಯಕರಾದ ಬ್ರಹ್ಮಾದಿ ಜೀವರು, ಅಕ್ಷರ ನಾಮಕಳಾದ ಶ್ರೀಲಕ್ಷ್ಮೀದೇವಿ ಇವರುಗಳಿಗಿಂತ ಅನಂತಾನಂತ ಕೋಟಿ ಗುಣಗಳಿಂದ ಉತ್ತಮೋತ್ತಮನು, **ಉರಗಶಯನ** = ಶೇಷಶಾಯಿ (ಉರಗ–ಹೊಟ್ಟೆಯಿಂದ ಚಲಿಸುವ ಸರ್ಪ), **ವೈಕುಂಠ ವರ ಮಂದಿರ** = ಶ್ರೇಷ್ಠವಾದ (ಪರಮ ಪದ) ವೈಕುಂಠವೆಂಬ ಮುಕ್ತಿ ಧಾಮನಿವಾಸಿಯು, **ಚಂದಿರ** = ಲಾವಣ್ಯ ನಿಧಿಯು (ಸಾಕ್ಷಾತ್ ಮನ್ಮಥ ಮನ್ಮಥಃ), **ತರಣಿ ಕೋಟಿ ಸಂಕಾಶ** = ಕೋಟಿ ಸೂರ್ಯರ ಕಾಂತಿಯುಳ್ಳವನು. (ಕೋಟಿ ಸೂರ್ಯರು ಎಂದರೆ ಕೇವಲ ಔಪಚಾರಿಕ ಮಾತ್ರ, **ವಿಮಲಕೇಶ** = ಕೃಷ್ಣ ಕಾಲದಿಂದ ಅವತರಿಸಿದ ಶ್ರೀಕೃಷ್ಣ (ಸರ್ವ ಅವಯವ ಅಂಗಾಂಗ ಪರಿಪೂರ್ಣನೆಂದರ್ಥ), **ಧುರದೊಳಗೆ** = ಕುರುಕ್ಷೇತ್ರ ಮಹಾ ಸಂಗ್ರಾಮದಲ್ಲಿ, **ಅರ್ಜುನನ ತುರಗ** = ಪಾರ್ಥನ ರಥವನ್ನು

(ತುರಗ–ಕುದುರೆ, ಇಲ್ಲಿ ವಾಹನವಾದ ರಥವು), **ನಡೆಸಿದ** = ಪಾರ್ಥ ಸಾರಥಿ ಶ್ರೀಕೃಷ್ಣ, **ಸಂಗಡ ಭಯಂಕರ** = ರಣರಂಗದಲ್ಲಿ ಯಾರಿಂದಲೂ ಅಜೇಯನು. ಶತ್ರುಗಳಿಗೆ ಭೀಕರ ಸ್ವರೂಪನು), **ಲೋಕೈಕಧೀರ** = ಜಗತ್ತಿನಲ್ಲಿ ಏಕೈಕ ಅಸಮಪರಾಕ್ರಮಿ, **ಸ್ಮರಣೆ ಮಾತ್ರದಿ** = ಅಂತ್ಯ ಕಾಲ ದಲ್ಲಿ ಮಗನನ್ನು ಕರೆಯುವ ನೆಪದಲ್ಲಿ "ನಾರಾಯಣ" ಎಂದು ಕೂಗಿದ, **ಅಜಾಮಿಳಗೆ** = ಅಜಾಮಿಳನು ಸುಸಂಸ್ಕೃತ ಜ್ಞಾನಿ ಪ್ರಾರಬ್ಧ ಕರ್ಮವಶದಿಂದ ಕರ್ಮಭ್ರಷ್ಟನಾಗಿದ್ದ. ಅಂತ್ಯ ಕಾಲದಲ್ಲಿ ಶ್ರೀಮನ್ನಾರಾಯಣನ ಸ್ಮರಣೆ ಯಿಂದಲೇ ಸದ್ಗತಿ ಪಡೆದನು, **ಅರಿದೆನೋ** = ನೀನು ನಮ್ಮೆಲ್ಲರ ಸಂರಕ್ಷಕ ನೆಂದು ತಿಳಿದಿರುವೆ, **ಸರುವ ಕಾಮಧ** = ಭಕ್ತ ಜನರ ಸಕಲ ಮನೋ–ಭೀಷ್ಟಗಳನ್ನು ಸಲ್ಲಿಸುವ (ಕಾಮ-ಇಷ್ಟಾರ್ಥ. ದ-ಕೊಡುವವನು), **ಭಕ್ತ ಪರಿಪಾಲಕನೆಂಬ** = ನಿನ್ನ ಬಿರುದೇ ಭಕ್ತವತ್ಸಲ-ಭಕ್ತ ಸಂರಕ್ಷಕನೆಂದಲ್ಲವೇ?.

**ವಿಧಿಪಿತ** = ಬ್ರಹ್ಮದೇವರ ಜನಕ (ಬ್ರಹ್ಮದೇವರು ಶ್ರೀ ಪದ್ಮನಾಭನ ನಾಭೀಕಮಲ ಸಂಜಾತರು), **ನಿಧಿಪತಿಗಳು** = ನಿನ್ನನ್ನು ಬಿಟ್ಟು ಉಳಿದಿರುವ ಮಹಾ ದೈಶ್ವರ್ಯವಂತರು ಇನ್ನೊಬ್ಬರುಂಟೇ ?, **ಸಧನನಾಗಿ** = ನಿನ್ನಿ ಕಾನರವಾಗಿ ಸಂಪತ್ಭರಿದವಾಗಿ ಇದ್ದಿಯೋ, (ಸಧನ-ಶ್ರೀಮಂತ), **ಮಧು ಸೂದನ** = ಮಧು ಎಂಬ ಪ್ರಬಲ ದೈತ್ಯನನ್ನು ಸಂಹರಿಸಿದ ಶ್ರೀಹರಿ, **ನಿಧನ** = ತಮೋಯೋಗ್ಯರೂ, ಭಗವದ್ವೇಷಿಗಳೂ ಆದ ದಾನವರಿಗೆ ನೀನು ಮೃತ್ಯು ಸ್ವರೂಪನಾಗಿದ್ದೀಯೆ.

**ಮೂರುಲೋಕದ ಸ್ವಾಮಿ** = ಸ್ವರ್ಗ– ಭೂ – ಪಾತಾಳಗಳೆಂಬ ಲೋಕತ್ರಯಾತ್ಮಕವಾದ ಜಗತ್ತಿಗೆ ನೀನು ಪ್ರಭು ಮತ್ತು ನಿಯಾಮಕನೇ, **ಸರ್ವಜ್ಞ** = ಸರ್ವಜ್ಞಾನಿಯು, **ಸುಖಪೂರ್ಣ** = ಆನಂದಮಯ ಸ್ವರೂಪಿಯು, **ಪ್ರೇರಕ** = ಸರ್ವಜೀವರಲ್ಲಿ ಅಂತರ್ಯಾಮಿಯಾಗಿ ಸಮಸ್ತ ವ್ಯಾಪಾರಗಳನ್ನು ಅವರವರ ದ್ವಾರಾ ಪ್ರೇರಿಸುವ ಬಿಂಬಮೂರ್ತಿ, **ಸಾಕ್ಷಿ** = ಜಗತ್ತಿನಲ್ಲಿ ನಡೆಯುತ್ತಿರುವ ಸಕಲ ವ್ಯಾಪಾರಗಳಿಗೂ ನೀನೇ ಸಾಕ್ಷೀ ಭೂತನು (ಬಿಂಬನಿಂದಲೇ ಸಕಲ ಕ್ರಿಯಾದಿಗಳೂ ಪ್ರೇರಿತವಾಗಿ ನಡೆ-

ಯುತ್ತಿರುವುದರಿಂದ), **ಕಾರಣ** = ಒಂದು ಕಾರ್ಯಕ್ಕೆ ಮೂಲವಾದ **ಹೇತು** ರೂಪ ನೀನೇ, **ಕಾರ್ಯ** = ಕಾರಣದ ಫಲದಿಂದಾಗಿ ನಡೆಯುವ ಕಾರ್ಯಗಳ ನಿರ್ವಾಹಕನೂ ನೀನೇ, **ದೋಷ ವಿದೂರ** = ದೋಷಗಳ ಸಂಪರ್ಕವೇ ಇಲ್ಲದ ಪರಮ ಪಾವನ ಮೂರ್ತಿ, **ಸದ್ಗುಣ ಸಾಂದ್ರ** = ಪರಮ ಮಂಗಳ (ಕಲ್ಯಾಣ) ಗುಣಗಣ ಭರಿತನು, **ಸುಜನಾಂಬುಧಿ ಚಂದ್ರ** ಸಜ್ಜನರೆಂಬ ಸಮುದ್ರಕ್ಕೆ ಚಂದ್ರ ಸದೃಶನು (ಚಂದ್ರೋದಯವಾದರೆ ಸಮುದ್ರವು ಉಕ್ಕುವುದು. ಅಂತೆಯೇ ಶ್ರೀಪರಮಾತ್ಮನ ಸ್ಮರಣೆ-ದರ್ಶನಗಳಿಂದ ಭಗವದ್ಭಕ್ತರ ಮನಸ್ಸು ಆನಂದದಿಂದ ಉಕ್ಕುವುದು), **ಜಗಕೆ ಭಾರಕರ್ತನು ನೀನಿರೆ** = ನಿನ್ನಿಂದ ಸೃಷ್ಟವಾದ ಈ ಸಮಗ್ರ ಜಗತ್ತಿಗೇ ನೀನೇ ಆಶ್ರಯ ದಾತನು ಮತ್ತು ಆಧಾರಭೂತನು ಅಂತಹ ಭಾರಕರ್ತನಾದ ಸರ್ವ ಸಜ್ಜನರ ಯೋಗ ಕ್ಷೇಮಕಾರಕನಾಗಿ, ನೀನಿರುತಿರೆ, **ಎಮ್ಮ ಮನೋರಥವ** = ನಮ್ಮ ಮನಸ್ಸಿನ ಇಷ್ಟಾರ್ಥಗಳನ್ನು ಪೂರೈಸುವುದು ಏನಾಶ್ಚರ್ಯ? ನೀನೇ ಸರ್ವೋತ್ತಮ ದೇವತಾ. ಸಮಸ್ತ ಮನೋಭೀಷ್ಟದಾಯಕನು, **ಗುರು ಮಾರುತನಿಂದ** ತ್ರೈಲೋಕ್ಯಾಚಾರ್ಯರಾದ ಶ್ರೀವಾಯುದೇವರ ದ್ವಾರಾ ಸಕಲ ದುಷ್ಟರನ್ನು ನಾಶ ಮಾಡಿಸಿ, ಶಿಷ್ಟರ ರಕ್ಷಣಮಾಡು, **ಭೂರಿಸಾರ ಭಾಗ್ಯವನಿತ್ತು** = ದುಷ್ಟ ಶಿಕ್ಷಣ, ಶಿಷ್ಟ ರಕ್ಷಣಾ ದ್ವಾರಾ ಸಂರಕ್ಷಿಸೆಂದು ನಿರುತ ಪ್ರಾರ್ಥಿಸುತ್ತಿರುವ ನಿನ್ನ ಭಕ್ತರಿಗೆ ಅತ್ಯಂತ ಶ್ರೇಷ್ಠವಾದ ಭಾಗ್ಯ ಎಂದರೆ, "ನಚ ಪುನರಾವರ್ತಂತೀ"-ಎಂಬ ಸ್ವ ಸ್ವರೂಪಗತ ಆನಂದಾವಿರ್ಭಾವ ರೂಪವಾದ ಮೋಕ್ಷಾನಂದವನ್ನು ನೀಡು, **ಶೂರ** = ಅಸಮ ಪರಾಕ್ರಮಿಯಾದ ನೀನು ಭಕ್ತರನ್ನು ಅನುದಿನ ರಕ್ಷಿಸು, **ನೀನಲ್ಲದಿನ್ನಿನ್ನ ಆಶು ಭಕ್ತರ ಕಾವ** = ನಿನ್ನ ಹೊರತು ಅತ್ಯಂತ ಶೀಘ್ರವಾಗಿ (ಆಶು) ಭಕ್ತರನ್ನು ಸಂರಕ್ಷಿಸುವ ಕರುಣಾಳುಗಳು ಈ ಜಗತ್ತಿನಲ್ಲಿ **ಬೇರೆ** ಇನ್ನಾರಿದ್ದಾರೇ ?

**ಪಿತನಿಂದ ನೊಂದ** ರಾಕ್ಷಸೇಂದ್ರನಾದ ದುರುಳ ಹಿರಣ್ಯ**ಕಶಿಪು**ವಿನಿಂದ ನಾನಾ ಪ್ರಕಾರವಾಗಿ ಹಿಂಸಿಸಲ್ಪಟ್ಟ ಭಾಗವತೋತ್ತಮ ಬಾಲಕ ಪ್ರಹ್ಲಾದನನ್ನು ಸಂರಕ್ಷಿಸಿದೆ (ಪ್ರಹ್ಲಾದವರದ ಶ್ರೀ ಲಕ್ಷ್ಮೀನರಸಿಂಹ),

**ದೇವತೆಗಳಿಗೆ ಬಂದ** = ಅಡಿಗಡಿಗೆಗೆ ದೇವತೆಗಳಿಗೆ ದೈತ್ಯದಿಂದ ಒದಗುತ್ತಿರುವ ದುರಿತಗಳನ್ನು ನಿವಾರಿಸಿ, ಅವರನ್ನು ಸಂರಕ್ಷಿಸುತ್ತಿರುವೆ, **ದ್ರೌಪದಿಯು ಮೊರೆ ಕೇಳಿ** = ತುಂಬಿದ ಸಭೆಯಲ್ಲಿ ದುರುಳ ದುಶ್ಶಾಸನನು ದ್ರೌಪದಿಯ ವಸ್ತ್ರವನ್ನು ಎಳೆಯಲು ಉದ್ಯುಕ್ತನಾಗಿ, ಮಾನಭಂಗ ಮಾಡುತ್ತಿರುವ ಆಪತ್ತಿನ ಸಮಯದಲ್ಲಿ, ಅವಳಿಂದ ಪ್ರಾರ್ಥ್ಯಮಾನನಾದ ಶ್ರೀಕೃಷ್ಣನು ದ್ರೌಪದಿಯು ಉಟ್ಟ ಸೀರೆಯೇ ಅಕ್ಷಯವಾಗಲೆಂದು ಅನುಗ್ರಹಿಸಿ, ದಿವ್ಯಾಂತರಗಳ ಪುಂಜವನ್ನು ಕರುಣಿಸಿ ದೇವರೇ ಮಾನ ಸಂರಕ್ಷಕನಾದ ದಯಾಸಾಗರನು, **ಕ್ಷಿತಿಜನಾಲಯದಿ** ರಾಜನಾಗಿದ್ದ ನರಕಾಸುರನ ಸೆರೆಯಲ್ಲಿ ಬಂದಿಸಲ್ಪಟ್ಟಿದ್ದ ಕನ್ಯಾವಸ್ಥೆಯಲ್ಲಿದ್ದ ೧೬,೦೦೦ ಬಾಲೆಯರನ್ನು ಸಂರಕ್ಷಿಸಿದ ಮಹಾಪೋಷಕ ಶ್ರೀಕೃಷ್ಣ, (ಕ್ಷಿತಿಜ-ಭೂದೇವಿಯ ಪುತ್ರನಾದ ನರಕಾಸುರ. ಆಲಯ-ಸೆರೆಮನೆ), **ಬೃಹದ್ರಥನ ಕುವರನ** = ಬೃಹದ್ರಥನು ಮಗಧ-ದೇಶದ ಅರಸು. ಕಾಶೀರಾಜನ ಪುತ್ರಿಯರು ಅವನಿಗೆ ಇಬ್ಬರು ಪತ್ನಿಯರು. ಜರಾಸಂಧನ ದೇಹದ ಒಂದೊಂದು ಸೀಳನ್ನು ಹೆತ್ತರು. ಜರಾಸಂಧನೇ ಬೃಹದ್ರಥನ ಮಗ ಶ್ರೀಕೃಷ್ಣನು ವಿಪ್ರ ವೇಷದಿಂದ ಮಗಧಾ ಪಟ್ಟಣವನ್ನು ಪ್ರವೇಶಿಸಿ, ಗುರು ಭೀಮಸೇನನಿಂದ ಮಲ್ಲಯುದ್ಧದಲ್ಲಿ ಜರಾಸಂಧನನ್ನು ಸಂಹರಿಸಿದ ವಿಶೇಷ ಪ್ರಸಂಗ, **ಕ್ಷಿತಿಪರ ಬಿಡಿಸಿ** = ಜರಾಸಂಧನ ಬಂಧನದಲ್ಲಿದ್ದ ಹಲವು ರಾಜರುಗಳನ್ನು ಬಿಡಿಸಿದನು, **ಕುರುಕ್ಷೇತ್ರದೊಳು** = ಕುರುಕ್ಷೇತ್ರದ ಮಹಾ ಸಂಗ್ರಾಮದಲ್ಲಿ, **ಪಾಂಡವರ ಗೆಲಿಸಿ** = ಪಾಂಡವರಿಗೆ ಜಯವನ್ನು ತಂದು ಕೊಟ್ಟ ಶ್ರೀಕೃಷ್ಣ ಸಮಗ್ರ ಭಾರತದ ಕೇಂದ್ರ ವ್ಯಕ್ತಿಗಳೆಂದರೆ-ಶ್ರೀಕೃಷ್ಣ ಮತ್ತು ಭೀಮಸೇನ (ಶ್ರೀ ಹರಿ ವಾಯುಗಳ ಕಥಾ), **ಶತಮೋದನಾಸ್ತ್ರದಲಿ** = ಬ್ರಹ್ಮಾಸ್ತ್ರದಿಂದ (ಶತಮೋದ-ಶತಾನಂದ ನಾಮಕರಾದ ಬ್ರಹ್ಮದೇವರು), **ಗರ್ಭದೊಳಗೆ ಪೀಡಿತನಾದ** = ವೀರ ಅಭಿಮನ್ಯುವಿನ ಪತ್ನಿ ಉತ್ತರಾದೇವಿ ಆಕೆಯ ಗರ್ಭದಲ್ಲಿ ಬೆಳೆಯುತ್ತಿದ್ದ ಶಿಶುವನ್ನು ಕೊಂದು ನಿಷ್ಪಾಂಡವ ಪೃಥ್ವಿಯನ್ನಾಗಿ ಮಾಡುವೆನೆಂದು ದುರ್ಯೋಧನನಿಗೆ ಆಶ್ವಾಸನೆ ಕೊಟ್ಟು, ಛಲದಿಂದ ಉತ್ತರೆಯ ಗರ್ಭಕ್ಕೆ ನೇರವಾಗಿ ಅಶ್ವತ್ಥಾಮನು ಬ್ರಹ್ಮಾಸ್ತ್ರ ಪ್ರಯೋಗಿಸಿದನು. ಆಗ

ಉತ್ತರೆಯು ಶ್ರೀಕೃಷ್ಣನಿಗೆ ಮೊರೆಯಿಡಲು, ಶ್ರೀಕೃಷ್ಣನು ತನ್ನ ಸುದರ್ಶನ ಚಕ್ರದಿಂದ ಆಕೆಯ ಗರ್ಭವನ್ನು ಸಂರಕ್ಷಿಸಿ, ಬ್ರಹ್ಮಾಸ್ತ್ರವನ್ನು ಹಿಮ್ಮೆಟ್ಟಿಸಿದನು. (ಪರೀಕ್ಷಿತ ವರದ ಶ್ರೀಕೃಷ್ಣ), **ಶಿತಕಂಠಗೊಲಿದು** ಮಹಾರುದ್ರ ದೇವರ **ಪ್ರಾರ್ಥನೆ**ಗೆ ಒಲಿದು (ಶಿತ-ವಿಷ, ಕಂಠ-ಕತ್ತು, ಅಂದರೆ ವಿಷಕಂಠನಾದ ಶ್ರೀ ರುದ್ರ) ಅವನ ರಥಕ್ಕೆ ತಾನೇ ಸಾರಥಿಯಾಗಿ ತ್ರಿಪುರಾಸುರರ ಪತ್ನಿಯರನ್ನು ಭೌದ್ಧಾವತಾರದಿಂದ ಮೋಹಗೊಳಿಸಿ, ಅವರ ಪಾವಿತ್ರ್ಯ ಭಂಗ ದ್ವಾರಾ, ತ್ರಿಪುರಾಸುರರನ್ನು ಸಂಹರಿಸಿದ ಶ್ರೀಕೃಷ್ಣ (ಮುಪ್ಪುರ-ಮೂರುಪುರ-ತ್ರಿಪುರಾಸುರರೆಂದರ್ಥ), **ಕೀರುತಿಯಿತ್ತೆ ಭಕ್ತನಿಗೆ** = ನಿನ್ನ ಭಕ್ತನಾದ ರುದ್ರನಿಗೆ ತ್ರಿಪುರಾಸುರ ಸಂಹಾರಿ ಎಂದು ಕೀರ್ತಿಯನ್ನು ಕೊಟ್ಟೆ, **ದೇವವರಿಯು** = ದೇವಶ್ರೇಷ್ಠ (ದೇವ ದೇವೋತ್ತಮನಾದ ಶ್ರೀಹರಿ) ನಿನ್ನ ಕಾರುಣ್ಯಕ್ಕೆ ಎಣೆಯುಂಟೇ?, **ಸಾಂಪ್ರತ** = ವಿಧ್ಯುಕ್ತವಾಗಿ ಪ್ರಣಾಮಪುರಸ್ಸರವಾಗಿ ನಿನಗೆ ಬೇಡಿಕೊಳ್ಳುತ್ತಿದ್ದೇನೆ, ನನ್ನ ಬಿನ್ನಪ ಕೇಳು, **ಅಜ** = ಜನನ ಮರಣ ವಿದೂರನಾದ ನಿತ್ಯ ಶಾಶ್ವತ ರೂಪಿಯಾದ ನಿನ್ನನ್ನು, **ಸಂತುಪಿಶ** ಸಮೀಚೀನವಾಗಿ ಸ್ತೋತ್ರ ಮಾಡುತ್ತಿರುವ **ಭಕುತನ** = ಈ ಭಕುತನ ಮನದಭಿಲಾಷೆಯುಗಳನ್ನು ಪೂರೈಸುವವನಾಗು **ಸುಪ್ರತನಾಮ** = ಸತ್ಯ ಸಂಕಲ್ಪ ನಾಮಕನಾದ, **ಭಾಗವತ ಜನಪ್ರಿಯ** = ಭಗವದ್ಭಕ್ತರಿಗೆ ಅತ್ಯಂತ ಪ್ರಿಯನಾದವನೇ. **ಇಹಪರದಿ** = ಇಹದಲ್ಲೂ ಮತ್ತು ಪರದಲ್ಲೂ ಸರ್ವತ್ರ ಸರ್ವಕಾಲದಲ್ಲಿ ನೀನೇ ಎಮಗೆ ಗತಿಯು.

**ನೀಸಲಹಲು ಇನ್ನಾರು** = ನೀನೇ ಸಂರಕ್ಷಕನಾಗಿ ನಿಂತ ಮೇಲೆ, ಇವರ್‍ಯಾರಾದರೂ ಬಂದು, **ಅಡ್ಡೈಸುವರು** = ಪ್ರತಿಭಟಿಸುವವರು ? (ನೀನು ಅನಿರುದ್ಧನು. ಅಜೇಯನು), **ಸಮಸ್ತ ದಿವೌಕಸರು** = ಈ ಮೂರು ಲೋಕದ ಒಳಗೂ ಮತ್ತು ಹೊರಗೂ ದೇವತಾವರ್ಗಕ್ಕೆ ನಿರಂತರ ಸಂರಕ್ಷಕನಾಗಿರುವೆ (ದಿವೌ-ಸ್ವರ್ಗದಲ್ಲಿ ವಾಸಿಸುವ ದೇವತೆಗಳು-ದಿವೌಕಸರು), **ನಿನಗೇ ಸಮರ್ಪಕವಾದ ಕಾರ್ಯ** = ನಿನ್ನ ಆಜ್ಞಾನುಸಾರ, ನಿನ್ನ ಸಂಕಲ್ಪದಂತೆ ಕಾರ್ಯಗಳನ್ನು ದೇವತೆಗಳು ಎಸಗುವರು, **ಮಹಾ-ಸುಖದಿ** ಆನಂದೋದ್ರೇಕರಾಗಿ ಭಗವತ್ಕಾರ್ಯ ಸಾಧಕರಾಗಿದ್ದಾರೆ,

**ಲಕ್ಷ್ಮೀ ದಾಸಿ ಎನಿಸಳು** = ನಿನ್ನ ಅರಮನೆಯಲ್ಲಿ ಜಗಜ್ಜನನಿಯಾದ ಶ್ರೀ-ಮಹಾಲಕ್ಷ್ಮೀದೇವಿಯೇ ನಿನಗೆ ಪ್ರಥಮ ದಾಸಿಯೆಂದೆನಿಸಿದ್ದಾಳೆ. **ದೇಶ ಕಾಲಾದಿಗಳು** = ಸರ್ವತ್ರ ವ್ಯಾಪ್ತನಾಗಿರುವ ಪ್ರದೇಶಗಳೂ, ಪ್ರವಾಹತೋ ನಿತ್ಯವಾದ ಕಾಲ ಇವುಗಳೆಲ್ಲವೂ ನಿನ್ನ ಅಧಿಷ್ಠಾನ ಸ್ಥಾನಗಳು ಸರ್ವತ್ರ ವ್ಯಾಪಕನೂ, ಕಾಲಾಂತರ್ಗತವನ್ನೂ ಆದ ಶ್ರೀಹರಿಯು ದೇಶ ಕಾಲಾದಿ ರೂಪಗಳು, **ಶ್ರೀ ಶ** = ಶ್ರೀ ಲಕ್ಷ್ಮೀದೇವಿಗೆ ಪತಿ ಹಾಗೂ ನಿಯಾಮಕನು, **ಲೋಕತ್ರಯಕೆ** = ಭೂ ಗಗನ ಪಾತಾಳಾತ್ಮಕವಾದ ಸಮಸ್ತ ವಿಶ್ವದಲ್ಲಿ, **ಲೇಸಾಯಾಸವೆಂಬುದು ಕಾಣೆನೋ** = ವಿಶ್ವದ ಸೃಷ್ಟಿ, ಸ್ಥಿತಿಗತಿ ಲಯಾದಿ ವ್ಯಾಪಾರಗಳು ನಿನಗೆ ಕೇವಲ ಲೀಲಾ ಮಾತ್ರವು. ನಿರಾಯಾಸವಾಗಿ; ಲೀಲಾ ವೈಭವದಿಂದ ಸಕಲ ಜಗದ್ವ್ಯಾಪಾರಗಳನ್ನು ನಿರ್ವಹಿಸುತ್ತಿರುವ ಜಗತ್ಪತಿ, **ವೇದವ್ಯಾಸ ಕೀಟಿಕೆ ಒಲಿದು** = ಶ್ರೀಮನ್ನಾರಾಯಣಾವತಾರ ಭೂತರಾದ ಶ್ರೀವೇದವ್ಯಾಸರು ಒಂದು ಕ್ರಿಯೆಯಲ್ಲಿ ತಮ್ಮ ವಿಭೂತಿ-ಯನ್ನಿಟ್ಟು, ಅವರಿಂದ ರಾಜ್ಯವಾಳಿಸಿದ ಪ್ರಸಂಗ ವಿಶೇಷ, **ಮಹಿ-ಸಿಂಹಾಸನವ ನೇರಿ** = ಸಿಂಹಾಸನಾರೋಹಣ ಮಾಡಿಸಿ, ಭೂಮಿಯನ್ನು (ಮಹಿ) ಆಳಿಸಿದೆ, **ಪರಾಶರಾತ್ಮಜ** = ಪರಾಶರ ಮುನಿ ಮತ್ತು ಅವರ ಪತ್ನಿ ಸತ್ಯವತಿಯರಲ್ಲಿ ಪುತ್ರತ್ವೇನ ಅವತರಿಸಿದ ಶ್ರೀವೇದವ್ಯಾಸರು ನಿಮ್ಮನ್ನು ಸಾಕಲ್ಯೇನ ವರ್ಣಿಸಲು ನನಗೆ ಸಾಧ್ಯವೇ ?, **ಸುರಾಸು ನಿಲಯ** = ಮುಕ್ತಿ ಧಾಮಗಳೆನಿಸಿದ ವೈಕುಂಠ-ಶ್ವೇತದ್ವೀಪ-ಅನಂತಾಸನಗಳಲ್ಲಿ ನಿವಾರಿಸುವ, **ಏಸು ಮಾತುಗಳ್ಯಾಕೆ** = ಇಷ್ಟು ಮಾತುಗಳೇಕೆ ? ನಿನ್ನನ್ನು ನಾನೆಂದು ಬಣ್ಣಿಸಲಿ ?, **ಮನ್ಮನ ದಾಸೆ ಪೂರ್ತಿಸಿ** = ನಮ್ಮ ಮನಸ್ಸಿನ ಅಭಿಲಾಷೆಗಳನ್ನು ಪೂರೈಸಿ, **ಎಮ್ಮನು ಉದಾಸಿಸದೆ** = ನಮ್ಮನ್ನು ಉದಾಸೀನ ಮಾಡದೆ, **ದಯದಿಂದ ನೋಳ್ಪುದು** = ಕೃಪಾ ಕಟಾಕ್ಷ ದೃಷ್ಟಿಯಿಂದ ಅವಲೋಕಿಸೆಂದು ಪ್ರಾರ್ಥಿಸುತ್ತಾರೆ.

**ನಿಗಮ ತತಿಗಳಿಗೆ** = ಅನಂತಾನಂತ ವೇದ ರಾಶಿಗಳಿಂದ ಸಾಕಲ್ಯೇನ ತಿಳಿಯಲ್ಪಡದವ, **ಅಗಣಿತ ಮಹಿಮೆ** = ಎಣಿಸಲಾಸಾಧ್ಯವಾದ ಮಹಾ-

ಮಹಿಮೆಗಳನ್ನು, **ಲಕುಮಿ ಬೊಮ್ಮ** = ಶ್ರೀ ಲಕ್ಷ್ಮೀದೇವಿ ಬ್ರಹ್ಮಾದಿ ದೇವತೆಗಳು, **ಭವಾದಿಗಳು** = ರುದ್ರಾದಿಗಳು, **ತಾವರಿಯರು** = ತಾವು ತಿಳಿಯಲಾರರು, **ಮಂದ ಜೀವಿಗಳಿಗೆ** = ಅಜ್ಞಾನಿಗಳಾದ ಸಾಮಾನ್ಯ ಜೀವರಿಗೆ, **ಗೋಚರಿಸುವುದೇ ನಿನ್ನ ರೂಪ** = ನಿನ್ನ ರೂಪ ಪ್ರತ್ಯಕ್ಷವಾಗುವುದೇ?, **ಯಥಾಮತಿಯೊಳಗೆ** = ನನಗೆ ತಿಳಿದಷ್ಟು ಮಟ್ಟಿಗೆ (ನನ್ನ ಯೋಗ್ಯತಾನುಸಾರ) ನೀನೇ ದಯಾಮಯನೆಂದು ಸ್ತೋತ್ರ ಮಾಡಿ ಹೊಗಳಿದೆ,ಎನ್ನ **ಅಪರಾಧ ಕೋಟಿಗಳನು** = ನನ್ನ ಕೋಟಿ ಅಪರಾಧಗಳನ್ನು,**ಲೇಶ ಬಗೆಯಾದೀ** = ನೀನು ಸ್ವಲ್ಪವೂ ಪರಿಗಣಿಸದೇ, **ಜಗತಿಪತಿ** = ಬ್ರಹ್ಮಾಂಡ ನಾಯಕನಾದ ನೀನು, **ಬಿಗಿದಪ್ಪಿ ಮೋದಿಪನಲ್ಲದೆ** = ತಂದೆಯಾದವನು ತನ್ನ ಮಗುವಿನ ತೊದಲು ಮಾತುಗಳನ್ನು ಕೇಳಿ, ಸಂತೋಷದಿಂದ ಆ ಶಿಶುವನ್ನು ಬಿಗಿದಪ್ಪಿ, ಅದರ ಇಷ್ಟಾರ್ಥಗಳನ್ನು ಪೂರೈಸುವಂತೆ, **ಹಗೆಗೊಂಬನೇನೋ** = ಅಂತಹ ಮುದ್ದು ಮಗುವನ್ನು ದೂರ ತಳ್ಳಿ ದ್ವೇಷಿಸುತ್ತಾನೆಯೇ, **ತ್ರೈಯುಗನೆ** = ಕೃತ-ತ್ರೇತ-ದ್ವಾಪರಗಳೆಂಬ ಮೂರು ಯುಗಗಳಲ್ಲಿ ಮಾತ್ರ ಅವತರಿಸುವನೆಂಬ ಸತ್ಯ ಸಂಕಲ್ಪವುಳ್ಳ ತ್ರಿಹೂತಿನಾಮಕ ಶ್ರೀ ಪರಮಾತ್ಮನು, **ಈ ಬಗೆ ಬಡತನವ್ಯಾಕೋ** = ತ್ರಿಹೂತಿ ನಾಮಕನಾದ ನಿನ್ನನ್ನು ನಿರಂತರ ಪಾಡಿ ಪೊಗಳುತ್ತಿರುವ ದಾಸಗೆ ಈ ಸಂಸಾರದಲ್ಲಿ ಈ ತರಹ ಬಡತನವ್ಯಾತಕೇ ?, **ನಾಲ್ಮೊಗನಯ್ಯ** = ಚತುರ್ಮುಖ ಬ್ರಹ್ಮದೇವರ ಜನಕನೇ, **ಅರ್ಥ ಕಾಮಗಳೊಳಗಿಪ್ಪ** = ದ್ರವ್ಯ (ಹಣ) ಮತ್ತು ಮನಸ್ಸಿನ ಇಚ್ಛೆ-ಇವುಗಳಲ್ಲಿ ತದ್ವಾಚ್ಯನಾಗಿ ಇರುವ ನಿನಗೆ ಯಾವುದು ತಾನೇ ಅಸಾಧ್ಯವಾದುದು ? ದ್ರವ್ಯರೂಪನಾಗಿ ನೀನಿದ್ದು ನನ್ನಿಚ್ಛೆಯನ್ನು ಸಲ್ಲಿಸಿದರೆ, ಈ ದಾರಿದ್ರ್ಯ ಪರಿಹಾರವು—ಎಂದು ತಾತ್ಪರ್ಯ, **ಗಗನ ಪಾತಾಳ ವ್ಯಾಪ್ತ** = ಆಕಾಶ, ಪಾತಾಳಲೋಕಗಳ ಪರ್ಯಂತ ಅಖಂಡವಾಗಿ ವ್ಯಾಪಿಸಿಕೊಂಡಿರುವ ಹೇ ವಿರಾಡ್ರೂಪನೇ, **ದ್ವಿಗ ಯುಗಗಳಿಗೆ** = ನಿನ್ನನ್ನು ಕೈ ಜೋಡಿಸಿ ಪ್ರಾರ್ಥಿಸುತ್ತಿದ್ದೇನೆ. ಕೃಪೆ

ಮಾಡಿ ನನ್ನ ಕಣ್ಣುಗಳಿಗೆ) (ಅಂತ ಚಕ್ಷು ಗೋಚರನಾಗು, **ಯುಗಾವರ್ತ** = ಯುಗ ಪ್ರವರ್ತನಾದ, **ನರಮೃಗನಾಗಿ** = ನರಸಿಂಹ ರೂಪದಿಂದ (ನರ–ಮಾನವ ಮೃಗ-ಸಿಂಹ), **ಬಂದೊದಗಿದೆ** = ಸಭಾ ಮಂದಿರದ ಸ್ತಂಭ ವನ್ನು ಸೀಳಿಕೊಂಡು ಪ್ರಹ್ಲಾದವರದನಾಗಿ ಪ್ರತ್ಯಕ್ಷನಾದ.

**ಶ್ರೀನಿಧೆ** = ಶ್ರೀ ಲಕ್ಷ್ಮೀಪತಿಯೇ, (ಲಕ್ಷ್ಮೀಯ ಪಾಲಿಗೆ ನೀನು ನಿಧಿ), **ಪ್ರತಿ ದೇಹಗಳಲ್ಲಿ** = ಸ್ವರೂಪ-ಲಿಂಗ-ಅನಿರುದ್ಧ-ಸ್ಥೂಲಗಳೆಂಬ ನಾಲ್ಕು ಪ್ರಕಾರವಾದ ಶರೀರಗಳಲ್ಲಿ (ಅಥವಾ ಪ್ರತಿ ಜನ್ಮಕ್ಕೂ ಬರುವ ಸ್ಥೂಲದೇಹಗಳಲ್ಲಿ), **ಗತಿ ನೀನಲ್ಲದೆ** = ನಿನ್ನ ಹೊರತು ಅನ್ಯರು ಗತಿಯಿಲ್ಲ ನೀನೇ ಜೀವರ ತಾರಕನು, **ಇಹ ಪರದಲ್ಲಿ** = ಈ ಲೌಕೀಕ ಜಗತ್ತಿನಲ್ಲಿ ಹಾಗೂ ಪಾರಮಾರ್ಥಿಕ ಮುಕ್ತಿಯಲ್ಲಿ, **ಆ ನಳಿನಭವ** = ಶ್ರೀ ಪದ್ಮನಾಭ ದೇವರ ನಾಭೀಕಮಲ ಸಂಜಾತರಾದ ಬ್ರಹ್ಮದೇವರು (ನಳಿನ-ಕಮಲ ಭವ-ಸಂಜಾತರು), **ಭವಾದಿ** = ರುದ್ರಾದಿ, **ಅನಿಮೇಷರ** = ದೇವತೆಗಳ, **ನಿಜಾನಂದವರಿತು** = ಸ್ವರೂಪಗತ ಮುಕ್ತಿ ಸುಖವನ್ನು, **ಫಲಗಳ-ಕೊಡುವಿ** = ಅರಿತು ಫಲ ರೂಪವಾದ ಸದ್ಗತಿಯನ್ನು ಕೊಡುವವನು, **ಮಹಾನುಭಾವ** = ಅಪರಿಮಿತ ಮಹಿಮಾ ಸಂಪನ್ನನೂ, ಏಕಮೇವ ಅದ್ವಿತೀಯನಾದ ನೀನು, **ಎಮ್ಮಭೀಮತ** = ನಮ್ಮ ಮನೋಭೀಷ್ಟ-ಗಳನ್ನು ಪೂರೈಸುವವನಾಗು, **ಇದೇನಚ್ಚರಿ** = ಮುಕ್ತಿಪ್ರದನಾದ ನೀನು ಈ ಅಭಿಲಾಷೆಗಳನ್ನು ಪೂರೈಸುವುದರಲ್ಲಿ ಆಶ್ಚರ್ಯವೇನು ?, **ನಿನ್ನರಸಿ-ಲಕುಮಿ** = ನಿತ್ಯಾವಿಯೋಗಿಯಾದ ನಿನ್ನ ಪತ್ನಿ ಶ್ರೀ ಲಕ್ಷ್ಮೀದೇವಿಯು, **ಪರಮೈಶ್ಚರ್ಯದ ಪ್ರಾಂತ** = ನಿನ್ನ ವಿಶೇಷ ವಿಭೂತಿ ರೂಪಗಳ ಕೊನೆಯ ಅಂಚನ್ನು, **ಕಡೆಗಾಣಳು** = ಸಾಕಲ್ಯೇನ ಅರಿಯಳು, **ಚಿದಾನಂದ-ಮಯನೆ** = ಜ್ಞಾನಾನಂದ ಪರಿಪೂರ್ಣ ಸ್ವರೂಪನೇ (ಚಿತ್-ಜ್ಞಾನ ಆನಂದ-ಸುಖ), **ಪ್ರಣತರ ಅಧಿಕಾರಾನುಸಾರ** = ನಿನಗೆ ಶರಣಾಗತರಾದ ಭಕ್ತ-ಜನರ ಯೋಗ್ಯತೆಗನುಗುಣವಾಗಿ, **ಸುಖ ಪಾನೀಯಧೀಯೊಳು** = ಆನಂದ ಸಾಗರದಲ್ಲಿ (ಪಾನೀಯ–ನೀರು ಜಲಧಿ), **ಲೋಲ್ಯಾಡಿಸುತಿಹೆ** = ಸಂಚರಿಸುವಂತೆ ಮಾಡುತ್ತೀಯೆ, **ದಾನಿಗಳರಸ** = ಕೊಡುವುದರಲ್ಲಿ ಮುಕ್ತ

ಹಸ್ತನು (ಮುಕ್ತಿಪ್ರದನು ಅದಕ್ಕಿಂತ ದಾನ ಬೇಕೇ ?), **ಮನಾದಿಕರಣ-ಗಳ** = ಮನಸ್ಸು ಹಾಗೂ ದಶೇಂದ್ರಿಯಗಳ **ಮಾನಿಗಳ** = ತತ್ತ್ವಾಭಿಮಾನಿ ದೇವತೆಗಳಿಗೆ, **ಒಡೆಯನೆನಿಸುವ** = ನಿಯಾಮಕನೆನಿಸುವ (ಪ್ರಭುವೆನಿ-ಸುವ), **ಮುಖ್ಯ ಪ್ರಾಣಪತಿಗೆ** = ಮುಖ್ಯ ಪ್ರಾಣದೇವರಿಗೆ, **ನೂತನ-ವಿಜ್ಞಾಪನವೇನುಂಟು** = ಜೀವರ ಉದ್ಧಾರಕ್ಕಾಗಿ ಮಾಡುತ ಆಜ್ಞಾ ಏನಿದೆ (ಇಲ್ಲಿ ಪ್ರಾಣ ದೇವರಿಗೆ ಶ್ರೀ ಪರಮಾತ್ಮ ಆಜ್ಞೆ ಹೊರತು ವಿಜ್ಞಾಪನವಲ್ಲ. ಆದರೆ ಅವರ ದ್ವಾರಾ ನನ್ನ ವಿಜ್ಞಾಪನೆಯನ್ನು ನಿನ್ನ ಅನುಗ್ರಹದಿಂದ ಸಲ್ಲಿಸೆಂದು ಅರ್ಥ. ವಾಯುಗೋಳಕದ ಚಿಂತನೆಯ ಮಹತ್ವದ ಸೂಚನೆ) **ಮಾನದ** = ಗೌರವವನ್ನು ಕೊಡುವ, **ಸರ್ವರ ಸುಲಭ** = ಸರ್ವಭಕ್ತ ಜನ ರಿಗೆ ನೀನು ಸುಲಭನಾಗಿದ್ದರೆ (ಭಕ್ತ ಪರಾಧೀನತ್ವ).

**ಚಟುಲ ಕಾರ್ಯಗಳ** = ಅಗಾಧ ವ್ಯಾಪಾರಗಳನ್ನು, **ಸಂಘಟನೆ-ಮಾಡಿಸುವಿ** = ಸಾಧ್ಯವಾಗುವಂತೆ ಮಾಡಿ ಅಘಟನಾಘಟನ ಶಕ್ತನು ನೀನು· ಅಚಿಂತ್ಯಾದ್ಭುತ ಮಹಿಮನೆಂದರ್ಥ, **ನಿಷ್ಕುಟಿಲ** = ಸಮಸ್ತ ದೋಷವಿದೂರ, ಅತಏವ ಅನಂತ ಕಲ್ಯಾಣ ಗುಣಗಣಧಾಮನು, **ದೇವೋತ್ತಮ** = **ಪುರು-ಷೋತ್ತಮ**. ಸರ್ವೋತ್ತಮ ದೇವತಾ ಎಂತ ತಾತ್ಪರ್ಯ.

॥ ಶ್ರೀ ಲಕ್ಷ್ಮೀನರಸಿಂಹಾರ್ಪಣಮಸ್ತು ॥



## ೩೫

## (ಪ್ರಾಣೇಶ ವಿಠ್ಠಲಾಂಕಿತ)

**ರಾಗ–ರೇಗುಪ್ತಿ** **ಏಕತಾಳ**

ಶ್ರೀ ನಾರಸಿಂಹಾ-ಕಾಯೋ
ದಾನವಾನೀಕಾ ಧ್ವಾಂತಾ-ಭಾನು ಕಾಮಿತ ಸುರಧೇನು
ಶ್ರೀ ನಾರಸಿಂಹಾ ॥ ॥ಪ॥

ಘೋರ ದುರಿತಾ ಪರಿಹಾರ ಮಾಳ್ಪರ ಕಾಣೆ
ವೀರಾ ನಿನ್ನುಳಿದು ಇನ್ನಾರಾ ॥ ಶ್ರೀನಾರಸಿಂಹಾ ॥ ॥೧॥

ಧೀಷಣ ಉಗ್ರ ವಿಶ್ವವಾಸಾ ಭದ್ರಾನೆ ಸ್ವ ಪ್ರ-
ಕಾಶಾಮೃತ್ಯುರ್ಮೃತ್ಯು ನಿರ್ದೋಷಾ ॥ ॥೨॥

ಪ್ರಬಲಾನೀ ತುಚ್ಛಮಾಡಿ ಅಬಲಾರ ಕೈ ಬಿಡಲು
ದುರ್ಬಲಾರ್ಮೊ ಚ್ಯೋರೆ ಶಾಮ ಶಬಲಾ ॥ ॥೩॥

ಜ್ಞಾನಶೂನ್ಯ ನಾ ನಿನ್ನ ಧ್ಯಾನವ ಮರೆತರೆ
ನೀನು ಹಾಗೆ ಮರಿಯಬೇಕೇನೂ ॥ ॥೪॥

ಎಲ್ಲಾರಿಗೊಡಿಯಾ ಲಕ್ಷ್ಮೀನಲ್ಲಾ-ಪ್ರಾಣೇಶವಿಠ್ಠಲಾ
ಬಲ್ಲೀದ ಭಯವಾ ಕಳಿಯಬಲ್ಲೀ ॥ ॥೫॥

❋

**ಅರ್ಥವಿವರಣೆ :**

ಶ್ರೀ ಪ್ರಾಣೇಶದಾಸರು ಶ್ರೀ ಮಜ್ಜಗನ್ನಾಥದಾಸವರೇಣ್ಯರ ಪ್ರಥಮ ಶಿಷ್ಯರು. ಅವರ ಸ್ಥಳ ರಾಯಚೂರು ಜಿಲ್ಲೆಯ ಲಿಂಗಸೂಗೂರು. ಲಿಂಗ–

ಸೂಗೂರಿನಲ್ಲಿ ಅವರಿಂದಲೇ ಪ್ರತಿಷ್ಠಿತವಾದ ಶ್ರೀ ವರದೇಂದ್ರ ತೀರ್ಥ ಶ್ರೀ ಪಾದಂಗಳವರ ಭವ್ಯ ವೃಂದಾನವಿದೆ. ಅದಕ್ಕೆ ಹೊಂದಿಕೊಂಡಿರುವ ಗೃಹವೇ ದಾಸರು ವಾಸಿಸುತ್ತಿದ್ದ ಮಂದಿರವು. ಅಲ್ಲಿ ದಾಸಾರ್ಯರು ಪೂಜಿಸುತ್ತಿದ್ದ ವಿಗ್ರಹಗಳು, ಸಾಲಿಗ್ರಾಮಗಳು, ತಾಳ, ತಂಬೂರಿ, ಗೆಜ್ಜೆ, ಬಪನಾಸಿಗಳನ್ನು ಈಗಲೂ ಅವರ ವಂಶೀಕರು ಸಂರಕ್ಷಿಸಿಕೊಂಡು ಬಂದಿದ್ದಾರೆ.

ಪ್ರಸಕ್ತ ಕೀರ್ತನಸಾಹಿತ್ಯವು **ಶ್ರೀನರಸಿಂಹ ದೇವರ ಸ್ತುತಿ.**

**ದಾವನೀಕ** = ದೈತ್ಯರುಗಳೆಂಬ ಸಮೂಹವೆಂಬ, **ಧ್ವಾಂತಾಭಾನು** = ಗಾಢಾಂಧಕಾರಕ್ಕೆ ಸೂರ್ಯಸದೃಶನು ಶ್ರೀ ಲಕ್ಷ್ಮೀನರಸಿಂಹ ದೇವರು, **ಕಾಮಿತ ಸುರಧೇನು** = ಭಕ್ತರ ಕಾಮಿತಾರ್ಥಗಳನ್ನು ಸಲ್ಲಿಸುವ ಕಾಮಧೇನು ಸದೃಶನು.

**ಘೋರ ದುರಿತ ಪರಿಹಾರ** = ದುಸ್ತರವಾದ, ಅತಿ ಭಯಂಕರವಾದ ಪಾಪ ಸಮೂಹಗಳನ್ನೆಲ್ಲಾ ಪರಿಹರಿಸುವ ದುರಿತ ಪರಿಹಾರಕ ಭಗವದ್ರೂಪವು ಶ್ರೀ ಲಕ್ಷ್ಮೀನರಸಿಂಹ ರೂಪವು, **ವೀರಾ ನಿನ್ನುಳಿದು** = ಅಸಮ ಪರಾಕ್ರಮಿಯೇ, ನಿನ್ನ ಹೊರತು ನನ್ನ ದುರಿತಗಳನ್ನು ಪರಿಹರಿಸುವ ಅನ್ಯರನ್ನು ನಾವೆಲ್ಲಿಯೂ ಕಾಣೆ.

**ಧೀಷಣ** = ಜೀವರ ಬುದ್ಧಿಯನ್ನು ಪ್ರಚೋದಿಸುವವನೇ, **ವಿಶ್ವವಾಸಾ** = ಸರ್ವತ್ರ ವ್ಯಾಪಕವಾದ ರೂಪ. ಬಾಲಕ ಪ್ರಹ್ಲಾದನು–ಶ್ರೀ ಹರಿಯು ಸರ್ವತ್ರ ವ್ಯಾಪ್ತನೆಂದು ಪ್ರಾರ್ಥಿಸುತ್ತಿರಲು, ತನ್ನ ಭಕ್ತನ ವಚನವನ್ನು ಸತ್ಯವನ್ನಾಗಿಸಲು ಕಂಭದಿಂದ ಒಡೆದು ಪ್ರತ್ಯಕ್ಷನಾದನು, **ಭದ್ರಾನೆ** = ಪರಮ ಮಂಗಳ ಸ್ವರೂಪಿಯೇ. ಶುಭಪ್ರದನೇ, **ಸ್ವಪ್ರಕಾಶ** ಸ್ವಯಂ ಜ್ಯೋತಿ, **ಮೃತ್ಯುರ್ಮೃತ್ಯು** = ಅಪಮೃತ್ಯುವಿಗೆ ಮೃತ್ಯುಸ್ವರೂಪನೇ. (ಶ್ರೀ ಲಕ್ಷ್ಮೀನರಸಿಂಹನು ಅಪಮೃತ್ಯು ಪರಿಹಾರಕನು), **ನಿರ್ದೋಷಾ** = ಸಮಸ್ತ ದೋಷವಿದೂರನು.

**ಪ್ರಬಲಾ** = ಅಸಹಾಯ ಶೂರನಾದ ನೀನು, **ತುಚ್ಛ ಮಾಡಿ** = ನನ್ನನ್ನು ಉಪೇಕ್ಷಿಸಿ, **ಅಬಲಾರ ಕೈ ಬಿಡಲು** = ಅಲ್ಪ ಶಕ್ತಿ, ಸಾಮರ್ಥ್ಯ ವುಳ್ಳ, ಅಸ್ವತಂತ್ರರಾದ ಜೀವರನ್ನು ಕೈ ಬಿಡುವುದು ನಿನಗೆ ಉಚಿತವೇ!, **ಶಾಮ ಶಬಲಾ** - ನೀಲಮೇಘ ಶ್ಯಾಮ ವರ್ಣ ವಿಶಿಷ್ಟನೇ.

**ಜ್ಞಾನಶೂನ್ಯ** = ಅಜ್ಞಾನಿಯಾಗಿ ಮೋಹ ಪರವಶನಾಗಿ ನಾನು ನಿನ್ನನ್ನು ಮರೆತರೆ, ಸರ್ವಜ್ಞನೂ ಭಕ್ತವತ್ಸಲನೂ ಆದ ನೀನು ನನ್ನ ಕೈ ಬಿಡುವರೇ !.

**ಎಲ್ಲರಿಗೊಡೆಯಾ** = ಸರ್ವರಿಗೂ ಸ್ವಾಮಿಯಾದ, ಸರ್ವೋತ್ತಮ ಪ್ರಭುವೇ, **ಲಕ್ಷ್ಮೀನಲ್ಲಾ** = ಲಕ್ಷ್ಮೀಪತಿಯೇ, **ಬಲ್ಲಿದ** = ಷಡ್ಗುಣೈಶ್ವರ್ಯ ಸಂಪನ್ನನಾದ ನೀನು, **ಭಯವಾ ಕಳಿಯಬಲ್ಲೀ** - ನಿನ್ನ ಶರಣರ ಭವಭಯವನ್ನು ಪರಿಹರಿಸುವ ಪರಮ ಕೃಪಾಳು.



**೩೬**

## ಕೊಪ್ಪರ ಕ್ಷೇತ್ರಸ್ಥ ಶ್ರೀ ನರಸಿಂಹ ದೇವರ ಸ್ತೋತ್ರ

**(ಶಾಮಸುಂದರವಿಠ್ಠಲಾಂಕಿತ)**

**ರಾಗ–ಮೋಹನ (ಭೂಪ)** **ಆದಿತಾಳ**

ರಕ್ಷಿಸೆನ್ನನು ನಿರುತ-ನರಮೃಗನಾಥ ॥ ॥ಪ॥

ರಕ್ಷಿಸೆನ್ನನು ಜಗತ್ಕುಕ್ಷಿಯೆ ಕರುಣಾ ಕ-
ಟಾಕ್ಷ ದಿಂದೀಕ್ಷಿಸಿ ತ್ರ್ಯಕ್ಷಾಂತರ್ಗತ ದೇವ ॥ ॥ಅ॥

ಪತಿತಪಾವನ ಪರಶತಮೋದ ಗತ ಖೇದ
ಚತುರ್ವೇದ ಗಾಯಿತ್ರಿ ಚತುರಾನನ ಸೂತ್ರ
ಪ್ರತಿಪಾದ್ಯಾನತಪಾಲ ಶತಕ್ರತು ಕೃತ ಧ್ವಂಸಿ
ಪ್ರಥಮಾಂಗನುತ ಮನ್ಮಥಪಿತ ಕ್ಷಿತಿನಾಥ ॥

ಯತಿತತಿ ಮಾನಸ ವ್ರತ ತೇಜ ಭಾಸ್ಕರ
ಸತತ ನಿನ್ನಯ ಪಾದವ-ಸದ್ಭಕುತಿಯಲಿ
ಸ್ತುತಿಪ ದಾಸರ ಸಂಗವ-ಗರೆದು ಭವ
ವ್ಯಥೆಯ ಬಿಡಿಸಿ-ಮಾಧವ ನೀನೊಲಿದತಿ
ಹಿತದಿಂದುಣಿಸು ನಿನ್ನ ಕಥೆ ಸುಧಾರಸವ ॥ ॥೧॥

ಅರಿದರ ಗದಾ ಪದ್ಮಧರ ಚತುಷ್ಟಯಕರ
ಶರಚರಗಿರಿ ಧೃತ ಧರಣೀ ತಸ್ಕರ ಹರ
ನರಗಾತ್ರ ಹರಿವಕ್ತ್ರ-ಸುರಪಾನುಜ ವಟು
ಪರಶು ಪಾಣಿಯೆ ವಾನರ ನರಪಾಲಕ ವಿರಹಿತಾಂ
ಬರ ಕಲ್ಕಿ ಶರಣ ಜನರು ಭಕ್ತ ಪರವಶದಲಿ ॥

ಕೂಗಿ ಕರೆಯಲಾಕ್ಷಣ ಓ ಎಂದು-ಭರದಿ ಬಂದು
ಪೊರೆವ ಪ್ರಭು ನೀ ಎಂದು-ಬುಧರು ಪೇಳ್ವ
ಪರವಾಕ್ಯ ಮನಕೆ ತಂದು-ಪ್ರಾರ್ಥಿಪೆ ನಿನ್ನ
ಚರಿತೆ ಪಾಡುವ ಸುಖಿಗರೆಯೋ ಪಾಂಡವ ಬಂಧು ॥ ॥೨॥

ಸಿಂಧೂರ ವರದಾತ ಸಿಂಧುಶಯನ ಶ್ಯಾಮ
ಸುಂದರವಿಠ್ಠಲ ಇಂದಿರಾತ್ಮಕ ತ್ರಯ
ಮಂದಿರ ಕಾರ್ಪರ ಮಂದಿರ ತರುರಾಜ
ಮಂದಿರದ್ವಿಜ ಮಧ್ಯ ಮಂದಿರಾತ್ಮಜ ಹೃ-॥
ನ್ಮಂದಿರ ಸದ್ಭಕ್ತ ಮಂದಾರ-ಭೂರುಹ
ಮಂಧರ ಗಿರಿಧರ-ಮಂದಜನೋದ್ಧಾರ ಮಂದಾಕಿನೀಪಿತ
ನಂದಗೋಪನ ಕುಮಾರ-ಗೋಕುಲ ವ್ರಜ

ವೃಂದಾವನ ವಿಹಾರ-ಕುತ್ಸಿತ ಖಳ
ವೃಂದಾಕಾನನ ಕುಠಾರ-ವಂದಿಪೆ ಎನ್ನ
ಕುಂದುಗಳೆಣಿಸದೆ ತಂದೆ ಪಿಡಿಯೋ ಕರ ॥ ॥೩॥



ಕೊಪ್ಪರ (ಕಾರ್ಪರ) ಕ್ಷೇತ್ರವು ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನಲ್ಲಿದೆ ಶ್ರೀ ಕೃಷ್ಣಾ ನದಿಯ ಪವಿತ್ರ ದಡದಲ್ಲಿರುವ ಈ ಕ್ಷೇತ್ರ-ಮೂರ್ತಿ ಶ್ರೀ ನರಸಿಂಹದೇವರು. ಮಹಾನ್ ಪಟವೃಕ್ಷದಲ್ಲಿ ಸಾಲಿ-ಗ್ರಾಮದ ರೂಪದಲ್ಲಿ ಪ್ರಕಟನಾಗಿ ಷೋಡಶ ಬಾಹುಗಳಿಂದ ವಿರಾಜಮಾನ ನಾಗಿದ್ದಾನೆ.

ಕವಿವರ್ಯ ಶ್ರೀ ಬಲ್ಲಟಗಿ ಗುಂಡಾಚಾರ್ಯರು (ಶಾಮಸುಂದರಾಂತಿಕ) ಈ ಪವಿತ್ರ ಕ್ಷೇತ್ರದಲ್ಲಿ ನರಸಿಂಹನ ದರ್ಶನಭಾಗ್ಯ ಪಡೆದಾಗ, ಅವರ ವದ ನಾರವಿಂದದಿಂದ ಹೊರ ಹೊಮ್ಮಿದ ಆಶು ಕವಿತೆ ಇದು.

**ಅರ್ಥವಿವರಣೆ :**

**ರಕ್ಷಿಸೆನ್ನನು ನಿರುತ** = ಸದಾ ನಮ್ಮನ್ನು ಸಂರಕ್ಷಿಸು, **ನರಮೃಗನಾಥ** = ನರಸಿಂಹನೇ (ನರ–ಮಾನವ ಮೃಗನಾಥ–ಮೃಗರಾಜನಾದ ಸಿಂಹ).

**ಜಗತ್ಕುಕ್ಷಿಯೆ** = ಸಮಗ್ರ ಜಗತ್ತನ್ನೂ ಇನ್ನೂ ಅನಂತಾನಂತ ಬ್ರಹ್ಮಾಂಡಗಳನ್ನು ತನ್ನ ಉದರದಲ್ಲಿ ಧರಿಸಿರುವ ಜಗದುದರನು (ಜಗತ್ + ಕುಕ್ಷಿ. ಕುಕ್ಷಿ-ಉದರಸ್ಥಾನ), **ಕರುಣಾ ಕಟಾಕ್ಷದಿಂದ ಈಕ್ಷಿಸಿ** = ಕೃಪಾ ದೃಷ್ಟಿಯಿಂದ ನನ್ನ ಕಡೆ ನೋಡಿ, **ತ್ರ್ಯಕ್ಷಾಂತರ್ಗತದೇವ** = ರುದ್ರಾಂತ ರ್ಗತ ಶ್ರೀನಾರಸಿಂಹನೇ. (ತ್ರ್ಯಕ್ಷ-ತ್ರಿ + ಅಕ್ಷ-ಮೂರು ಕಣ್ಣುಳ್ಳ ಶ್ರೀ-ರುದ್ರದೇವರು.

**ಪತಿತಪಾವನ** = ಶರಣಾಗತರಾದವರ ಪಾಪ ಪರಿಹರಿಸಿ, ಪವಿತ್ರಗೊಳಿಸುವ, **ಪರ** = ಶ್ರೇಷ್ಠನು. ಉತ್ತಮೋತ್ತಮನಾದ (ಸರ್ವೋತ್ತಮ). ದೇವನು, **ಶತಮೋದ** = ಅನಂತ ಆನಂದಮಯನು (ಶತ-ಶಬ್ದಕ್ಕೆ ಅನಂತ ಎಂದು ಸಾಂಕೇತ), **ಗತಖೇದ** = ದುಃಖ ವಿದೂರನು (ಗತ-ಹೋಗಲ್ಪಟ್ಟ ಖೇದ-ದುಃಖ) ಅಂದರೆ ಸದಾ ಆನಂದಸ್ವರೂಪನು, **ಚತುರ್ವೇದ** = ಋಗಾದಿ ನಾಲ್ಕು ವೇದಗಳು, **ಗಾಯಿತ್ರಿ** = ೨೪ ಅಕ್ಷರ ಸಂಖ್ಯಾಕವಾದ ಗಾಯಿತ್ರೀ ಮಂತ್ರ, **ಚತುರಾನನ ಸೂತ್ರ** = ಬ್ರಹ್ಮಸೂತ್ರ (ಚತುರಾನನ-ನಾಲ್ಮೊಗದ ಬ್ರಹ್ಮ) (ಇಲ್ಲಿ ಕವಿ ತಿಲಕರ ಶಬ್ದ ಪ್ರಯೋಗದ ಚಮತ್ಕಾರ ಗಮನಿಸಬೇಕು), **ಪ್ರತಿಪಾದ್ಯ** ವೇದ, ಗಾಯಿತ್ರೀ, ಬ್ರಹ್ಮ ಸೂತ್ರಗಳಿಂದ ಮುಖ್ಯ ಪ್ರತಿಪಾದ್ಯನು (ಅವುಗಳಿಗೆ ಮುಖ್ಯ ವಿಷಯನು), **ಆನತಪಾಲ** = ಶರಣಾಗತರಾದವರನ್ನು ಸಂರಕ್ಷಿಸುವವನು. **ಶತಕ್ರತು ಕೃತ ಧ್ವಂಸ** = ನೂರು ಅಶ್ವಮೇಧ ಯಾಗ ಮಾಡಿದ ಬಲಿಯು ಗರ್ವ ಭಂಗಮಾಡಿದ ವಾಮನದೇವ, (ಶತ = ೧೦೦ ಕ್ರತು-ಯಾಗ ಕೃತ-ಮಾಡಿದ ಬಲಿ), **ಪ್ರಥಮಾಂಗನುತ** = ಪ್ರಥಮಾಂಗ ಭೂತರಾದ ಶ್ರೀ ವಾಯುದೇವರಿಂದ ಸ್ತುತ್ಯನು, **ಮನ್ಮಥಪಿತ** = ಕಾಮಜನಕನು (ಕಾಮನು ಶ್ರೀ ಹರಿಯ ಮನಸ್ಸಿನಿಂದ ಜನಿಸಿದನು), **ಕ್ಷಿತಿನಾಥ** = ಭೂ ರಮಣನು(ಕ್ಷಿತಿ-ಭೂಮಿ).

**ಯತಿತತಿ** = ಮುನಿಗಳ ವರ್ಗಗಳ, **ಮಾನಸಮಂತ** = ಮಾನಸ-ಮಂದಿರನು (ಮುನಿ ಮಾನಸ ಮಂದಿರನು), **ತೇಜ ಭಾಸ್ಕರ** = ಕೋಟಿ-ಸೂರ್ಯ ಪ್ರಕಾಶನು (ತೇಜ-ಪ್ರಕಾಶ ಭಾಸ್ಕರ-ಸೂರ್ಯ), **ಸತತ-ನಿನ್ನಯ ಪಾದವ** = ನಿರಂತರದಲ್ಲೂ ನಿನ್ನಂಘ್ರಿ ಕಮಲಗಳನ್ನು, **ಸದ್ಭಕ್ತಿಯಲಿ** = ಸಮೀಚೀನವಾದ ಭಕ್ತಿ ಭಾವದಿಂದ, **ಸ್ತುತಿಪ ದಾಸರ ಸಂಗವ** = ನಿರಂತರವೂ ಭಜಿಸುವ ನಿನ್ನ ಕಿಂಕರರ ಸಹವಾಸವನ್ನು, **ಎರೆದು** = ನೀಡಿ, **ಭವ ವ್ಯಥೆಯನು ಬಿಡಿಸಿ** = ಸಂಸಾರವೆಂಬ ದುಸ್ತರವಾದ ದುಃಖವನ್ನು ಪರಿಹರಿಸಿ (ಕರ್ಮವಿಮೋಚನಾ ದ್ವಾರಾ), **ಮಾಧವ** = ಶ್ರೀ ಲಕ್ಷ್ಮೀ-ಪತಿಯೇ, **ನೀ ಒಲಿದು ಅತಿ ಹಿತದಿಂದ** = ನೀನೇ ನೀನಾಗಿ ಅನುಗ್ರಹಿಸಿ,

ಅತ್ಯಂತ ಅಂತಃಕರಣ ಪೂರ್ವಕವಾಗಿ, **ನಿನ್ನ ಕಥೆ ಸುಧಾರಸವ ಉಣಿಸು** = ನಿನ್ನ ಚರಿತಾಮೃತ ಸಾರವನ್ನು ನನಗೆ ಊಟ ಮಾಡಿಸು.

**ಅರಿ** = ಸುದರ್ಶನವೆಂಬ ಚಕ್ರ (ಅರವುಳ್ಳದ್ದು ಅರಿ, ಅಂದರೆ ಚಕ್ರ), **ದರ** = ಪಾಂಚಜನ್ಯವೆಂಬ ಶಂಖ, **ಗದಾ** = ಕೌಮೋದಕೀ ಎಂಬ ಗಧಾಯುಧ, **ಪದ್ಮಧರ** = ಪದ್ಮ–ಈ ನಾಲ್ಕನ್ನು ಚತುರ್ಭುಜ ಹಸ್ತಗಳಲ್ಲಿ ಧರಿಸಿರುವ, (ಚತುಷ್ಟಯುಕರ), **ಶರಚರ** = ನೀರಿನಲ್ಲಿ ಸಂಚರಿಸುವ ಮೀನು (ಮತ್ಸ್ಯಾವತಾರ), **ಗಿರಿಧೃತ** = ಮಂದರಗಿರಿಯನ್ನು ಬೆನ್ನಲ್ಲಿ ಧರಿಸಿದ ಕೂರ್ಮ, **ಧರಣಿ ತಸ್ಕರ ಹರ** = ಭೂಮಿಯನ್ನು ಕದ್ದೊಯ್ದ ಹಿರಣ್ಯಾಕ್ಷನನ್ನು ಸಂಹರಿಸಿದ ವರಾಹಾಮೂರ್ತಿ,(ಧರಣಿ-ಭೂಮಿ ತಸ್ಕರ-ಕಳ್ಳ), **ನರಗಾತ್ರ ಹರಿವಕ್ತ್ರ** = ನರಸಿಂಹರೂಪನೇ (ನರ-ಮಾನವ ಹರಿ-ಸಿಂಹ ಗಾತ್ರ-ಶರೀರ), **ಸುರಪಾನುಜ** = ಉಪೇಂದ್ರ ನಾಮಕನಾದ ಶ್ರೀ ವಾಮನ (ಸುರಪ-ಇಂದ್ರ ಅನುಜ–ತಮ್ಮ. ಅವನೇ ಉಪೇಂದ್ರನು), **ವಟು** = ಬ್ರಹ್ಮಚಾರಿಯಾದ ಶ್ರೀ ವಾಮನಮೂರ್ತಿ, **ಪರಶುಪಾಣಿಯು** = ಕೊಡಲಿಯನ್ನು ಹಿಡಿದ ಪರಶುರಾಮ (ಪರಶು–ಗಂಡುಗೊಡಲಿ), **ವಾನರಪಾಲಕ** = ವಾನರ ಸಂರಕ್ಷಕನಾದ ಶ್ರೀ ರಾಮಚಂದ್ರ, **ನರಪಾಲಕ** = ನರನಾಮಕನಾದ ಅರ್ಜುನನನ್ನು ಸಂರಕ್ಷಿಸಿದ ಶ್ರೀ ಕೃಷ್ಣ, **ವಿರಹಿತಾಂಬರ** = ಬಟ್ಟೆಯನ್ನು ಬಿಟ್ಟ ಬುದ್ಧ (ವಿರಹಿತ-ಬಿಟ್ಟ. ಅಂಬರ-ಬಟ್ಟೆಯುಳ್ಳವನು, ಅಂದರೆ ನಗ್ನನಾದ), **ಕಲ್ಕಿ** = ಕಲ್ಕಿರೂಪಿಯೇ, **ಶರಣ ಜನರು ಭಕ್ತಿ–ಪರವಶದಲಿ** = ನಿನಗೆ ಶರಣಾಗತರಾಗಿ ಬಂದ ಭಕ್ತ ಜನರು ಭಕ್ತ ಪಾರವಶ್ಯತೆಯಿಂದ.

**ಕೂಗಿ ಕರೆಯಲಾಕ್ಷಣ** = ನಿನ್ನನ್ನೇ ಸಂಬೋಧಿಸಿ, ಆಹ್ವಾನಿಸಲು, ಆ ಕ್ಷಣದಲ್ಲಿಯೇ, **ಎಂದು ಭರದಿ ಬಂದು** = ಅವರ ಕೂಗಿಗೆ ಓ ಗೊಟ್ಟು, ಶೀಘ್ರದಿಂದ ಬಂದು, **ಪೊರೆವ ಪ್ರಭು** = ಭಕ್ತಜನ ಸಂರಕ್ಷಕನಾದ ಎಲ್ಲ ಸ್ವಾಮಿಯೇ, **ನೀ ಎಂದು ಬುಧರು ಪೇಳ್ವ** = ಆಪದ್ಬಾಂಧವನು ನೀನೇ-ಎಂದು ಜ್ಞಾನಿಗಳು ಹೇಳುವ, **ವರವಾಕ್ಯ ಮನಕೆ ತಂದು** = ಉತ್ತಮ ವಚನಗಳನ್ನು ಕೇಳಿ, ಮನಸ್ಸಿಗೆ ತಂದು ಕೊಂಡು, **ನಿನ್ನ ಪ್ರಾರ್ಥಿಪೆ** =

ನಿನ್ನನ್ನು ಪ್ರಾರ್ಥಿಸುತ್ತೇನೆ, **ನಿನ್ನ ಚರಿತೆ ಪಾಡುವ** = ನಿನ್ನ ಮಹಾಮ ಹಿಮೋಪೇತವಾದ ಚರಿತ್ರೆಯನ್ನು ಪಾಡಿ ಪೊಗಳುವ, **ಸುಖಗರೆಯೋ** = ಆನಂಧ ಧಾರೆ ಸುರಿಸು, **ಬಂಧು** = ಎನ್ನ ಪರಮಾಪ್ತ ಬಾಂಧವನಾದ ಅಸ್ಮತ್ ಬಿಂಬರೂಪೀ ಶ್ರೀ ಹರಿಯೇ!

**ಸಿಂಧೂರ ವರದಾತ** = ಗಜೇಂದ್ರನನ್ನು ಸಲಹಿದ ಕರಿ ವರದನು, **ಸಿಂಧುಶಯನ** = ಕ್ಷೀರ ಸಮುದ್ರದಲ್ಲಿ ಮಲಗಿರುವವನು (ಕ್ಷೀರ ಸಾಗರ ಶಾಯಿ), **ಇಂದಿರಾತ್ಮಕ** = ಲಕ್ಷ್ಯಾತ್ಮಕವಾದ, **ತ್ರಯ ಮಂದಿರ** = ವೈಕುಂಠ-ಅನಂತಾಸನ-ಶ್ವೇತ ದ್ವೀಪಗಳೆಂಬ ಮುಕ್ತಿ ಧಾಮತ್ರಯಗಳಲ್ಲಿ ವಾಸಿಸುವ, **ಕಾರ್ಪರ ಮಂದಿರ** ಕೊಪ್ಪರ ಕ್ಷೇತ್ರಸ್ಥ, **ತರುರಾಜ** = ವಟವೃಕ್ಷದಲ್ಲಿ ಪ್ರಕಟವಾಗಿರುವ ಶ್ರೀ ನರಸಿಂಹಮೂರ್ತಿ, **ಮಂದಿರದ್ವಿಜ** = ಹೃತ್ಕುಮುದ ಚಂದ್ರನೇ (ಮಂದಿರ-ಹೃದಯ ಸದನವೆಂಬ ಕುಮುದ ಪುಷ್ಪ ದ್ವಿಜ-ಚಂದ್ರ ಸದೃಶನು), **ಮಧ್ಯೆ ಮಂದಿರಾತ್ಮಜ** = ಮಧ್ಯಗೇಹ ಭಟ್ಟರ ಪುತ್ರರಾದ ಗುರು ಮಧ್ವರು, **ಹೃನ್ಮಂದಿರ** = ಶ್ರೀ ಮನ್ಮಧ್ವ ಮಾನಸ ಮಂದಿರನು. (ಇಲ್ಲಿ ವಾಯುಗೋಳಕ ದ್ವಾರಾ ನನ್ನ ಹೃದಯ ಪದ್ಮಸದನದಲ್ಲಿ ಬಿಂಬದರ್ಶನ ಎಂಬ ತಾತ್ಪರ್ಯ), **ಸದ್ಭಕ್ತ ಮಂದಾರ ಭೂರುಹ** = ಸಜ್ಜನರಾದ ಭಗವದ್ಭಕ್ತರ ಪಾಲಿಗೆ ಕಲ್ಪ ವೃಕ್ಷ ಸದೃಶನು (ಮಂದಾರ ಭೂರುಹ–ಮಂದಾರ ವೃಕ್ಷ–ಕಲ್ಪ ವೃಕ್ಷ), **ಮಂದರ ಗಿರಿಧರ** = ಸಮುದ್ರ ಮಥನ ಕಾಲದಲ್ಲಿ ಮಂದರ ಪರ್ವತವನ್ನು ತನ್ನ ಬೆನ್ನಿನ ಮೇಲೆ ಹೊತ್ತ ಕೂರ್ಮ, **ಮಂದ ಜನೋದ್ಧಾರ** = ದೀನ ಜನರನ್ನು ಉದ್ಧರಿಸುವ ಕರಣಾಸಿಂಧು, **ಮಂದಾಕಿನೀಪಿತ** = ಗಂಗಾ ಜನಕನಾದ ತ್ರಿವಿಕ್ರಮ ಮೂರ್ತಿಯು, **ನಂದಗೋಪನ ಕುಮಾರ** = ನಂದಗೋಪ ಮತ್ತು ಯಶೋದೆಯ ಸಾಕುಪುತ್ರ ಶ್ರೀ ಕೃಷ್ಣ, **ಗೋಕುಲ ವ್ರಜ ವೃಂದಾವನ ವಿಹಾರ** = ನಂದ ಗೋಕುಲ ಮತ್ತು ವೃಂದಾವನ ಕ್ಷೇತ್ರಗಳಲ್ಲಿ ವಿಹರಿಸಿದ ಚಿನ್ಮಯನು, **ಕುತ್ಸಿತ ಖಳ** = ದುಷ್ಟರಾದ ದೈತ್ಯ, **ವೃಂದ ಕಾನನ** = ಸಮೂಹವೆಂಬ ಅರಣ್ಯಕ್ಕೆ, **ಕುಠಾರ** = ಗಂಡುಗೊಡಲಿಯ ಸದೃಶನೇ, **ವಂದಿಪೆ** = ನಿನಗೆ ನಮಿಸುತ್ತೇನೆ, **ಎನ್ನ ಕುಂದುಗಳೆಣಿಸದೆ** = ನನ್ನಲ್ಲಿರುವ

ಅಪರಾಧ ನ್ಯೂನತಾದಿಗಳನ್ನು ಪರಿಗಣಿಸದೆ, ತಂದೆ ಕರಪಿಡಿಯೋ = ಜಗಜ್ಜನಕನೇ, ನನ್ನ ಕೈಯನ್ನು ಹಿಡಿದು ಉದ್ಧರಿಸು.



೩೭

(ಶಾಮಸುಂದರಾಂಕಿತ)

ರಾಗ–ಮಾಂಡ್ ಆದಿತಾಳ

ನಮೋ ನಮೋ ನರಮೃಗರಾಜ–ಸದಾ
ನಮಿಪೆ ಸುಜನರಿಗೆ ಅಮರ ಮಹೀಜ ॥ ॥ಪ॥

ಕಮಲಸಂಭವ ಸುಮನಸೇಂದ್ರ ಪ್ರಮುಖ
ನಮಿತ ಸುಮಹಿಮ ಗಜರಿಪು
ದಮನ ದ್ವಿಜವರ ಗಮನ ಗುಣನಿಧಿ
ಕಮಲೆಯಾಳ ಮುಖ ಕುಮುದ ಹಿಮಕರ ॥ ॥ಅ॥

ಜಾತರಹಿತ ಜಗದೀಶ ದನು
ಜಾತ ವ್ರಾತಾರಣ್ಯ ಜಾತವೇದ
ಶೀತಾಂಶು ಭಾನು ಸಂಕಾಶ ಶ್ರೀ ಭೂನಾಥ
ಭೂತೇಶ ಹೃತ್ಪಾಥೋಜಾವಾಸ
ಶಾತಕುಂಭ ಕಶ್ಯಪನ ಗರ್ವಜೀ
ಮೂತ ವೃಂದಕೆ ವಾತನೆನಿಸುವ
ಪೋತ ಪ್ರಹ್ಲಾದನಿಗೆ ಒಲಿದು ಸಂ-
ಪ್ರೀತಿಯಲಿ ಪೊರೆದಾತ ದಾತನೆ ॥ ॥೧॥

ಮಾತುಳವೈರಿ ಗೋಪಾಲ ವೇಣು-
ಗೀತ ಸಂಪ್ರೀತ ಶ್ರೀ ರುಕ್ಮಿಣಿ ಲೋಲ
ಧಾತಾಂಡೋದರ ವನಮಾಲಾ ಧೃತ
ಪೂತನ ಬಕ ಶಕಟಾರಿ ಹೃತ್ಕೂಲ
ಪಾತಕಾದ್ರಿ ಶತಧಾರ ಶುಭಕರ
ಶ್ವೇತ ದ್ವೀಪಾನಂತ ಪೀಠ ಪು-
ನೀತ ವರ ವೈಕುಂಠ ಘನಸುನಿ-
ಕೇತನತ್ರಯ ವೀತ ಭವ ಭಯ ಹರ ॥ ॥೨॥

ಮಾರಜನಕ ಶುಭಕಾಯ ಕೃಷ್ಣಾ-
ತೀರ ಸಂಶೋಭಿತ ಕಾರ್ಪರ ನಿಲಯ
ದೂರ ನೋಡದೆ ಪಿಡಿಕೈಯ್ಯ-ಶ್ರೀ ಸ-
ಮೀರ ಸನ್ನುತ ಶಾಮಸುಂದರೇಯ
ವಾರಿಚರ ಗಿರಿಭಾರಧರ ಭೂ-
ಚೋರಹರ ಗಂಭೀರ ವಟು ಕು-
ಠಾರಕರ ರಘುವೀರ ನಂದ ಕು-
ಮಾರ ವಸನವಿದೂರ ಹಯಧ್ವಜ ॥ ॥೩॥



**ಅರ್ಥವಿವರಣೆ :**

ಕವಿ ಕುಲ ತಿಲಕ, ಆಶು ಕವಿತಾ ಶ್ರೇಷ್ಠ ಶ್ರೀ ಬಲ್ಲಟಗಿ ಗುಂಡಾ-ಚಾರ್ಯರ ಕೃತ ಇನ್ನೊಂದು ಕಾರ್ಪರ ನರಸಿಂಹನ ಸ್ತೋತ್ರ ರೂಪವಾದ ಕೀರ್ತನ ಸಾಹಿತ್ಯವಿದು.

**ನರಮೃಗರಾಜ** = ನರಸಿಂಹ (ಮೃಗರಾಜ-ಮೃಗಗಳ ರಾಜನಾದ ಸಿಂಹ), **ನಮೋ ನಮೋ** = ನಿನಗೆ ಭಕ್ತಿಪೂರ್ವಕ ನಮಸ್ಕಾರವು, **ಸದಾ**

**ನಮಿಪ**=ನಿನಗೆ ಯಾವಾಗಲೂ ನಮಿಸುವ, **ಸುಜನರಿಗೆ**=ಸಜ್ಜನರಾದ ಭಗವದ್ಭಕ್ತರ ಪಾಲಿಗೆ, **ಅಮರ ಮಹೀಜ**=ಕಲ್ಪವೃಕ್ಷ ಸದೃಶನೇ(ಅಮರ ದೇವತೆಗಳ ಮಹೀಜ-ಭೂಮಿಯಲ್ಲಿ ಹುಟ್ಟುವ ವೃಕ್ಷ).

**ಕಮಲಸಂಭವ**=ಶ್ರೀ ಪರಮಾತ್ಮನ ನಾಭೀಕಮಲ ಸಂಜಾತರಾದ ಶ್ರೀ ಬ್ರಹ್ಮದೇವರು, **ಸುಮನಸೇಂದ್ರ**= ಇಂದ್ರದೇವರು (ಸುಮನಸ-ಸಾತ್ವಿಕ ಮನಸ್ಸುಳ್ಳ ದೇವತಾವರ್ಗ. ಇಂದ್ರ-ಸುರಪತಿಯಾದ ಇಂದ್ರ ದೇವರು), **ಪ್ರಮುಖ**=ಇವರೇ ಮೊದಲಾದ ಸಮಸ್ತ ಸುರವೃಂದ-ದಿಂದ, **ನಮಿತ**=ನಮಸ್ಕೃತನಾದ, **ಸುಮಹಿಮ**= ಸಮೀಚೀನವಾದ ಮಹಾ ಮಹಿಮೋಪೇತನು, **ಗಜರಿಪು ದಮನ**=ಗಜೇಂದ್ರನನ್ನು ಪೀಡಿಸುತ್ತಿದ್ದ ಮೊಸಳೆಯನ್ನು ಕೊಂದ ಕರಿವರ ವರದನು, **ದ್ವಿಜವರ ಗಮನ** =ಗರುಡವಾಹನು. (ದ್ವಿಜ-ಪಕ್ಷಿಗಳು. ದ್ವಿಜವರ-ಪಕ್ಷಿ ಶ್ರೇಷ್ಠರಾದ ಗರುಡ. ಗಮನ-ವಾಹನ), **ಗುಣನಿಧಿ**= ಗುಣಗಣ ಪರಿಪೂರ್ಣನು, **ಕಮಲೆಯುಳ**= ಶ್ರೀ ರಮಾದೇವಿಯರ, **ಮುಖ ಕುಮುದ**=ಮುಖವೆಂಬ ಕನ್ನೈದಿಲೆ ಪುಷ್ಪಕ್ಕೆ, **ಹಿಮಕರ**=ಚಂದ್ರ ಸದೃಶನೇ.

**ಜಾತರಹಿತ**=ಜನನ ವಿದೂರ (ಆದಿ ಮಧ್ಯಾಂತ ರಹಿತನೆಂದು ತಾತ್ಪರ್ಯ), **ಜಗದೀಶ**=ಚರಾಚರಾತ್ಮಕವಾದ ಜಗತ್ತಿಗೇ ಪ್ರಭುವ (ಬ್ರಹ್ಮಾಂಡನಾಯಕ), **ದನುಜಾತ**= ದಾನವರೆಂಬ (ದನುವು ಕಶ್ಯಪರ ಪತ್ನಿ ಅವಳಲ್ಲಿ ಸಂಜಾತರಾದವರೇ ದಾನವರು), **ವ್ರಾತ**=ಸಮೂಹ-ವೆಂಬ, **ಅರಣ್ಯ**=ಕಾಡಿಗೆ, **ಜಾತವೇದ**=ಅಗ್ನಿ ಸದೃಶನು (ಕಾಳ್ಗಿಚ್ಚು), **ಶೀತಾಂಶು**=ತಂಪಾದ ಕಿರಣಗಳುಳ್ಳ ಚಂದ್ರ (ಹಿಮ-ತಂಪಾದ ಅಂಶು-ಕಿರಣ), **ಭಾನು**=ಸೂರ್ಯ, **ಸಂಕಾಶ**=ಅನಂತ ಕೋಟಿ ಸೂರ್ಯ (ಚಂದ್ರ) ಪ್ರಕಾಶನು, **ಶ್ರೀ ಭೂನಾಥ**= ಶ್ರೀ ದೇವಿ ಮತ್ತು ಭೂದೇವಿಗೆ ರಮಣನು, **ಭೂತೇಶ**=ಭೂತಗಣಗಳಿಗೆ ಅಧಿಪತಿಯಾದ ಶ್ರೀ ರುದ್ರ ದೇವರ, **ಹೃತಪಥೋಜ ಆವಾಸ** ಹೃತ್ಪದ್ಮರಲ್ಲಿ ಆವಾಸನಾಗಿರುವ ಅಂದರೆ ಶ್ರೀ ರುದ್ರಾಂತರ್ಗತ ನಾರಸಿಂಹನೆಂದು ತಾತ್ಪರ್ಯ, **ಶಾತಕುಂಭ**

**ನ** ಹಿರಣ್ಯ ಕಶಿಪುವಿನ (ಶಾತಕುಂಭ-ಬಿನ್ನ–ಹಿರಣ್ಯ), **ಗರ್ವ** = ಾರವೆಂಬ, **ಜೀಮೂತ ವೃಂದಕೆ** = ಮೇಘಗಳ ಸಮೂಹಕ್ಕೆ, **ನಿಸುವ** = ಗಾಳಿಯಂತಿರುವವನೇ, ಅಂದರೆ ದಾನವರೆಂಬ ಮೋಡ ದಶ ದಿಕ್ಕುಗಳಿಗೆ ಚೆದುರಿಸುವ ಬಿರುಗಾಳಿ ಸದೃಶನು, **ಪ್ರೋತ–** ದನ = ಬಾಲಕ ಪ್ರಹ್ಲಾದನಿಗೆ, **ಒಲಿದು** = ಅನುಗ್ರಹಿಸಿ, **ತಿಯಲಿ** = ಅತ್ಯಂತ ಅಂತಃಕರಣ ಪೂರ್ವಕವಾಗಿ, **ಪೊರೆದಾತ** = ಸಿದಂಥ ಶ್ರೀ ಲಕ್ಷ್ಮೀನರಸಿಂಹನು, **ದಾತನೆ** = ದಾನ ಶ್ರೇಷ್ಠನೇ.

**ಮಾತುಳ ವೈರಿ** = ಮಾವನಾದ ದುಷ್ಟ ಕಂಸನನ್ನು ಸಂಹರಿಸಿದ ಶ್ರೀ **ಗೋಪಾಲ** ಗೋವು ಮತ್ತು ಗೋಪರನ್ನು ಸಂರಕ್ಷಿಸಿದ ಶ್ರೀ **ವೇಣುಗೀತ ಸಂಪ್ರೀತ** = ವೇಣುವಾದದ ಸಂಗೀತದಿಂದ ಸಂಪ್ರೀತ (ಮುರಳೀ ನಾದದಿಂದ ಇವರಿಗೆ ಆನಂದ ಪ್ರದನಾದ), **ಶ್ರೀ ಕೇಲೋಲ** = ಶ್ರೀ ರುಕ್ಮಿಣೀದೇವಿಯರಲ್ಲಿ ವಿಹರಿಸುವ, **ಧಾತಾಂ–** ರ = ಉದರದಲ್ಲಿ ಬ್ರಹ್ಮಾಂಡವನ್ನು ಧರಿಸಿರುವ (ಧಾತ–ಬ್ರಹ್ಮ ಂಡ–ಬ್ರಹ್ಮಾಂಡ), **ವನಮಾಲಾ ಧೃತ** = ತುಳಸೀ ಮಾಲೆಯಿಂದ ತನಾದ, **ಪೂತನ ಬಕ ಶಕಟಾರಿ** ಪೂತನೀ, ಬಕಾಸುರ, ಶಕಟಾ ಇತ್ಯಾದಿ ದೈತ್ಯರನ್ನು ಸಂಹರಿಸಿದ ಶ್ರೀ ಕೃಷ್ಣ, **ಹೃತಶೂಲ** = ವನ್ನು ಬಾಧಿಸುವ, **ಪಾತಕಾದ್ರಿ** = ಪಾಪಗಳೆಂಬ ಪರ್ವತಗಳಿಗೆ, ರ = ಇಂದ್ರ ಸದೃಶನಾದವನೇ, **ಶುಭಕರ** = ಮಂಗಳಪ್ರದನು, **ೀಪ ಅನಂತ ಪೀಠ** = ಶ್ವೇತದ್ವೀಪ ಮತ್ತು ಅನಂತಾಸನಗಳೆಂಬ, = ಪರಮ ಪವಿತ್ರ. ವಾದ, **ವರ ವೈಕುಂಠ** = ಶ್ರೇಷ್ಠವಾದ ಠ (ಪರಮ ಪದ), **ಘನಸುನಿಕೇತನತ್ರಯ** = ಮುಕ್ತಿ ಧಾಮತ್ರ ನ್ನು ಮಂದಿರವಾಗಿ ಉಳ್ಳ, **ವೀತಭವ** = ಅಪ್ರಾಕೃತ ಪುರುಷನಾದ ರ ರಹಿತನು), **ಭಯ ಹರ** = ಸಂಸಾರವೆಂಬ ಭಯ ವನ್ನ ನಿವಾರಿ– .

**ಮಾರಜನಕ** = ಮನ್ಮಥನ ಜನಕನು, **ಶುಭಕಾಯ** = ಜ್ಞಾನಾನಂದ ಪರಿಪೂರ್ಣ ಶರೀರವುಳ್ಳವನೇ, **ಕೃಷ್ಣಾ ತೀರ** = ಕೃಷ್ಣಾ ನದಿಯ

ತೀರಸ್ಥ, **ಸುಶೋಭಿತ** = ವಿರಾಜಮಾನನಾದ, **ಕಾರ್ಪರ ನಿಲಯ** = ಕೊಪ್ಪರ ಗ್ರಾಮ ನಿವಾಸಿ, **ದೂರ ನೋಡದೆ** = ನನ್ನನ್ನು ಉಪೇಕ್ಷಿಸದೆ, **ಪಿಡಿಕೈಯ್ಯ** = ನನ್ನ ಕೈಯ್ಯನ್ನು ಹಿಡಿದು ಸಂರಕ್ಷಿಸು, **ಶ್ರೀ** = ಶ್ರೀ ಲಕ್ಷ್ಮೀ ದೇವಿ, **ಸಮೀರ** = ಶ್ರೀ ವಾಯುದೇವರಿಂದ, **ಸನ್ನುತ** = ಚೆನ್ನಾಗಿ ಸ್ತುತ್ಯಮಾನನಾದ, **ಶಾಮಸುಂದರನೇ** ಶಾಮಸುಂದರ ಮೂರ್ತಿಯೇ, (ದಾಸರ ಅಂಕಿತನಾಮ).

**ವಾರಿಚರ** = ನೀರಿನಲ್ಲಿ ವಿಹರಿಸುವ ಮತ್ಸ್ಯಾವತಾರಿ, **ಗಿರಿಭಾರಧರ** = ಮಂದರ ಗಿರಿಯನ್ನು ಬೆನ್ನಲ್ಲಿ ಧರಿಸಿದ ಕೂರ್ಮಾವತಾರೀ, **ಭೂಚೋರಹರ** = ಭೂಮಿಯನ್ನು ಕದ್ದೊಯ್ದ ಹಿರಣ್ಯಾಕ್ಷನನ್ನು ಸಂಹರಿಸಿದ ಭೂವರಾಹಮೂರ್ತಿ, **ಗಂಭೀರ** = ನರಸಿಂಹ, **ವಟು** = ಬ್ರಹ್ಮಚಾರಿಯಾದ ಶ್ರೀ ವಾಮನ. **ಕುಠಾರಕರ** ಕೊಡಲಿಯನ್ನು ಹಿಡಿದ ಶ್ರೀ ಪರಶುರಾಮ, **ರಘುವೀರ** = ರಘು ಕುಲ ತಿಲಕನಾದ ಶ್ರೀ ರಾಮಚಂದ್ರ, **ನಂದಕುಮಾರ** = ನಂದಗೋಪನ ಸಾಕುಪುತ್ರ ಶ್ರೀ ಕೃಷ್ಣ, **ವಸನ ವಿದೂರ** = ಬೆತ್ತಲೆ ನಿಂತ ಬುದ್ಧ, **ಹಯಧ್ವಜ** = ಕುದುರೆಯನ್ನೇರಿದ ಕಲ್ಕಿ ರೂಪನು.



**೩೮**

**(ಅಂಕಿತ–ಪ್ರಸನ್ನ ಶ್ರೀನಿವಾಸ)**

**ರಾಗ–ಧನ್ಯಾಸಿ** **ತಾಳಆದಿ**

ವಂದಿಸು ನರಹರಿಯ-ಮನವೆ ವಂದಿಸು ನರಹರಿಯ ॥ ॥ಪ॥

ವಂದ್ಯವಂದ್ಯನು ಬಹು ಸುಂದರ ಸುಖಮಯ
ಇಂದಿರೆಯರಸ ಅರವಿಂದ ಸುನಾಭನ–ವಂದಿಸು ನರಹರಿಯ ॥ ॥ಅ॥

ಸಿಂಧು ಸಂಚರ-ಬಹು ಸುಂದರ ಗಿರಿಧರ
ತಂದನು ವಸುಧೆಯ-ಕಂದನ ಕಾಯ್ದ-ಪು-
ರಂದರ ವರದ ಮುನೀಂದ್ರಕುಮಾರ-ಕ-
ಪೀಂದ್ರಗೆ ಒಲಿದ ಮರೇಂದ್ರಗೆ ಬೋಧಿಸಿ
ನಿಂದೆ ದಿಗಂಬರ-ಕುಂಭಿಣಿ ಸುರನುತ ॥

ಮಂದರಗಿರಿ ಎತ್ತಿ ಸಿಂದುವಿನಿಂದಲಿ ಬಂದು
ಅಂಧ ಮೂಢರ ತನ್ನ ಅಂಧ ಮೋಹದಿ ಕಟ್ಟಿ
ದಾನ್ತ ಸುರರಿಗೆಲ್ಲ ಚೆಂದ ಸುಧೆಯನಿತ್ತ
ಇಂದಿರಾಕಾಂತನನಂತ ಸುಗುಣಗಳ
ಚಿಂತಿಸಿ ಯೋಗ್ಯದಿ ಕುಂದದ ಪ್ರೇಮದಿ
ವಂದಿಸು ನರಹರಿಯ ॥ ॥೧॥

ವೇದಾಂತರ್ಗತ ಬಾದರಾಯಣ ಹರಿ-
ಪಾದಾರಾಧಕ ಮೋದ ಸುತೀರ್ಥರ
ಪಾದಾವಲಂಬಕ ಸಾಧು ಸುಮೋಧರ
ಹೃದಯಾಕಾಶದಿ ಪದುಮದ ಮೂಲದಿ
ಸದಮಲಾತ್ಮನಾದಿತ್ಯನವೋಲು ॥

ವಿಧ ವಿಧ ಭಾನದಿ ಪದೆ ಪದೆ ನೋಡುತ
ವಿಧಿಯ ಪಾವನ ಬಹು ಮೋದ ಸುಗುಣಗಳ
ಮುದದಲಿ ಚಿಂತಿಪ ಕೋವಿದ ಹಿರಿಯರ
ಪಾದ ಸುಪಾಂಶುವ ನಿಯಮದಿ ಪೊಂದಿ ನೀ
ಪದುಮೇಶನ ನಿನ್ನ ಹೃದಯದಿ ಚಿಂತಿಸಿ
ವಂದಿಸು ನರಹರಿಯ ॥ ॥೨॥

ನಿಜ ಸುಖ ಮಾರ್ಗದಿ ಭಜಕ ಬಾಲಕ ಪೋಗೆ
ಆರ್ಜಿತ ದ್ವೇಷದಿ ಮೂರ್ಜಗ ಶತ್ರು
ಗಜಾದಿಗಳಿಂ ಹೆಜ್ಜೆ ಹೆಜ್ಜೆಗೆ ಬಾಧಿಸ
ಧೂರ್ಜಟಿಸೇವ್ಯ ಜನಾರ್ದನ ನರಹರಿ
ಗರ್ಜಿಪ ವದನನು ಸಜ್ಜನ ಪಾಲಕ ॥
ಅಜಸುರರೆಲ್ಲರು ನಿಜ ಭಕುತಿಯಲಿ
ಭಜಿಸಿ ಆರಾಧಿಪ ತೇಜೋಮಯ ಅತಿ-
ಜ್ವಲಿಸುವ ನಖದಿಂ ದುರ್ಜನ ರಾಜನ
ಬೊಜ್ಜೆಯ ಛೇದಿಸಿ ಭಜಕಗೆ ವರವಿತ್ತು
ಸೃಜಾಸೃಜ್ಯರ ಪ್ರಾಜ್ಞನ ಮರೆಯದೆ
ವಂದಿಸು ನರಹರಿಯ ॥ ॥೩॥

ಸೃಷ್ಟ್ಯಧೀಶನ ದೃಷ್ಟನಾಗಿರುತಿಹ
ಸೃಷ್ಟಾ ಸೃಷ್ಟ ಪ್ರವಿಷ್ಟಾ ಸ್ಪಷ್ಟನು
ಶಿಷ್ಟರ ಇಷ್ಟ ಸುದೃಷ್ಟಿಯ ಬೀರುತ
ಶಿಷ್ಟರ ಬಹುವಿಧ ಕಷ್ಟಗಳಳಿದು ಅ-
ಭೀಷ್ಟಗಳನೀವನು ದುಷ್ಟರ ಶಿಕ್ಷಿಪ ॥
ಭ್ರಷ್ಟ ಜನರಿಗಿವ ಸ್ಪಷ್ಟನಾಗುವನಲ್ಲ
ಶ್ರೇಷ್ಠೋತ್ತಮ ಪರಮೇಷ್ಠಿ ಜನಕನಿವ
ಕಾಷ್ಠಾಗ್ನಿಯವೋಲ್ ಅದೃಷ್ಟಾದೃಷ್ಟನು
ದುಷ್ಟ ದೂರ ವಾಸಿಷ್ಠ ಶ್ರೀ ಕೃಷ್ಣನು
ತಿಷ್ಟನು ನಿನ್ನೊಳುತ್ಕೃಷ್ಟನೆಂದರಿತು
ವಂದಿಸು ನರಹರಿಯ ॥ ॥೪॥

ಸರಿಪರರಿಲ್ಲದ ಸಿರಿಯರಸನ ಚಾರು
ಚರಣಾರಾಧನ ಪರಮ ಸುಖವೀವುದು
ಸಿರಿಬೊರೆ ಸುಹೃದನು ಸಿರಿಸಹ ಮೆರೆಯುತ

ಅರಿತ ಸುಜನರನು ಪೊರೆವನು ದಯದಿ
ಮೊರೆಯನು ಲಾಲಿಸಿ ಪೊರೆದನು ಗರ್ಭವ
ಮರೆತು ನಾರಾ ಎಂದ ಸರಸುರ ಗೊಲಿದನು ॥

ಪೊರೆದನು ದಯದಿ ನರಾಧಮ ಎನ್ನನು
ಕರಿವರ ದ್ರೌಪದಿ ವರದ ವಿಖ್ಯಾತನು
ಸರಸಿಜ ಭವತಾತ **ಪ್ರಸನ್ನ ಶ್ರೀನಿವಾಸ**
ಪೊರೆವನು ನೆನವರ ಸಿರಿ ಭೂ ದೊರೆಯೆಂದು–ವಂದಿಸು ನರಹರಿಯ ॥

॥೫॥

**ಅರ್ಥವಿವರಣೆ :**

**ವಂದ್ಯ ವಂದ್ಯನು** = ರಮಾ ಬ್ರಹ್ಮಾದಿಗಳು ಇತರ ದೇವತೆಗಳಿಂದ ವಂದ್ಯರು. ಶ್ರೀ ಪರಮಾತ್ಮನಾದರೋ ರಮಾ ಬ್ರಹ್ಮಾದಿ ವಂದ್ಯನು, **ಬಹು ಸುಂದರ** = ಅತ್ಯಂತ ಸೌಂದರ್ಯಯುತವಾದ (ಅಪ್ರಾಕೃತ ಜಗದ್ವಿಲಕ್ಷಣ ಸೌಂದರ್ಯಸಾರನು), **ಸುಖಮಯ** = ಆನಂದಮಯ ಸ್ವರೂಪಿಯು, **ಇಂದಿರೆಯರಸ** = ಶ್ರೀ ಲಕ್ಷ್ಮೀಪತಿಯು, **ಅರವಿಂದ ಸುನಾಭನ** = ಸಮೀಚೀನವಾದ ತನ್ನ ನಾಭಿಯಲ್ಲಿ ಕಮಲವನ್ನು ಸೃಷ್ಟಿಸಿದ ಪದ್ಮನಾಭನು.

**ಸಿಂಧು ಸಂಚರ** = ಸಮುದ್ರ ಜಲದಲ್ಲಿ ವಿಹರಿಸುವ (ಸಿಂಧು–ಸಮುದ್ರ) ಮತ್ಸ್ಯ, **ಗಿರಿಧರ** = ಮಂದರ ಗಿರಿ ಧಾರಿಯಾದ ಕೂರ್ಮ, **ತಂದನು ವಸುಧೆಯ** = ಭೂ ಚೋರನಾದ ಹಿರಣ್ಯಾಕ್ಷನನ್ನು ಸಂಹರಿಸಿ, ಭೂಮಿಯನ್ನು ಉದ್ಧರಿಸಿದ ಶ್ರೀ ವರಾಹನು (ವಸುಧೆ–ಭೂಮಿ), **ಕಂದನ ಕಾಯ್ದ** = ಬಾಲ ಪ್ರಹ್ಲಾದನನ್ನು ಸಂರಕ್ಷಿಸಿದ ಶ್ರೀ ನರಸಿಂಹ, **ಪುರಂದರ ವರದ** = ಉಪೇಂದ್ರನಾಮಕ ಶ್ರೀ ವಾಮನನು (ಪುರಂದರ–ಇಂದ್ರ), **ಮುನೀಂದ್ರ ಕುಮಾರ** = ಋಷಿ ಶ್ರೇಷ್ಠರಾದ ಶ್ರೀ ಜಮದಗ್ನಿಗಳ ಪುತ್ರ ಶ್ರೀ ಪರಶುರಾಮ, **ಕಪೀಂದ್ರಗೆ ಒಲಿದು** = ಕಪಿ ಶ್ರೇಷ್ಠನಾದ

ಶ್ರೀ ಮಾರುತಿಗೆ ಅನುಗ್ರಹಿಸಿದ ಶ್ರೀ ರಾಮಚಂದ್ರ, **ಅಮರೇಂದ್ರಗೆ ಬೋಧಿಸಿ** = ಕುರುಕ್ಷೇತ್ರ ಮಹಾ ಸಂಗ್ರಾಮದಲ್ಲಿ ಇಂದ್ರ ಪುತ್ರನಾದ ಪಾರ್ಥನಿಗೆ ಉಪದೇಶಿಸಿದ ಗೀತಾಚಾರ್ಯ ಶ್ರೀ ಕೃಷ್ಣ, **ನಿಂದ ದಿಗಂಬರ** = ಬೆತ್ತಲೆಯಾಗಿ ನಿಂತ ಬುದ್ಧ, **ಕುಂಭಿಣೀ ಸುರಸುತ** = ವಿಪ್ರದಿಂದ ಸಂಸ್ತುತ್ಯಮಾನನಾದ ಕಲ್ಕೀ (ಕುಂಭಿಣೀಸುರರು-ಭೂಸುರರಾದ ವಿಪ್ರರು).

**ಮಂದರಗಿರಿ ಎತ್ತಿ** = ಕೂರ್ಮ ರೂಪದಿಂದ ಮಂದರ ಗಿರಿಯನ್ನು ತನ್ನ ಬೆನ್ನಿನ ಮೇಲೆ ಹೊತ್ತು, **ಸಿಂಧುವಿನಿಂದಲಿ ಬಂದು** = ಕ್ಷೀರ-ಸಮುದ್ರದಿಂದ ಉದ್ಭೂತವಾದ ಧನ್ವಂತ್ರೀ, **ಅಂಧ ಮೂಢರ** = ಕಾಮಾಂಧರಾಗಿದ್ದ ಅಜ್ಞಾನಿ ದೈತ್ಯರನ್ನು, **ತನ್ನ ಅಂದ ಮೋಹದಿ ಕಟ್ಟಿ** = ಮೋಹಿನೀ ವೇಷದಿಂದ ಮೋಹ ಪರವಶರನ್ನಾಗಿಸಿ, **ದಾಂತ ಸುರರಿಗೆಲ್ಲ** = ಸಂಯಮಿಗಳಾಗಿದ್ದ ದೇವತಾಸಮೂಹಕ್ಕೆ, **ಚಂದ ಸುಧೆಯುನಿತ್ತ** = ಅಮೃತವನ್ನು ಹಂಚಿದ, **ಇಂದಿರಾ ಕಾಂತನ** = ಶ್ರೀ ರಮಾಪತಿಯ, **ಅನಂತ ಸುಗುಣಗಳ** = ಅನಂತಾನಂತ ಮಂಗಳ ಗುಣ ಸಮೂಹಗಳನ್ನು, **ಚಿಂತಿಸಿ ಯೋಗ್ಯದಿ** = ತಮ್ಮ ಯೋಗ್ಯತಾನುಸಾರ ಉಪಾಸನಾ ಮಾಡುವ ಸುಜನರನ್ನು, **ಕುಂದದಿ ಪ್ರೇಮದಿ** = ಅಚ್ಚಳಿಯದ ವಾತ್ಸಲ್ಯದಿಂದ ಪೊರೆಯುವ ನರಹರಿಯನ್ನು ಎಲೈ ಮನವೇ, ವಂದನಮಾಡು.

**ವೇದಾಂತರ್ಗತ** = ಸದಾಗಮ ಪ್ರತಿಪಾದ್ಯನಾದ, (ಸಕಲ ವೇದ-ಗಳಿಗೂ ಮುಖ್ಯ ತಾತ್ಪರ್ಯ ರೂಪನಾದ), **ಬಾದರಾಯಣ** = ಶ್ರೀ ವೇದವ್ಯಾಸ ರೂಪೀ ಶ್ರೀ ಪರಮಾತ್ಮನು, **ಹರಿ** = ಭಕ್ತರ ಸಕಲ ಪಾಪ ಪರಿಹಾರಕ ಭಗವದ್ರೂಪ, **ಪಾದಾರಾಧಕ** = ವೇದವ್ಯಾಸರ ಚರಣಾ-ವಲಂಬಿಗಳಾದ, **ಮೋದ ಸುತೀರ್ಥರ** = ಶ್ರೀ ಮದಾನಂದ ತೀರ್ಥ-ನಾಮಕರಾದ ಆಚಾರ್ಯ ಮಧ್ವರ, **ಪಾದಾವಲಂಬಕ** = ಚರಣ ಕಮಲಗಳನ್ನು ಆರಾಧಿಸುವ, **ಸಾಧು** = ಸಜ್ಜನರಾದ, **ಸುಮೋಧರ** = ಜ್ಞಾನಿಗಳ, **ಹೃದಯಾಕಾಶದಿ** = ದಹರಾಕಾಶಸ್ಥಿತ, **ಪದುಮದ ಮೂಲದಿ** = ಹೃತ್ಪದ್ಮದ ಮೂಲದಲ್ಲಿ, **ಸದಮಲಾತ್ಮನ** = ಅನಂತ ಕಲ್ಯಾಣ ಗುಣ

ಗಣ ಪರಿಪೂರ್ಣನಾದ, **ಆದಿತ್ಯನವೊಲು** = ಘೃಣೀನಾಮಕ ಸೂರ್ಯನಾದ ಬಿಂಬಮೂರ್ತಿಯನ್ನು.

**ವಿಧವಿಧ ಭಾಸದಿ** = ನಾನಾ ಪ್ರಕಾರವಾದ ಕಾಂತಿ ಪ್ರಭೆಯಿಂದ, **ಪದೆಪದೆ ನೋಡುವ** = ಬಾರಿ ಬಾರಿಗೂ ವೀಕ್ಷಿಸುತ್ತಾ (ಬಿಂಬಾಪರೋಕ್ಷ ದರ್ಶನ ಭಾಗ್ಯ), **ವಿಧಿಯ ತಾತನ** = ಬ್ರಹ್ಮದೇವರ ಜನಕನ, **ಬಹು ಮೋದ ಸುಗುಣಗಳ** = ಅನಂತ ಸಂಖ್ಯಾಕವಾದ ಆನಂದಮಯ ಮಂಗಳ ಗುಣಸ್ತೋಮಗಳನ್ನು, **ಮುದದಲಿ ಚಿಂತಿಪ** = ಆನಂದೋದ್ರೇಕ ಭಾವ-ದಿಂದ ಉಪಾಸನೆ ಮಾಡುವ, **ಕೋವಿದ** = ಜ್ಞಾನಿಗಳಾದ, **ಹಿರಿಯರ** = ದೊಡ್ಡವರ, **ಪಾದ ಸುಪಾಂಶುವ** = ಚರಣ ಧೂಳಿಯನ್ನು, **ನಿಯ ಮದಿ ಪೊಂದಿ** = ವಿಧ್ಯುಕ್ತವಾಗಿ ಶಿರಸಾ ಧರಿಸಿ, **ನೀ ಪರಮೇಶನ** = ನೀನು (ಎಲೈ ಜೀವವೇ) ಲಕ್ಷ್ಮೀವಲ್ಲಭನಾದ ಶ್ರೀ ಹರಿಯನ್ನು, **ನಿನ್ನ ಹೃದಯದಿ ಚಿಂತಿಸಿ** = ನಿನ್ನ ಮನಸ್ಸಿನಲ್ಲಿ ಸ್ಮರಿಸಿ, ವಂದಿಸು ನರಹರಿಯ.

**ನಿಜ ಸುಖ ಮಾರ್ಗದಿ** = ತನ್ನ ಯೋಗ್ಯತಾನುಸಾರ ಶ್ರೀ ಹರಿಯ ಅನುಗ್ರಹ ಪ್ರಾಪ್ತಿಗಾಗಿ ಸುಖದ ಹಾದಿಯಲ್ಲಿ, **ಭಜಕ** = ನಿನ್ನ ಭಕ್ತನಾದ, **ಬಾಲಕ** = ಪ್ರಹ್ಲಾದನು, **ಪೋಗೆ** = ಸಾಗುತ್ತಿರಲಾಗಿ, **ಆರ್ಜಿತ ದ್ವೇಷದಿ** = ಸ್ವರೂಪ ಭೂತವಾದ ಹರಿಯ ದ್ವೇಷ ಭಾವದಿಂದ, **ಮೂಜಗ ಶತ್ರು** = ಮೂರು ಲೋಕಕ್ಕೆ ಶತ್ರುವಾಗಿದ್ದ ಹಿರಣ್ಯ ಕಶಿಪುವು, **ಗಜಾ-ದಿಗಳಿಂ** = ಮದಿಸಿದ ಆನೆಗಳಿಂದ ತುಳಿಸುವುದು, **ಹೆಜ್ಜೆ ಹೆಜ್ಜೆಗೆ ಬಾಧಿಸ** = ಇತ್ಯಾದಿ ನಾನಾ ರೀತಿಗಳಲ್ಲಿ ಪದೇ ಪದೇ ಎಡಬಿಡದೆ ಬಾಧಿಸುತ್ತಿರಲಾಗಿ, **ಧೂರ್ಜಟಿಸೇವ್ಯ** = ಶ್ರೀ ರುದ್ರನಿಂದ ಸೇವ್ಯನಾದ, **ಜನಾರ್ದನ** = ದುಷ್ಟ ನನ್ನು ದಮಯ ಮಾಡುವ, **ನರಹರಿ** = ಶ್ರೀ ಲಕ್ಷ್ಮೀನರಸಿಂಹನು, **ಗರ್ಜಿಪ ವದನನು** = ಭಯಂಕರವಾಗಿ ಸಿಡಿಲಿನಂತೆ ಘರ್ಜಿಸುತ್ತಿರುವ ಸಿಂಹ ವದನನು, **ಸಜ್ಜನಪಾಲಕ** = ಸಂತರ ಸಂರಕ್ಷಕನು.

**ಅಜಸುರರೆಲ್ಲ** = ಬ್ರಹ್ಮಾದಿ ಸಕಲ ದೇವತಾವರ್ಗ, **ನಿಜ ಭಕುತಿ-ಯಲಿ** = ಶುದ್ಧ ಭಕ್ತಿ ಭಾವದಿಂದ, **ಭಜಿಸಿ** = ನಿನ್ನ ಗುಣಾವಳಿಗಳನ್ನು ಕೊಂಡಾಡಿ, **ಆರಾಧಿಪ** = ಪೂಜಿಸುವ, **ತೇಜೋಮಯ** = ಅನಂತ ಕೋಟಿ ಪ್ರಕಾಶನಾದ, **ಅತಿ ಜ್ವಲಿಸುವ** = ಅತ್ಯಂತ ಹೊಳೆಯುತ್ತಿರುವ, (ಜಾಜ್ವಲ್ಯ ಮಾನವಾದ), **ನಖದಿಂ** = ಕೈಯ್ಯಿನ ಉಗುರುಗಳ ತುದಿ-ಯಿಂದ, **ದುರ್ಜನ ರಾಜನ** = ದುಷ್ಟನಾದ ದಾನವೇಂದ್ರನ, **ಬೊಜ್ಜೆಯ** = ಹೊಟ್ಟೆಯನ್ನು, **ಛೇದಿಸಿ** = ಸೀಳಿ, **ಭಜಕಗೆ** = ಭಾಗವತೋತ್ತಮ ನಾದ ಪ್ರಹ್ಲಾದನಿಗೆ, **ವರವಿತ್ತು** = ಅಭಯಪ್ರದಾನಮಾಡಿ, **ಸೃಜ್ಯಾ-ಸೃಜ್ಯರ** = ಸೃಷ್ಟಿಗೆ ತಂದ ಮತ್ತು ಸೃಷ್ಟಿಗೆ ಇನ್ನೂ ಬಾರದಿರುವ ಜೀವರ ಸಂರಕ್ಷಕನಾದ, **ಪ್ರಾಜ್ಞನ** = ಪ್ರಾಜ್ಞನಾಮಕ ಶ್ರೀ ಹರಿಯನ್ನು ಮರೆ-ಯದೇ, ವಂದಿಸು ನರಹರಿಯ.

**ಸೃಷ್ಟ್ಯಾಧೀಶನು** = ಸೃಷ್ಟ್ಯಾದಿ ಅಷ್ಟ ಕರ್ತನಾದ ಸರ್ವರಿಗೂ ನಿಯಾಮಕನಾದ ಶ್ರೀ ಹರಿಯು, **ಅದೃಷ್ಟನಾಗಿರುತಿಹ** = ಅಗೋಚರ-ನಾಗಿದ್ದಾನೆ, **ಸೃಷ್ಟ ಅಸೃಷ್ಟ** = ಸೃಷ್ಟಿಸಲ್ಪಟ್ಟ ಮತ್ತು ಇನ್ನೂ ಸೃಷ್ಟಿಗೆ ಬಾರದಿರುವ ಜೀವ ಕೋಟಿಗಳು, **ಪ್ರವಿಷ್ಟಾ ಸೃಷ್ಟನು** = ಸೃಷ್ಟವಾದ ಚರಾಚರಾತ್ಮಕವಾದ ಜಗತ್ತಿನಲ್ಲಿ ಪ್ರವೇಶಿಸಿ, ಸರ್ವ ವ್ಯಾಪಾರ ಪ್ರವರ್ತಕ ನಾಗಿದ್ದರೂ ತಾನು ಮಾತ್ರ ಆದಿಮಧ್ಯಾಂತ ವಿದೂರನು. (ಅಸೃಷ್ಟನು-ಯಾರಿಂದಲೂ ಸೃಷ್ಟನಲ್ಲ), **ಶಿಷ್ಟರ** = ಸಜ್ಜನರ, **ಇಷ್ಟ** = ಮನೋ-ಭಿಲಾಷೆಗಳನ್ನು ಸಲ್ಲಿಸುವವನು, **ಸುದೃಷ್ಟಿಯ ಬೀರುತ** = ಭಕ್ತರ ಕಡೆಗೆ ತನ್ನ ಕೃಪಾಕಟಾಕ್ಷ ವೀಕ್ಷಣವನ್ನು ಬೀರುತ್ತಾ (ದಯಾರ್ದ್ರ ದೃಷ್ಟಿಯಿಂದ ನೋಡುತ್ತಾ), **ಶಿಷ್ಟರ** = ಭಗವದ್ಭಕ್ತರ, **ಬಹುವಿಧ ಕಷ್ಟಗಳ** = ನಾನಾ ಪ್ರಕಾರವಾದ ದುಃಖಗಳನ್ನು, **ಅಳಿದು** = ನಿವಾರಿಸಿ, **ಅಭೀಷ್ಟಗಳನು ಈವ** = ಅವರ ಸರ್ವ ಮನೋಭಿಷ್ಟಗಳನ್ನು ಸಲ್ಲಿಸುವ, **ದುಷ್ಟರ ಶಿಕ್ಷಿಪ** = ದುರ್ಜನರನ್ನು ಶಿಕ್ಷಿಸುವವನು (ಶಿಷ್ಟ ರಕ್ಷಕನು-ದುಷ್ಟ ಶಿಕ್ಷಕನು).

**ಭ್ರಷ್ಟ ಜನರಿಗೆ** = ದುರುಳ ಜನರಿಗೆ, **ಇವ ಸ್ಪಷ್ಟನಾಗುವನಲ್ಲ** = ಈತನು ಗೋಚರನಾಗುವನಲ್ಲ, **ಶ್ರೇಷ್ಠೋತ್ತಮನು** = ಸರ್ವೋತ್ತಮನಾದ (ಉತ್ತಮೋತ್ತಮನಾದ)ಶ್ರೀ ಪರಮಾತ್ಮ, **ಪರಮೇಷ್ಠಿ ಜನಕನು ಇವ** = ಬ್ರಹ್ಮದೇವರ ತಂದೆಯಾದವನು, **ಕಾಷ್ಠಾಗ್ನಿಯ ಪೋಲ್** = ಕಾಷ್ಠಂಗತ ಬೆಂಕಿಯಂತೆ, (ಅರಣಿಯಲ್ಲಿರುವ ಅಗ್ನಿಯಂತೆ), **ಅದೃಷ್ಟ ದೃಷ್ಟನು** = **ಗೋಚರನೂ** ಹೌದು—ಅಗೋಚರನೂ ಹೌದು. (ಅರಣಿಯಲ್ಲಿ ಉಜ್ಜಿ-ದಾಗ ಅಗ್ನಿ ಗೋಚರವಾದಂತೆ-ಇಲ್ಲದಿದ್ದರೆ ಅಗೋಚರ), **ದುಷ್ಟ ದೂರ** = ಸಮಸ್ತ ದೋಷ ವಿವರ್ಜಿತನು, **ವಾಸಿಷ್ಠ ಶ್ರೀ ಕೃಷ್ಣನು** = ಬಾದ-ರಾಯಣ ದೇವರು (ಕೃಷ್ಣ ದ್ವೈಪಾಯನರು), **ತಿಷ್ಠನು ನಿನ್ನೊಳು** = ನಿನ್ನ ಹೃತ್ಕಮಲದಲ್ಲಿ ಬಿಂಬಮೂರ್ತಿಯಾಗಿರುವ ಶ್ರೀ ಹರಿಯು, **ಉತ್ಕೃಷ್ಟ-ನೆಂದು ಅರಿತು** = ಸರ್ವಶ್ರೇಷ್ಠನೆಂದು (ಸರ್ವಕರ್ತನು) ತಿಳಿದು, ವಂದಿಸು ನರಹರಿಯ.

**ಸರಿಪರರಿಲ್ಲದ** = ಸಮರೂ, ಅಧಿಕರೂ ಇಲ್ಲದ (ಸಮಾಭ್ಯಧಿಕ-ಶೂನ್ಯನು), **ಸಿರಿಯುರಸನ** = ಶ್ರೀ ಲಕ್ಷ್ಮೀವಲ್ಲಭನ, **ಚಾರು** = ಮನೋ-ಹರವಾದ (ಅಪ್ರಾಕೃತ ಹಾಗೂ ಜಗದ್ವಿಲಕ್ಷಣವಾದ), **ಚರಣಾರಾಧನ** = ಪಾದ ಸೇವೆಯು, **ಪರಮ ಸುಖವ ಈವುದು** = ಪರಮ ಪದವಾದ ನಿತ್ಯಾನಂದ ರೂಪವಾದ ಮುಕ್ತಿ ಸುಖವನ್ನು ಕೊಡುವುದು, **ಸಿರಿದೊರೆ** = ಲಕ್ಷ್ಮೀಪತಿಯು, **ಸುಹೃದನು** = ಸಮೀಚೀನವಾದ ಮನಸ್ಸುಳ್ಳವನು, **ಸಿರಿಸಹ ಮೆರೆಯುತ** = ಲಕ್ಷ್ಮೀ ಸಹಿತನಾಗಿ ವೈಭವಮೂರ್ತಿ, **ಅರಿತ ಸುಜನರನು** = ಮಹಾತ್ಮ ಜ್ಞಾನದಿಂದ ತಿಳಿದ ಸಜ್ಜನರನ್ನು, **ಪೊರೆವನು ದಯದಿ** = ಕರುಣದಿಂದ ಸಂರಕ್ಷಿಸುವನು, **ಮೊರೆಯನು ಲಾಲಿಸಿ** = ಉತ್ತರಾದೇವಿಯ ಪ್ರಾರ್ಥನೆಯನ್ನು ಕೇಳಿ, **ಗರ್ಭವ ಪೊರೆದನು** = ಉತ್ತರೆಯ ಗರ್ಭಸ್ಥನಾಗಿದ್ದ ಪರೀಕ್ಷಿತನನ್ನು ಬ್ರಹ್ಮಾಸ್ತ್ರದಿಂದ ಸಂರಕ್ಷಿಸಿದ ಶ್ರೀ ಕೃಷ್ಣ, **ಮರೆತು ನಾರಾ ಎಂದ** = ತನ್ನ ಅಂತ್ಯ ಕಾಲದಲ್ಲಿ ಮಗನನ್ನು ಕುರಿತು 'ನಾರಾಯಣ'—ಎಂದು ಕರೆಯಲು, **ನರಸುರಗೆ ಒಲಿದನು** = ಭೂಸುರನಾದ ಅಜಾಮಿಳಗೆ ಅನುಗ್ರಹಿಸಿದನು.

**ನರಾಧಮನು ಎನ್ನನು ದಯದಿ ಪೊರೆದನು** = ಕೀರ್ತನ ಕರ್ತೃಗಳ ಅನುಭವವಿದು. ಭ್ರಷ್ಟನಾದ ನನ್ನನ್ನು ದಯದಿಂದ ಸಂರಕ್ಷಿಸಿದನು–ಎಂದಿದ್ದಾರೆ, **ಕರಿವರ** = ಗಜೇಂದ್ರನನ್ನು ಸಂರಕ್ಷಿಸಿದವನು, **ದ್ರೌಪದಿ ವರದ** = ದ್ರೌಪದಿಯ ಮಾನ ಸಂರಕ್ಷಣೆಯನ್ನು ಮಾಡಿದ ಮಾ ರಮಣ ಶ್ರೀಕೃಷ್ಣ, **ವಿಖ್ಯಾತನು** = ಜಗತ್ತಿನಲ್ಲಿ ಬಹು ಕೀರ್ತಿವಂತನು, **ಸರಸಿಜ ಭವತಾತ** = ಬ್ರಹ್ಮ ಜನಕನು (ಸರಸಿಜ-ನೀರಿನಲ್ಲಿ ಉತ್ಪತ್ತಿಯಾದ ಕಮಲ. ಸರಸಿಜಭವ-ಕಮಲೋದ್ಭವರಾದ ಬ್ರಹ್ಮದೇವರು. ತಾತ–ಅವರ ತಂದೆ), **ಪ್ರಸನ್ನ ಶ್ರೀನಿವಾಸ ಪೊರೆವನು** = ಅನುಗ್ರಹ ಮೂರ್ತಿಯಾದ ಶ್ರೀನಿವಾಸನು (ದಾಸವರ್ಯರ ಅಂಕಿತನಾಮ) ತನ್ನನ್ನು ಸದಾ ಸ್ಮರಿಸುವವರನ್ನು ಸಂರಕ್ಷಿಸುವ ಸರಸಿಜನಾಭನು, **ಸಿರಿ ಭೂ ದೊರೆಯೆಂದು** = ಶ್ರೀ ಭೂ ರಮಣನೆಂದು ವಂದಿಸು ನರಹರಿಯ.



## ೩೯

## ಶ್ರೀ ನರಸಿಂಹ ಮಂತ್ರ

### (ಅಂಕಿತ-ಪ್ರಸನ್ನ ಶ್ರೀನಿವಾಸ)

**ರಾಗ–ಶಂಕರಾಭರಣ** **ಮಿಶ್ರಛಾಪುತಾಳ**

ಜಯ ಜಯ ಜಯ ನರಸಿಂಹ ॥ ॥ಪ॥

ಜಯ ಜಯ ಮಹಾಲಕ್ಷ್ಮೀರಮಣ
ಜಯ ನಿರಾಮಯ ಸರ್ವೋತ್ಕೃಷ್ಟ ॥ಅಹಾ॥
ಜಯ ಕಮಲಜ ಮೃಡಾದ್ಯಮರ ವಂದ್ಯನೆ–ನಮೋ
ಭಯ ಬಂಧ ಹರ ಭಕ್ತ ಜನರ ರಕ್ಷಕ ಸ್ವಾಮಿ ॥ ॥೧॥

ಆರದೂರ ಗುಣ ಪರಿಪೂರ್ಣ
ಉಗ್ರವೀರನೆ ಮಹಾವಿಷ್ಣು
ಉರುಕಾಂತಿ ಸರ್ವತೋಮುಖನೇ ॥ಅಹಾ॥

ನರಸಿಂಹ ಭಯಂಕರಾಶ್ರಿತ ಜನರ ರಕ್ಷಕ
ಶರಣಾದೆ ನಿನಗೆ ನಾ ಮೃತ್ಯುಮಾರಕ-ನಮೋ ॥ ॥೧॥

ಸೃಷ್ಟ ಪಾತಾ ಅತ್ತ ತ್ರಾತಾ
ದುಷ್ಟ ದೈತ್ಯರಿಗತಿ ಕ್ರೂರಾ
ಶ್ರೇಷ್ಠ ಅಸಮಬಲ ರೂಪಾ ॥ಅಹಾ॥

ಇಷ್ಟ ಭಕ್ತನ ಕಾಯೆ ಕಂಬದಿಂದಲಿ ಬಂದು-
ತ್ಕೃಷ್ಟ ಪ್ರಜ್ವಲಿಪ ನಖದಿ ಸೀಳ್ದ ಭ್ರಷ್ಟನ ॥ ॥೨॥

ವಿಶ್ವಸ್ಥ ಬಹಿದಂತರ್ವ್ಯಾಪ್ತ
ವಿಶ್ವ ವಿಷ್ಣು ವಷಟ್ಕಾರ
ಸರ್ವಜ್ಞ ನಿರ್ದೋಷ ಸುಗುಣೀ ॥ಅಹಾ॥

ರವಿಕೋಟಿ ಅಮಿತ ಸಕಾಂತಿಯಿಂ ಜ್ವಲಿಸುವೆ
ವಿಶ್ವತೋಮುಖ ಸರ್ವಸಾಕ್ಷಿ ಸ್ವತಂತ್ರ ॥ ॥೩॥

ನರನಲ್ಲ ನರರೂಪಧಾರಿ
ನೀ ಮೃಗವಲ್ಲವು ಸಿಂಹವದ್ರೂಪ
ನರಮೃಗಗಳಲಿ ನೀ ಸಮನೂ ॥ಅಹ॥

ಧರೆ ದಿವಿ ಪಾತಾಳ ಜಯ ಸರ್ವಾಂತಸ್ಥ
ಉರು ಜ್ಞಾನ ಬಲರೂಪ ಅನಂತ ನೀ ಏಕ ॥ ॥೪॥

ನ-ಎಂದರೆ ಸರ್ವವಂದ್ಯ
ರ-ಎಂದರೆ ಸುಖಜ್ಞಾನ
ಸಿಂ-ಎಂದರೆ ಗುಣಸಾದ ॥ಅಹಾ॥

ಎಂದರೆ ಆಕಾರಾದಿಯಾಗಿ ಹ ಕಾರ ಪರ್ಯಂತ ಸರ್ವ ವರ್ಣ ವಾಚ್ಯನೆಂದರ್ಥ ಕೊನೆಯ ಅಕ್ಷರ "ಕ್ಷ" (೫೧ನೆಯ ವರ್ಣ) ಕ್ಷ-ಕಾರವಾಚ್ಯನು **ನರಸಿಂಹ-ರೂಪವು.**

**ಕಮಲಜ**=ಶ್ರೀ ಪರಮಾತ್ಮನ ನಾಭೀ ಕಮಲ ಸಂಜಾತನಾದ ಬ್ರಹ್ಮ ದೇವರು, **ಮೃಡ**=ಲಯಕಾರಕರಾದ ಶ್ರೀ ರುದ್ರದೇವರು, **ಆದಿ ಅಮರ ವಂದ್ಯನೆ**=ಬ್ರಹ್ಮ ರುದ್ರಾದಿ ಸಕಲ ದೇವತಾ ವರ್ಗದಿಂದ ಸಮಸ್ಕೃತನೇ (ಪೂಜಿತನೇ), **ಭಯ ಬಂಧ ಹರ**=ಜೀವರಿಗೆ ಅತ್ಯಂತ ಭೀಕರವಾದ ಕರ್ಮ ಬಂಧನವೆಂಬ ಸಂಸಾರದಿಂದ ದಾಟಿಸುವವನು. (ಅನಾದಿ ಕರ್ಮ ವಿಮೋಚಕನು), **ಭಕ್ತ ಜನರ ರಕ್ಷಕ**=ನಿನ್ನನ್ನೇ ನಂಬಿದ ಭಗವದ್ಭಕ್ತ ರನ್ನು ಸದಾ ಸಂರಕ್ಷಿಸುವವನು.

**ಅರದೂರ**=ಸಮಸ್ತ ದೋಷ ವಿದೂರನು. (ಅರ-ದೋಷಗಳು), **ಗುಣಪರಿಪೂರ್ಣ**=ಅತ ಏವ ಸಕಲ ಕಲ್ಯಾಣ ಗುಣಗಣ ಪರಿಪೂರ್ಣ ವಸ್ತು, **ಉಗ್ರ ವೀರನೆ**=ಭಯಂಕರ ರೂಪದ ಅಸಮ ಪರಾಕ್ರಮಿ (ಉಗ್ರಂ-ವೀರಂ-ಎಂತಲೇ ನಾರಸಿಂಹ ಮಂತ್ರವಿದೆ).

**ಮಹಾವಿಷ್ಣು**=ಸರ್ವ ಗುಣಪರಿಪೂರ್ಣನೂ ಸರ್ವತ್ರ ವ್ಯಾಪ್ತನೂ ಆದ ವಿಷ್ಣು ಶಬ್ದ ವಾಚ್ಯನು. (ವೃಷಲ್-ವ್ಯಾಪ್ತೌ-ಎಂಬ ಧಾತುವಿನಿಂದ ವಿಷ್ಣು ಶಬ್ದದ ಪರಿಷ್ಕಾರ), **ಉರುಕಾಂತಿ**=ಅಸಾಧಾರಣವಾದ ಪ್ರಕಾಶ ಸ್ವರೂಪನು, **ಸರ್ವತೋಮುಖನೇ**=ಸಹಸ್ರ ಶೀರ್ಷಾ-ಎಂಬ ಪುರುಷ ಸೂಕ್ತ ವಚನದಂತೆ ವಿರಾಡ್ರೂಪಿಯು, **ಭಯಂಕರ**—ದೈತ್ಯರ ಪಾಲಿಗೆ ಅತಿ ಭಯಂಕರ ಸ್ವರೂಪನು, **ಆಶ್ರಿತ ಜನರ ರಕ್ಷಕ**—ಶರಣಾಗತರಾದ ಭಕ್ತರಿಗೆ ಆಶ್ರಯದಾತನು ಹಾಗೂ ಸಂರಕ್ಷಕನು (ಶರಣಾಗತ ವಜ್ರ ಪಂಜ-ರನು), **ಮೃತ್ಯುಮಾರಕ**—ಅಪಮೃತ್ಯುವಿಗೆ ಮೃತ್ಯು ಸ್ವರೂಪನು ಶ್ರೀ ನರಸಿಂಹ **ರೂಪವು.**

**ಸೃಷ್ಟಾ**—ಸೃಷ್ಟಿ ಕರ್ತ, **ಪಾತಾ**—ಪಾಲಕನು, **ಅತ್ತ ತ್ರಾತಾ**—ಲಯಕಾರಕನು, **ದುಷ್ಟ ದೈತ್ಯರಿಗೆ ಅತಿ ಕ್ರೂರ**—ದುರುಳರಾದ ದಾನವರ ಪಾಲಿಗೆ ಅತ್ಯಂತ ಕ್ರೂರ ಸ್ವರೂಪನು. (ದೈತ್ಯರ ಹೃದಯ ವಿದ್ರಾವಕ), **ಶ್ರೇಷ್ಠ**—ಅತ್ಯುತ್ತಮನು, **ಅಸಮಬಲ ರೂಪ**—ಅಸದೃಶವಾದ ಬಲ ರೂಪ ಸಂಪತ್ತುಳ್ಳವನು, **ಇಷ್ಟ ಭಕ್ತನ ಕಾಯೆ**—ಭಾಗವತೋತ್ತಮನಾದ ನಿಜ ಭಕ್ತ ಪ್ರಹ್ಲಾದ ಬಾಲಕನನ್ನು ಸಂರಕ್ಷಿಸಲು, **ಕಂಬದಿಂದಲಿ ಬಂದು**—ಸಭಾ ಮಧ್ಯದಲ್ಲಿದ್ದ ಕಂಭವನ್ನು ಸೀಳಿಕೊಂಡು ಪ್ರತ್ಯಕ್ಷನಾಗಿ, **ಉತ್ಕೃಷ್ಟ**—ಅತ್ಯಂತ ಶ್ರೇಷ್ಠವಾದ, **ಪ್ರಜ್ವಲಿಪ**—ಕಾಂತಿಯಿಂದ ಥಳಥಳಿಸುತ್ತಿರುವ, **ನಖದಿ**—ಕೈಯ್ಯನ ಉಗುರಿನ ತುದಿಯಿಂದ, **ಸೀಳಂ ಭ್ರಷ್ಟನ**—ಭಗವದ್ವೇಷಿಯಾದ ದುರುಳ ಹಿರಣ್ಯ ಕಶಿಪುವಿನ ಹೊಟ್ಟೆಯನ್ನು ಸೀಳಿ ಸಂಹರಿಸಿದನು.

**ವಿಶ್ವಸ್ಥ**—ಸಮಗ್ರ ವಿಶ್ವ ವ್ಯಾಪಕನಾದ, **ಬಹಿರಂತರ್ವ್ಯಾಪ್ತ**—ಜಗತ್ತಿನ ಒಳಗೂ ಮತ್ತು ಹೊರಗೂ ಏಕಾಂಶವಾಗಿ ವ್ಯಾಪ್ತನಾಗಿರುವವನು, **ವಿಶ್ವ**—ಜಾಗ್ರತಾವಸ್ಥೆಗೆ ಪ್ರೇರಕರೂಪ ಸಮಸ್ತ ಜಗತ್ಕಾರ್ಯ ಕಾರಣ ಭಗವದ್ರೂಪ, **ವಿಷ್ಣು**—ಪರಿ ಪೂರ್ಣನಾದ ಸರ್ವತ್ರ ವ್ಯಾಪ್ತರೂಪ. **ವಷಟ್ಕಾರ**—ಯಜ್ಞಾದಿ ಕ್ರಿಯೆಗಳಿಗೆ ಮೂಲ ಕಾರಣನು. ಷಡ್ಗುಣೈಕ ಸಂಪನ್ನನು, **ಸರ್ವಜ್ಞ**=ಸಮಸ್ತವನ್ನೂ ಸಾಕಲ್ಯೇನ ತಿಳಿದವನು, **ನಿರ್ದೋಷ**=ಸಮಸ್ತ ದೋಷ ವಿದೂರನು, **ಸುಗುಣಿ**=ಅನಂತ ಕಲ್ಯಾಣ ಗುಣಗಣಧಾಮನು, **ರವಿಕೋಟಿ**....ಕೋಟಿ ಸೂರ್ಯರುಗಳ, **ಅಮಿತ ಸಕಾಂತಿಯಿಂ**=ಅನುಪಮನಾದ ಪ್ರಕಾಶದಿಂದ ಬೆಳಗುತ್ತಿರುವ **(ಜ್ವಲಿಸುವ)**, **ವಿಶ್ವತೋಮುಖ**=ವಿಶ್ವ ವ್ಯಾಪಕನೇ, **ಸರ್ವಸಾಕ್ಷಿ**=ಜೀವರ ಸರ್ವ ಕರ್ಮಗಳಿಗೆ ಪ್ರೇರಕ ಹಾಗೂ ಸಾಕ್ಷೀರೂಪನು, **ಸ್ವತಂತ್ರ**=ಪರಾಧೀನವಿಲ್ಲದ ಸರ್ವತಂತ್ರ ಸ್ವತಂತ್ರನು.

**ನರನಲ್ಲ**=ಮಾನವನಲ್ಲ, **ನರ ರೂಪಧಾರಿ**=ಆದರೂ ಮಾನವನಂತೆ ದೇಹ, **ನೀ ಮೃಗವಲ್ಲ**=ಆದರೆ ನೀನು ಮೃಗವೂ ಅಲ್ಲ, **ಸಿಂಹವ**

**ದ್ರೂಪ**....ಸಿಂಹದಂತೆ ಮುಖಮಾತ್ರ. ಶ್ರೀ ಹರಿಯು ಸರ್ವಜೀವರಲ್ಲಿ ತತ್ತದಾರಾಕನಾಗಿ ಅಂತರ್ಯಾಮಿ ಯಾಗಿದ್ದಾನೆ-ಎಂಬುದೇ ಪ್ರಮೇಯಾರ್ಥವು, **ನರ ಮೃಗಗಳಲಿ ನೀ ಸಮನು**....ಮಾನವರಲ್ಲಿ ಮಾನವಾಕಾರನಾಗಿಯೂ ಮೃಗಗಳಲ್ಲಿ ತತ್ತದ್ರೂಪಿಯಾಗಿಯೂ ಅವರವರ ಸ್ಥೂಲ ದೇಹಗಳಲ್ಲಿ ವ್ಯಾಪ್ತನಾಗಿರುವ ಸ್ಥೂಲದೇಹಗಳ ಆಕಾರಗಳು ಬೇರೆ ಬೇರೆ. ಆದರೆ ದೇಹಾಂತರ್ಗತ ಭಗವದ್ರೂಪ ಒಂದೇ, **ಧರೆ**....ಭೂಮಿ, **ದಿವಿ**....ಸ್ವರ್ಗ, **ಪಾತಾಳ**....ಅಧೋ ಲೋಕಗಳು. ಅಂದರೆ ಜಗತ್ತಿನ ಲೋಕ ತ್ರಯಗಳಲ್ಲಿರುವ, **ಜಯು**....ಸರ್ವ ಪ್ರಾಣಿಗಳಲ್ಲಿ, **ಸರ್ವಾಂತಸ್ಥ**....ಅಂತರ್ಯಾಮಿ ರೂಪದಿಂದ ವಿರಾಜಮಾನನಾಗಿದ್ದಾನೆ, **ಉರು**....ಅತ್ಯಂತ ಶ್ರೇಷ್ಠವಾದ, **ಜ್ಞಾನಬಲ ರೂಪ**....ಜ್ಞಾನ, ಪರಾಕ್ರಮ, ರೂಪ ವಿಶಿಷ್ಟನು, **ಅನಂತ**....ಅನಂತಾನಂತ ರೂಪಗಳಿಂದ ಜೀವರಲ್ಲಿದ್ದರೂ, **ನೀ ಏಕ**....ನೀನು ಮಾತ್ರ ಒಬ್ಬನೇ ಒಬ್ಬನು (ಏಕಮೇವ ಅದ್ವಿತೀಯನು).

**ನ**....ನಂ ನಮ್ಯಾಯ ನಮಃ ಎಂದು ಮಾತೃಕಾನ್ಯಾಸದ ವರ್ಣಾತ್ಮಕ ಅರ್ಥ. ಅಂದರೆ ಸರ್ವರಿಂದಲೂ ವಂದ್ಯನು ಎಂದು ತಾತ್ಪರ್ಯ, **ರ**....ರಂ-ರಾಮಾಯ ನಮಃ ಅಂದರೆ ಅತ್ಯಂತ ಮನೋಹರ ರೂಪಾತ್ಮಕನು. ಸರ್ವರಲ್ಲೂ ಕ್ರೀಡೆಯಾಡುವ ಸರ್ವವ್ಯಾಪಾರ ಕರ್ತನು. ಅಂದರೆ ಜ್ಞಾನಾನಂದಮಯನು, **ಸಿಂ**....ಸಂ-ಸಾರಾತ್ಮನಾಯ ನಮಃ-ಶುಭ ಗುಣಗಳ ಸಾರರೂಪನೆಂದರ್ಥ, **ಇಂದಿರಾಪತಿ**....ಶ್ರೀ ಲಕ್ಷ್ಮೀರಮಣನು, **ಮಹದೈಶ್ವರ್ಯ ರೂಪನು**....ಜ್ಞಾನಾನಂದಾದಿ ಅನಂತ ಐಶ್ವರ್ಯ ಸಂಪನ್ನನು, **ಹ**....ಹಂ-ಹನಾಯ ನಮಃ ಅಂದರೆ ಅತ್ಯಂತ ಶುದ್ಧ ವಸ್ತು ಪರಿಪೂರ್ಣ ರೂಪನು. ಸಕಲ ಮಂಗಳ ಗುಣಗಣಾರ್ಣವನು. ಸಕಲ ದೋಷ ವಿದೂರನು.

**ಭೂತಾದಿ ದುಷ್ಟ ಗ್ರಹಗಳ**....ಭೂತ ಪ್ರೇತ ಪಿಶಾಚಾದಿ ದುಷ್ಟ ಶಕ್ತಿಗಳು. ಕ್ಷುದ್ರ ಗ್ರಹಗಳ ಪೀಡೆ, **ಖದ್ರೂಜಾದಿ**....ಕಶ್ಯಪ ಮುನಿಯ

೧೭ ಪತ್ನಿಯರ ಪೈಕಿ ಖದ್ರು ಒಬ್ಬಳು ಅವಳಲ್ಲಿ ಜನಿಸಿದ ಸಂತಾನವೇ ಸರ್ಪಗಳು. ಸರ್ಪಗಳಿಗೆ "ಖದ್ರೂಜ" ಎಂದು ಹೆಸರು. ಇದರಿಂದ ಸರ್ಪಗಳ ಭಯ, **ಸರ್ಪ ವಿಷವ**....ಸಕಲ ವಿಧವಾದ ಅಪಮೃತ್ಯುಕಾರಕಗಳನ್ನು, **ನೀ ದಯದಿ ಪರಿಹರಿಪೆ**....ನೀನು (ನರಸಿಂಹ ರೂಪ) ಕರುಣೆಯಿಂದ ನಿವಾರಿಸುತ್ತೀಯೆ ಶ್ರೀ ನರಸಿಂಹ ರೂಪವು ಸಕಲ ದುರಿತ ಪರಿಹಾರ ರೂಪವು, ಸಕಲ ಭಯ ನಿವಾರಕ ರೂಪವು, **ಭಕ್ತ ಜನರಿಗೆ**....ನಿನ್ನ ಭಕ್ತ ವೃಂದಕ್ಕೆ, **ನೀ ಶುಭವಿತ್ತು**....ನೀನು ಮಂಗಳವನ್ನುಂಟು ಮಾಡಿ, **ಅಕಾಲ ಮೃತ್ಯುವ**....ಅಕಾಲಿಕ ಹಾಗೂ ಅಪಮೃತ್ಯುವನ್ನು, **ತರಿವ**....ನಿವಾರಿಸುವ, **ರಕ್ಷಕ**....ಭಕ್ತ ಜನ ಸಂರಕ್ಷಕನೇ ನಿನಗೆ ನಮಸ್ಕಾರವು.

**ದ್ವಾತ್ರಿಂಶ**....೩೨, **ಚತುರ್ವಿಂಶಾಕ್ಷರದ**....೨೪ ವರ್ಣಗಳುಳ್ಳ, **ಮಂತ್ರ**....ಮಂತ್ರಸ್ಥವಾದ, **ವ್ರತತಿಜಾಸನ**....ಬ್ರಹ್ಮದೇವರು (ವ್ರತತಿ–ಬಳ್ಳಿ ವ್ರತತಿಜ–ಬಳ್ಳಿಯಲ್ಲಿ ಬಿಟ್ಟ ಪುಷ್ಪ ಇಲ್ಲಿ ಕಮಲಪುಷ್ಪ. ವ್ರತತಿ-ಜಾಸನ-ಕಮಲ ಪೀಠನಾದ ಬ್ರಹ್ಮ), **ಮಂತ್ರ ಋಷಿಯು**....ವೇದಗಳ ಮಂತ್ರ ದ್ರಷ್ಟಾರನು (ಪ್ರಧಾನವಾಗಿ-ಉಳಿದ ಋಷಿಗಳು ಅವಾಂತರ ದ್ರಷ್ಟಾರರು), **ಅಧಿಕಾರಿಗಳು**....ಶ್ರವಣ ಪಠಣಕ್ಕೆ ಅಧಿಕಾರಿಗಳಾದ ವಕ್ತೃ ಶ್ರೋತೃ ವರ್ಗ, **ಭೀತಿ ಮೋಹವ ಬಿಡಿಸಿ**....ಅವರ ಭವ ಭಯ-ವನ್ನು ಮತ್ತು ಅಜ್ಞಾನಾದಿ ದೋಷಗಳನ್ನು ಪರಿಹರಿಸಿ, (ಸಂಸಾರ ಬಂಧನಕ್ಕೆ ಮೋಹ ಮಮತೆಗಳೇ-ಕಾರಣ, ಅಹಂ ಕರ್ತೃತ್ವಾಭಿಮಾನ), **ನಿಖಿಳ ಇಷ್ಟವ ಈವೆ**....ನಿನ್ನ ಭಕ್ತರಿಗೆ ಅವರ ಸಕಲವಾದ ಅಭೀಷ್ಟಗಳನ್ನು ಸಲ್ಲಿ-ಸುವೆ.

**ಜಯ ಜಯ**....ನಿನ್ನ ಅನುಗ್ರಹದಿಂದ ನಮಗೆ ಜಯವಾಗಲಿ. ಶುಭವಾಗಲಿ, **ಸರ್ವಜ್ಞ**....ಸಮಸ್ತ ವಿಷಯಗಳನ್ನೂ ಸಾಕಲ್ಯೇನ (ಸ್ವರೂಪತಃ) ಬಲ್ಲವನು, **ಭೂಮನ್**....ಪೂರ್ಣನು, **ಮಹಾತೇಜ ಬಲವೀರ್ಯ**....ಅಸದೃಶವಾದ (ಇನ್ನಾರಲ್ಲೂ ಇಲ್ಲದಿರುವ ಜಗದ್ವಿಲಕ್ಷಣವಾದ) ತೇಜಸ್ಸು

ಪರಾಕ್ರಮಿ-ಶಕ್ತಿವಂತನೇ, **ಪುರುಷೋತ್ತಮ**....ಕ್ಷರಾಕ್ಷರ ಪುರುಷರಿಗಿಂತ ಉತ್ತಮೋತ್ತಮನು, **ವೇಧಾದಿ ಸುರರಿಂದ**....ಬ್ರಹ್ಮಾದಿ ದೇವತಾವರ್ಗದವರಿಂದ, **ಇಜ್ಯ**....ಇಷ್ಟ ದೇವತಾ, **ಪೂಜ್ಯನು**....ಪೂಜಿತನಾದವನು, **ಮುದದಿ**....ಸಂತೋಷದಿಂದುಂಟಾದ, **ದೃಢ ಭಕ್ತಿಯಿಂ**....ಸ್ನೇಹ ರೂಪವಾದ ನಿಶ್ಚಂಚಲವಾದ ಪ್ರೇಮ ಪ್ರವಾಹ ರೂಪದ ಭಕ್ತಿ ಭಾವದಿಂದ.

**ನಾರ**....ನಿರ್ದೋಷನು (ನ+ಅರ....ದೋಷರಹಿತ), **ಉರು ಗುಣ ಸಿಂಧೊ**....ಅತ್ಯಂತ ಶ್ರೇಷ್ಠವಾದ ಶುಭ ಗುಣ ಸಾಗರನು, **ಸುಪ್ರೀತನಾಗೋ**....ಹೇ ನರಸಿಂಹನೇ ನನ್ನಲ್ಲಿ ಅನುಗ್ರಹ ಮಾಡು, **ಚಿರಜ್ಞಾನ**....ಶಾಶ್ವತವಾದ (ನಾಶವಾಗದ) ಸಮೀಚಿನ ಜ್ಞಾನವನ್ನೂ (ಭಗವತ್ಸಂಬಂಧವಾದ ಜ್ಞಾನ), **ಭಕ್ತಿಯು ಸತತ**....ನಿರಂತರ ದೃಢ ಭಕ್ತಿಯನ್ನು (ನಿನ್ನ ಪಾದಾರವಿಂದಗಳಲ್ಲಿ), **ಪರಸಮರಿಲ್ಲದ**....ಅಧಿಕರೂ, ಸಮರೂ ಯಾರು ನಿನಗಿಲ್ಲ (ಸಮಾಭ್ಯಧಿಕ ಶೂನ್ಯನು), **ಬಲಿ**....ಅಸಮ ಪರಾಕ್ರಮ ಶಾಲಿ (ಅಪ್ರತಿಯಲ್ಲಿ), **ತೀವ್ರ ಪ್ರೇರಿಸು**....ನಿನ್ನಲ್ಲಿ ಧ್ಯಾನರೂಪವಾದ ಉಪಾಸನಾ ಭಾಗ್ಯವನ್ನು ಅತ್ಯಂತ ಶೀಘ್ರವಾಗಿ ನನಗೆ ದಯಪಾಲಿಸು, **ಅನಂತ**....ಅಂತ್ಯ ರಹಿತನು, **ಅನುತ್ತಮ** = ನಿನಗಿಂತ ಉತ್ತಮರೂ ಯಾರು ಇಲ್ಲದವನು.

**ಪ್ರೋದ್ಯ ಅರ್ಕನಿಭ ದೀಪ್ತ** = ಆಗ ತಾನೇ ಉದಯಿಸುತ್ತಿರುವ ಕೋಟಿ ಸೂರ್ಯ ಪ್ರಕಾಶವುಳ್ಳವನು, **ವರ್ತುಲ** = ಗುಂಡಾದ, **ಉರು ನೇತ್ರತ್ರಯವು** = ವಿಶಾಲವಾದ ಮೂರು ಕಣ್ಣುಗಳುಳ್ಳವ, ಶ್ರೀ ಲಕ್ಷ್ಮೀ ನರಸಿಂಹನಿಗೆ ತ್ರಿನೇತ್ರಗಳು-ಬಲಗಣ್ಣು-ಎಡಗಣ್ಣು-ಫಾಲನೇತ್ರ ಇದರಿಂದಲೇ ಪ್ರತಿಬಿಂಬ ಭೂತನಾದ ಮಹರುದ್ರ ದೇವರಿಗೂ ತ್ರಿನೇತ್ರಗಳು, **ಹಸ್ತದ್ವಯವು** = ಎರಡು ಬಾಹುಗಳು, (ಚತುರ್ಭುಜಗಳಿಗೆ ಒಂದರಲ್ಲಿ ಶಂಖ ಇನ್ನೊಂದರಲ್ಲಿ ಚಕ್ರ, ಉಳಿದ ಎರಡು ಕೈಗಳ ನಖಾಗ್ರದಿಂದ ಹಿರಣ್ಯಕಶಿಪುವಿನ ಉದರವನ್ನು ಸೀಳಿದ್ದಾನೆ), **ಜಾನುವರೆಗೂ** = ಹಸ್ತ ದ್ವಯಗಳು ಮೊಳಕಾಲಿನವರೆಗೆ.

**ಸುದರ್ಶಿನಿ** = ಬಲಗೈಯ್ಯಲ್ಲಿ ಸುದರ್ಶನವೆಂಬ ಚಕ್ರವನ್ನು ಧರಿಸಿದ್ದಾನೆ, **ಶಂಖಿ** = ಎಡದ ಕೈಯ್ಯಲ್ಲಿ ಪಾಂಚಜನ್ಯವೆಂಬ ಶಂಖಧರನು, **ಮಹಾಲಕ್ಷ್ಮೀಯುತ** = ತನ್ನ ವಾಮ ತೊಡೆಯ ಮೇಲೆ ಶ್ರೀ ಲಕ್ಷ್ಮೀದೇವಿಯನ್ನು ಕುಳ್ಳಿರಿಸಿಕೊಂಡಿದ್ದಾನೆ, **ಕೋಟಿ ಆದಿತ್ಯ ಅಧಿಕ ತೇಜ** = ಕೋಟಿ ಸೂರ್ಯ ಪ್ರಕಾಶಕ್ಕಿಂತಲೂ ಅತ್ಯಧಿಕವಾದ ಪ್ರಕಾಶವುಳ್ಳವನು, **ಉತ್ಕೃಷ್ಟ** = ಉತ್ತಮೋತ್ತಮನು (ಸರ್ವೋತ್ತಮ), **ಶಕ್ತ** = ಅಸದೃಶ ಬಲ ಪರಾಕ್ರಮಿ (ಸರ್ವಶಕ್ತ).

**ಮೀನ** = ಮತ್ಸ್ಯಾವತಾರೀ, **ಕಮಠ** = ಕೂರ್ಮರೂಪೀ, **ಕ್ರೋಡ** = ವರಹಾವತಾರೀ, **ನೃಹರಿ** = ನರಸಿಂಹ ರೂಪನು, **ಮಾಣವ** = ಬಾಲಕ-ವಟುವಾದ ಶ್ರೀ ವಾಮನ, **ಪರಶ್ವಿ** = ಪರಶುಧರನಾದ (ಗಂಡುಗೊಡಲಿ ಶ್ರೀ ಭಾರ್ಗವರಾಮ, **ಸುಧನ್ವಿ** = ಕೋದಂಡ ದೀಕ್ಷಾಚಾರ್ಯ ಶ್ರೀ ರಾಮಚಂದ್ರ, **ಕೃಷ್ಣ** = ಯಾದವ ಕುಲ ತಿಲಕನಾದ ಶ್ರೀ ಕೃಷ್ಣ, **ಬುದ್ಧ** = ಬೌದ್ಧಾವತಾರೀ ಶ್ರೀ ಹರಿ, **ಕಲ್ಕಿ** = ಕಲ್ಕಿ ರೂಪನು, **ಶರಣ** ಶರಣಾಗತ ಭಕ್ತರ ಸಂರಕ್ಷಕನು, **ವನರುಹ ತಾತ** = ಬ್ರಹ್ಮ ಜನಕನು. (ವನರುಹ-ನೀರನ್ನು ಭೇದಿಸಿಕೊಂಡು ಮೇಲೆ ಬರುವ ಕಮಲಪುಷ್ಪ ಅಂದರೆ. ಸಾಂಕೇತಿಕವಾಗಿ ಕಮಲೋದ್ಭವನಾದ ಶ್ರೀ ಬ್ರಹ್ಮದೇವರು. ತಾತ-ಜನಕನು), **ಅನಿಷ್ಟಹ** = ಸಕಲ ಅನಿಷ್ಠ ರೂಪವಾದ ದುರಿತಗಳನ್ನು ನಿವಾರಿಸುವ, **ಇಷ್ಟದ** = ಭಕ್ತರ ಇಷ್ಟ ಪ್ರದನಾದ (ಅನಿಷ್ಟ ನಿವೃತ್ತಿ-ತದ್ವಾರಾ ಇಷ್ಟ ಪ್ರಾಪ್ತಿ), **ಎನಗೆ ದಯವಾಗೋ** = ನನ್ನನ್ನು ಅನುಗ್ರಹಿಸಿ, ಸಂರಕ್ಷಿಸೆಂದು ದಾಸರು ಶ್ರೀ ಲಕ್ಷ್ಮೀನರಸಿಂಹ ದೇವರನ್ನು ಪ್ರಸಕ್ತ ಕೀರ್ತನಾ ದ್ವಾರಾ ಪ್ರಾರ್ಥಿಸಿರುತ್ತಾರೆ.



## ೪೦

### (ಅಂಕಿತ-ಪ್ರಸನ್ನ ಶ್ರೀನಿವಾಸ)

**ರಾಗ–ಕೇದಾರಗಳ** **ಆದಿತಾಳ**

ನರಸಿಂಹ ಪಾಹಿ–ಶ್ರೀ ಶ ಪೊರೆವಾದಾರಿಲ್ಲ ಬೇರೆ
ಕರವೆತ್ತಿ ಮುಗಿವೆ ನಿನಗೆ ಸುರಮುನಿ ಸುಖತೀರ್ಥ ಸೇವ್ಯ ॥ ॥ಪ॥

ನಿಷಿದ್ಧ ಕರ್ಮಗಳಗೈದು ಅನಿರುದ್ಧ ನಾ ನಿನ್ನ ಮರೆತೆ
ಶುದ್ಧ ವೈಷ್ಣವ ತನವನೀಯೊ ಪ್ರಸಿದ್ಧ ಅದ್ಭುತಶಕ್ತ ವಿಭುವೆ॥ ॥೧॥

ಸಾಧ್ಯ ಸಾಧನವನ್ನು ಬಿಟ್ಟು ಪ್ರದ್ಯುಮ್ನ ನಾ ನಿನ್ನ ಮರೆತೆ
ವಿದ್ಯಾದೀಶನೆ ಸ್ವಾಮಿ ಸಲಹೋ ವೇದ ವೇದ್ಯಾನಂತ ಮಹಿಮ ॥ ॥೨॥

ಸಂಚಿಂತೆ ಸಂಸ್ಮರಣೆ ತೊರೆದು ಸಂಕರ್ಷಣ ನಿನ್ನ ಮರೆತೆ
ಸಂಸಾರ ತಾಪಗಳ ತೊರೆಸೊ ಶಂಕರ ಸುರಶಂಭು ಸೇವ್ಯ ॥ ॥೩॥

ವಸನ ಮನೆ ಹಣ ಹೆಣ್ಣು ಹುಡುಕಿ ವಾಸುದೇವನೆ ನಿನ್ನ ಮರೆತೆ ।
ಪಶು ಶಿಶುವಾದೆನ್ನ ಪೊರೆಯೊ ಶ್ರೀಶ ಮುಕ್ತೇಶ ಸರ್ವೇಶ ॥ ॥೪॥

ಅನಿಮಿತ್ತ ಬಂಧು ಮೂಲೇಶ ಅನ್ಯರ ನಾನರಿಯೆ ನಾರಾಯಣ
ವನರುಹಾಸನ ತಾತ ಪ್ರಸನ್ನ ಶ್ರೀನಿವಾಸ ಕೃಷ್ಣ ವ್ಯಾಸ ॥ ॥೫॥



**ಅರ್ಥವಿವರಣೆ :**

ಪ್ರಸನ್ನ ಶ್ರೀನಿವಾಸಾಂಕಿತ ದಾಸವರ್ಯರ ಇನ್ನೊಂದು ಕೀರ್ತನ ಸಾಹಿತ್ಯ-ಶ್ರೀ ನರಸಿಂಹನನ್ನು ಕುರಿತಾದ ಇದು.

**ಪಾಹಿ** = ರಕ್ಷಿಸು, **ಶ್ರೀಶ** = ರಮಾಪತಿ ಹಾಗೂ ನಿಯಾಮಕನು, **ಸುರಮುನಿ ಸುಖತೀರ್ಥ ಸೇವ್ಯ** = ದೇವತಾ ಮುನಿಗಳಾದ ಆನಂದತೀರ್ಥರಿಂದ ಸಂಸೇವ್ಯನು. (ಮಧ್ವ ಮಾನಸ ಮಂದಿರನು).

**ನಿಷಿದ್ಧ ಕರ್ಮಗಳ** = ವೇದಾದಿ ಶಾಸ್ತ್ರಗಳಲ್ಲಿ ಹೇಳಿರುವ ಮಾಡ-ಲಾರದ ಕರ್ಮಗಳನ್ನು, **ಅನಿರುದ್ಧ** = ಶಾಂತೀ ಪತಿಯಾದ ಸೂಕ್ಷ್ಮ-ಸೃಷ್ಟಿಗೆ ಕಾರಣನಾದ ಅನಿರುದ್ಧ ನಾಮಕನು, **ಶುದ್ಧ ವೈಷ್ಣವ ತನವ ಈಯೊ** = ಪರಿಶುದ್ಧವಾದ (ಯಾವ ದೋಷವೂ ಇಲ್ಲದ) ವೈಷ್ಣವ ದೀಕ್ಷಾ-ವನ್ನು ನೀಡಿ, (ಹರಿ ಸರ್ವೋತ್ತಮತ್ವ-ವಾಯು ಜೀವೋತ್ತಮತ್ವ-ಪಂಚ ಬೇಧ ತಾರತಮ್ಯ ಯುಕ್ತವಾದ ಜ್ಞಾನ), **ಪ್ರಸಿದ್ಧ** = ಸುವಿಖ್ಯಾತನಾದ, **ಅದ್ಭುತ ಶಕ್ತ** = ಅಚಿಂತ್ಯಾದ್ಭುತ ಶಕ್ತನು, **ವಿಭುವೆ** = ಜಗತ್ಪತಿಯು.

**ಸಾಧ್ಯ ಸಾಧನವನ್ನು ಬಿಟ್ಟು** = ದೇಶ ಕಾಲೋಚಿತವಾದ ಸಾಧನ ಮಾರ್ಗವನ್ನು ಬಿಟ್ಟು, **ಪ್ರದ್ಯುಮ್ನ** = ಪ್ರಕೃಷ್ಟವಾದ ಕಾಂತಿಯುಳ್ಳ ಪ್ರದ್ಯುಮ್ನ ನಾಮಕನು. (ಸ್ಥಿತಿ-ಸೃಷ್ಟಿ ಕಾರಣರೂಪ), **ವಿದ್ಯುದೀಶನೆ** = ಚಿತ್ರಾಕೃತಿಯಾದ ಶ್ರೀ ಲಕ್ಷ್ಮೀದೇವಿಯ ರಮಣನು. (ಶ್ರೀ ಭಾರತೀ-ದೇವಿಯ ವಿದ್ಯುನ್ನಾಮಕಳು), **ವೇದ ವೇದ್ಯ ಅನಂತಮಹಿಮ** = ಸಕಲ ಸದಾಗಮ ಪ್ರತಿಪಾದ್ಯನು. ಅನಂತ ಮಹಿಮಾ ಸಂಪನ್ನನು.

**ಸಂಚಿಂತೆ** = ಸಮೀಚೀನವಾದ ಭಗವಧ್ಯಾನ, **ಸಂಸ್ಮರಣೆ** = ನಿತ್ಯದಲ್ಲೂ ಭಗವಂತನ ಉಪಾಸನೆ ಮತ್ತು ನಾಮಸ್ಮರಣೆ, **ಸಂಕರ್ಷಣ** = ಲಯ ಕಾರಕರೂಪ (ನರಸಿಂಹರೂಪ), **ಸಂಸಾರ ತಾಪಗಳ** = ಭವ ಜನಿತ ದುಃಖಗಳನ್ನು, **ತೊರೆಸೊ** = ಬಿಡಿಸೋ (ನಿವಾರಿಸು), **ಶಂಕರ** = ಮಂಗಳಪ್ರದನೇ (ಶಂ–ಶುಭ, ಕರ-ಕರ್ತನು-ಇಲ್ಲಿ ರುದ್ರದೇವರೆಂದು ಪರಿ-ಗಣಿಸಬಾರದು), **ಸುರ ಶಂಭು ಸೇವ್ಯ** = ದೇವತೆಗಳೂ ಮತ್ತು ಶ್ರೀ ರುದ್ರದೇವರಿಂದಲೂ ಸಂಸೇವ್ಯ ಮಾನನಾದ.

**ವಸನ** = ಉತ್ತಮ ಉಡಿಗೆಗಳು, **ಮನೆ** = ಗೃಹ (ಭೂಮಿ), **ಹಣ** ಸಂಪತ್ತು, **ಹೆಣ್ಣು** = ನಾರೀ-ವನಿತಾವಿತ್ತ ಭೂ ಇವುಗಳಲ್ಲಿ ಮೋಹವನ್ನಿಟ್ಟು (ಹೆಣ್ಣು–ಹೊನ್ನು-ಮಣ್ಣು), **ವಾಸುದೇವನೆ** = ಮೋಕ್ಷಪ್ರದನಾದ ಭಗವದ್ರೂಪ, **ಪಶು** = ಪಶು ಸಮಾನನಾದ, **ಶಿಶು** = ಅಜ್ಞಾನಿಯಾದ ಎನ್ನನ್ನು, **ಪೊರೆಯೊ** = ಸಂರಕ್ಷಿಸು, **ಮುಕ್ತೇಶ** = ಮುಕ್ತಜೀವರಿಗೆ ನಿಯಾಮಕನು, **ಸರ್ವೇಶ** = ಸಕಲಕ್ಕೂ ಅಧಿಪತಿ-ಕರ್ತ ಮತ್ತು ನಿಯಾಮಕನು.

**ಅನಿಮಿತ್ತ ಬಂಧು** = ಜೀವರನ್ನು ಎಂದೆಂದಿಗೂ ಅಗಲದ **ಬಿಂಬ**-ಮೂರ್ತಿ, **ಮುಖೇಶ** = ಹೃತ್ಪದ್ಮಕ ಕರ್ಣಿಕಾ ಮೂಲದಲ್ಲಿ **ಬಿಂಬನು**, **ಅನ್ಯರ ಕಾಣೆನರಿಯೆ** = ನಿನ್ನೊರತು ಸಂರಕ್ಷಕರನ್ನು ಬೇರೆಲ್ಲಿಯೂ ನಾ ಕಾಣೆ, **ನಾರಾಯಣ** = ಸರ್ವಗುಣ ಪರಿಪೂರ್ಣ, ಸರ್ವದೋಷ ವಿವರ್ಜಿತ, ಸರ್ವತ್ರ (ಅಂತರ್ಬಹಿಶ್ಚ) ವ್ಯಾಪ್ತನಾದ **ಶ್ರೀ ಹರಿ**, **ವನರುಹಾಸನ** = ಕಮಲಪೀಠನಾದ ಬ್ರಹ್ಮದೇವರ, **ತಾತ** = ಜನಕನು, **ಕೃಷ್ಣ ವ್ಯಾಸ** = ವಾಸಿಷ್ಠ ಕೃಷ್ಣ ರೂಪೀ **ಶ್ರೀ** ವೇದವ್ಯಾಸರು (ಅಥವಾ ಕೃಷ್ಣ ಮತ್ತು ವೇದವ್ಯಾಸ-ಯಾದವ ಕೃಷ್ಣ-ವಾಸಿಷ್ಠ ಕೃಷ್ಣ-ಎಂತಲೂ ಅರ್ಥೈಯಿಸಬಹುದು).



## ೪೧

## ಶ್ರೀ ಚಿಂತಲವಾಡಿ ನರಸಿಂಹ ದೇವರ ಪದವಾದದ್ದು

## (ಅಂಕಿತ–ಪ್ರಸನ್ನ ಶ್ರೀನಿವಾಸ)

**ರಾಗ–ಸುರಟಿ** **ಆದಿತಾಳ**

**ಚಿಂತಾಮಣಿಗಮಿತ ಚಿಂತಾಮಣಿ**
**ಚಿಂತಲವಾಡಿ ಶ್ರೀ ನೃಸಿಹ್ಮ ಸ್ವಾಮಿ ॥** ॥ಪ॥

ಕಂತುಪಿತ ಕೊಟ್ಟಿರುವ ಸಾಮರ್ಥ್ಯದಿಂದಲೇ
ಚಿಂತಾಮಣಿಯು ಐಹಿಕ ವಸ್ತುವೀವುದು
ಅನಂತ ಶ್ರೀಪತಿ ಚಿಂತಲವಾಡಿ ಕರುಣಿ ಸ್ವ-
ತಂತ್ರನು ಇಹಪರದಿ ಐಶ್ವರ್ಯವೀವ ॥ ॥೧॥

ಕಾಕುಮನ ವಾಕ್ಕಾಯ ಶುದ್ಧ ಮಾಡುವ ದೇವಿ
ಶ್ರೀ ಕಾವೇರಿ ತೀರದಲಿ ಕುಳಿತು ಸರ್ವ
ಭಕುತರಿಗೆ ವರವೀವ ಶ್ರೀಕಾಂತ ನರಸಿಂಹ
ಸುಖಜ್ಞಾನಮಯ ದೋಷದೂರ ಗುಣನಿಧಿಯು ॥ ॥೨॥

ಮಮಕಾರ ಅಹಂಕಾರ ಡಂಭತನವನು ಬಿಟ್ಟು
ಮಮಸ್ವಾಮಿ ಸರ್ವರಿಗೂ ಪರಮೈಕ ಸ್ವಾಮಿಯು
ಸುಮನಸಾರ್ಚಿತ ಕುಸುಮ ಸಂಭವನ ತಾತನು
ರಮಾಪತಿ ಪ್ರಸನ್ನ ಶ್ರೀನಿವಾಸ ನಮೋ ಎನ್ನಿ ॥ ॥೩॥



**ಅರ್ಥವಿವರಣೆ :**

ಕಾವೇರೀ ತೀರದಲ್ಲಿ ಚಿಂತಲವಾಡಿ ಗ್ರಾಮದ ಚಿಂತಾಮಣಿ ಶ್ರೀ ನರಸಿಂಹನನ್ನು ಪ್ರಸಕ್ತ ಕೀರ್ತನ ಸಾಹಿತ್ಯದಲ್ಲಿ ದಾಸವರ್ಯರು ಸ್ತುತಿಸಿರುತ್ತಾರೆ.

**ಚಿಂತಾಮಣಿಗೆ** = ಚಿಂತಾಮಣಿಯಲ್ಲಿರುವ, **ಅಮಿತ ಚಿಂತಾಮಣಿ** = ಅನುಪಮನಾದ ಚಿಂತಾಮಣಿ ನರಸಿಂಹ ದೇವರು.

**ಕಂತುಪಿತ** = ಮನ್ಮಥ ಜನಕನಾದ (ಕಂತು-ಮನ್ಮಥ), **ಕೊಟ್ಟಿರುವ ಸಾಮರ್ಥ್ಯದಿಂದಲೇ** = ಕೊಟ್ಟಿರುವ ವರಪ್ರಸಾದದಿಂದಲೇ, **ಚಿಂತಾಮಣಿಯು** = ಸ್ವರ್ಗಲೋಕದಲ್ಲಿರುವ ಚಿಂತಾಮಣಿ–ಎಂಬ ಅನರ್ಘ್ಯ ರತ್ನವು, **ಐಹಿಕ ವಸ್ತುವೀವುದು** = ಪ್ರಾಪಂಚಿಕ ವಸ್ತುಗಳನ್ನು (ಐಹಿಕ ಮನೋಭೀಷ್ಟಗಳನ್ನು) ಕೊಡುವ ಸಾಮರ್ಥ್ಯ ಹೊಂದಿದೆ, **ಅನಂತ** = ಅಪಾರ ಮಹಿಮನಾದ, **ಶ್ರೀಪತಿ** = ರಮಾವಲ್ಲಭನಾದ, **ಚಿಂತಲವಾಡಿ ಕರುಣಿ** = ಚಿಂತಲವಾಡಿಯಲ್ಲಿರುವ ಪರಮ ದಯಾಳುವಾದ, **ಸ್ವತಂತ್ರನು** = ಪರಾಪೇಕ್ಷ ರಹಿತನಾದ. ಶ್ರೀ ನರಸಿಂಹ ಸ್ವಾಮಿಯು, **ಇಹಪರದಿ** = ಐಹಿಕದಲ್ಲಿಯೂ ಮತ್ತು ಪಾರತ್ರಿಕವಾಗಿಯೂ, **ಐಶ್ವರ್ಯವೀವ** = ಸಕಲ ಸೌಭಾಗ್ಯಗಳನ್ನೂ ಕೊಡುವವನು (ಚಿಂತಾಮಣಿಯು ಇಹ ಸೌಖ್ಯವನ್ನು ಮಾತ್ರ ಕೊಡಬಲ್ಲುದು. ಆದರೆ ಶ್ರೀ ಹರಿಯು ಪರರಲ್ಲಿಯೂ ಸದಾ ನಿತ್ಯಾನಂದ ರೂಪವಾದ ಮುಕ್ತಿ ಸುಖಪ್ರದನು).

**ಕಾಠುಮನ** = ದುಷ್ಟ ವಾಸನೆಗಳಿಂದ ಕೂಡಿದ ಮನಸ್ಸು, **ವಾಕ್ಕು ಕಾಯ** = ಮಾತು ಮತ್ತು ಶರೀರ (ತ್ರಿಕರಣಗಳ ದ್ವಾರಾ, ಮಾನಸಿಕ-ವಾಚನಿಕ–ದೈಹಿಕ), **ಶುದ್ಧ ಮಾಡುವ** = ದುರ್ಗುಣಗಳನ್ನು ನಿವಾರಿಸಿ, ಪವಿತ್ರೀಕರಿಸುವ, **ದೇವಿ ಶ್ರೀ ಕಾವೇರಿ ತೀರದಲಿ** = ಕಾವೇರೀ ನದಿಯ

ಶಿರಸ್ತ್ರ, **ಸುಖಜ್ಞಾನಮಯ** = ಜ್ಞಾನಾನಂದ ಸ್ವರೂಪನಾದ, **ದೋಷ ದೂರ** = ಸಮಸ್ತ ದೋಷ ವಿದೂರನಾದ, **ಗುಣನಿಧಿಯು** = ಅನಂತ ಕಲ್ಯಾಣ ಗುಣಗಣ ಪರಿಪೂರ್ಣನಾದ ಶ್ರೀ ಹರಿಯು.

**ಮಮಕಾರ** = ನನ್ನದು ಎಂಬ ಭಾವನೆ, **ಅಹಂಕಾರ** = ನಾನೇ ಸರ್ವಕರ್ತನೆಂಬ ಭಾವನೆ, **ಡಂಭತನವನು** = ಸೋಗನ್ನು (ತೋರಿಕೆ), **ಮಮಸ್ವಾಮಿ** = ನನ್ನ ಪ್ರಭುವಾದ ಶ್ರೀ ಹರಿಯೇ, **ಪರಮ ಏಕ-ಸ್ವಾಮಿಯು** = ಸರ್ವರಿಗೂ ಶ್ರೇಷ್ಠನಾದ ಏಕಮೇವ ಅದ್ವಿತೀಯನಾದ ಪ್ರಭುವಾಗಿದ್ದಾನೆ, **ಸುಮನಸಾರ್ಚಿತ** = ದೇವತೆಗಳಿಂದ ಪೂಜಿತನಾದ, **ಕುಸುಮ ಸಂಭವನ ತಾತನು** = ಬ್ರಹ್ಮನ ಜನಕನು.



೪೨

(ಶ್ರೀಕರವಿಠ್ಠಲಾಂಕಿತ)

**ರಾಗ–ಮಧ್ಯಮಾವತಿ** **ಆದಿತಾಳ**

ನಾರಸಿಂಹನೆ ಬೇಗ ಬಾರೋ-ಮನ್ಮನದಲಿ
ತೋರೋ ನಿನ್ನಯ ಚರಣ-ಕಾರ್ಪರ ಸದನ ॥ ॥ಪ॥

ಪಾರಮಹಿಮ ಭಯ ನಿವಾರಣ ಘನದಯ
ವಾರಿಧಿ ತವವಾರಿಜಕ್ಕೆರಗುವೆ ॥ ॥ಅ॥

ಖುಲ್ಲ ನಿನ್ನಯ ಹರಿ–ಎಲ್ಲಿ ತೋರೆನಲು
ಬಲ್ಲಿದ ನೀನೇ ದಯದಿ

ಅಲ್ಲೆ ಸ್ತಂಭದಿ ಬಂದು ಪ್ರಹ್ಲಾದಗ ಭಯವಿತ್ತ
ಪುಲ್ಲಾಕರ ಪಿತ–ಮಲ್ಲ ಮರ್ಧನ ಬಾರೋ ॥ ॥೧॥

ವಾಸವಾನುಜ-ಗಗನೇಶಾಜನಕಸುತ
ಶ್ರೀ ಶಾನೇ ಕರಪಿಡಿದು
ಲೇಸಾಗಿ ತವಪದ ನಾ ತುತಿಸಲು–ದಿವ್ಯ
ಮೊಸಲ ಮನವನಿತ್ತು-ನೀ ಸಲಹುವುದಯ್ಯ ॥ ॥೨॥

ಅಂದು ಪೊರೆದೆ ದ್ರುಪದ ನಂದಾನೆಯರು ಕರೆಯೆ
ಸಿಂಧೂರವರ ದಯದಿ
ತಂದೆ ಶ್ರೀಕರವಿಠ್ಠಲ ಇಂದೂ-ನಗಮೂಲಗಾರ
ದಿಂದಾಲಿ ಬಂದು ಬಂಧ ಭಯ ಬಿಡಿಸಯ್ಯ ॥ ॥೩॥

**ಅರ್ಥವಿವರಣೆ :**

ಮಾನವೀಗೆ ಸಮೀಪವಾಗಿರುವ, **ಕಲ್ಲೂರಿನಲ್ಲಿ** ಮಹಾಲಕ್ಷ್ಮೀ–ದೇವಿಯು ಶ್ರೀ ಲಕ್ಷ್ಮೀಕಾಂತಾಚಾರ್ಯರಿಗೆ ಸ್ವಪ್ನ ಲಬ್ಧಳಾಗಿ ಸಾಣೆಕಲ್ಲಿ-ನಲ್ಲಿ ಒಡಮೂಡಿದ್ದಾಳೆ. ಇದರಿಂದ ಕಲ್ಲೂರು ಕ್ಷೇತ್ರವು ಕರ್ನಾಟಕದ ಕೊಲ್ಲಾಪುರವೆನಿಸಿದೆ. ಆ ದೇವಿಯ ಅರ್ಚಕರ ಮನೆತನದವರು **ಶ್ರೀ-ಜಗನ್ನಾಥಾಚಾರ್ಯರು** ಶಾಲಾ ಶಿಕ್ಷಕರಾಗಿದ್ದ ಈ ಮಹನೀಯರು **ಶ್ರೀಕರವಿಠ್ಠಲ** ಎಂಬ ನಾಮಾಂಕಿತದಲ್ಲಿ ಅನೇಕ ದೇವರ ನಾಮುಗಳನ್ನು ರಚಿಸಿರುತ್ತಾರೆ.

ಪ್ರಸಕ್ತ ಕೀರ್ತನ ಸಾಹಿತ್ಯವು ರಾಯಚೂರು ಜಿಲ್ಲಾ ದೇವದುರ್ಗ ತಾಲ್ಲೂಕಿನ ಕೊಪ್ಪರ ಗ್ರಾಮದಲ್ಲಿರುವ ಕ್ಷೇತ್ರಸ್ಥ ಕೊಪ್ಪರದ ನರಸಿಂಹ ದೇವರನ್ನು ಕುರಿತು ಬರೆದಿದ್ದು. ಕೊಪ್ಪರ ಕ್ಷೇತ್ರವು ಕೃಷ್ಣಾ ನದಿಯ ತೀರ ದಲ್ಲಿರುವ ಪುಣ್ಯ ಕ್ಷೇತ್ರ.

**ಕಾರ್ಪರ ಸದನ**=ಕೊಪ್ಪರ ಕ್ಷೇತ್ರದಲ್ಲಿರುವ (ಹಿಂದೆ ಕಾರ್ಪರ ಎಂಬ ಮುನಿ ಪುಂಗವರು ತಪಸ್ಸು ಮಾಡಿದ ಸ್ಥಳವಾದ್ದರಿಂದ, "ಕಾರ್ಪರ" ಎಂಬ ಹೆಸರು ಕೊಪ್ಪರಕ್ಕೆ ಬಂದಿತು), **ಘನದಯವಾರಿಧಿ** =ಕರುಣಾಸಾಂದ್ರನು ಕೃಪಾ ಸಮುದ್ರನು.

**ಖುಲ್ಲ** = ದುಷ್ಟನಾದ ಹಿರಣ್ಯ ಕಶಿಪು, **ನಿನ್ನಯ**=ಪ್ರಹ್ಲಾದ ಬಾಲಕನು ಹರಿ ಸರ್ವತ್ರ ವ್ಯಾಪ್ತನೆಂದು ಹೇಳುತ್ತಿದ್ದುದನ್ನು ಕೇಳಿ, ಕ್ರೋದ ಸಂತಪ್ತನಾಗಿ, ನಿನ್ನ ಹರಿಯನ್ನು ತೋರು-ಎಂದು ಕಂಭವನ್ನು ಜಡಿಯಲು, **ಪುಲ್ಲಾಕರಪಿತ** = ಮನ್ಮಥನ ತಂದೆಯಾದ ಶ್ರೀ ಹರಿ (ಪುಲ್ಲ-ಹೂವು ಆಕರ=ಬಾಣವನ್ನಾಗಿ ಉಳ್ಳವನು. ಪುಷ್ಪ ಬಾಣನು-ಮನ್ಮಥನು.
**ವಾಸವಾನುಜ** = ಉಪೇಂದ್ರ ನಾಮಕ ಶ್ರೀ ಪರಮಾತ್ಮ, **ಗಗನೇಶಾಜನಕಸುತ** = ಭೂತಾಕಾಶಕ್ಕೆ ಅಭಿಮಾನಿಯಾದ ಗಣಪತಿಯ ತಂದೆ ಶ್ರೀ ರುದ್ರದೇವರಿಂದ ಸಂಸ್ತುತ್ಯಮಾನನಾದ ಶ್ರೀ ನಾರಸಿಂಹನು, **ಮೀಸಲ ಮನವಿತ್ತು**=ನಿನ್ನಲ್ಲಿಯೇ ಇದ್ದ ಮನಸ್ಸುಳ್ಳವನಾಗಿ.

**ದ್ರುಪದನಂದನ**=ದ್ರುಪದ ರಾಜನ ಪುತ್ರಿ ದ್ರೌಪದೀ ದೇವಿಯು ಕರೆಯಲು ಅವಳಿಗೆ ವಸ್ತ್ರ ಪುಂಜಗಳನ್ನು ಕರುಣಿಸಿ ಶ್ರೀ ಕೃಷ್ಣ.

**ಸಿಂಧೂರವರ** = ಗಜರಾಜ ರಕ್ಷಕನಾದ ಶ್ರೀಮನ್ನಾರಾಯಣ, (ಸಿಂಧೂರ-ಆನೆ), **ನಗಮೂಲಾಗಾರ**=ಪರ್ವತದಲ್ಲಿ ಉತ್ಪತ್ತಿಯಾಗುವ ನದಿಯ ತೀರದಲ್ಲಿ ನೆಲೆಸಿರುವ (ನಗ-ಚಲಿಸಿರುವ ಪರ್ವತ. ಮೂಲ = ನದಿಯ ಮೂಲ ಪರ್ವತವು. ಆಗಾರ-ಮನೆ-ನಿವಾಸ ಅಂದರೆ ಕೃಷ್ಣಾ ನದಿಯ ತೀರಸ್ಥ ಕಾರ್ಪರ ನರಸಿಂಹ ದೇವರು-ಎಂತ ತಾತ್ಪರ್ಯ).



## ೪೩

## (ಶ್ರೀಕರವಿಠ್ಠಲಾಂಕಿತ)

ಇಂದು ಕರಪಿಡಿ **ಕಾರ್ಪರ ನಿಲಯಾ**–ಪಾದ
ದ್ವಂದ್ವ ನಂಬಿದೆನಯ್ಯಾ ॥ ॥ಪ॥

ನಿನ್ನಯ ದಯದಿಂ ತರಳ ಭಯ ಕಳೆದಾ
ನಿನ್ನ ಪ್ರಾರ್ಥಿಸಿ ರಾಜ್ಯ ಧೃವ ಪಡೆದಾ
ನಿನ್ನ ದೂಷಿಸಿ ಚೈದ್ಯ ತಾನಳಿದಾ
ನಿನ್ನ ದ್ವೇಷಿಸಿ ಮಾಗಧನು ಮಡಿದಾ ॥ ॥೧॥

ಏಸು ಜನುಮದ ಸುಕೃತವೊ ನಿನ್ನಾ
ವಾಸವಾನುಜ ಇತ್ತಿ ದರುಶನಾ
ದೋಷದೂರನೆ ಖಗವರಗಮನಾ
ಆಶಿಪೂರ್ತಿಸು ವಾಸುಕೀಶಯನಾ ॥ ॥೨॥

ನಗಮೂಲುಂದಿದ **ಶ್ರೀಕರವಿಠ್ಠಲ**
ನಗವೈರಿಸುತನ ಸೂತ ಅನುಗಾಲಾ
ಬಗೆ ಬಗೆಯ ರೂಪ ನೀನಾಗಿ ಬೆಂಬಲಾ
ಮುಗಿವೆ ಕರದ್ವಯ ಪಾಹಿ ಗೋಪಾಲಾ ॥ ॥೩॥



**ಅರ್ಥವಿವರಣೆ ៖**

ಈ ಕೀರ್ತನ ಸಾಹಿತ್ಯವೂ ಸಹ ಶ್ರೀಕರವಿಠ್ಠಲಾಂಕಿತ ದಾಸವರ್ಯರಿಂದ ರಚಿತವಾದದ್ದು ಕಾರ್ಪರ ನರಹರಿಯ ಸ್ತೋತ್ರ ರೂಪವಾದ ಇನ್ನೊಂದು ಕೀರ್ತನ ಸಾಹಿತ್ಯವಿದು.

**ತರಳ**—ಬಾಲ ಪ್ರಹ್ಲಾದನು ಅವನ ಮೊರೆಯನ್ನು ಕೇಳಿ, ಪ್ರಹ್ಲಾದ ವರದನಾದ ಪರಾತ್ಪರನಾದ ಶ್ರೀ ಲಕ್ಷ್ಮೀನರಸಿಂಹ. **ಧೃವ**= ತರಳ ಧೃವನು ಅರಣ್ಯದಲ್ಲಿ ಘೋರವಾದ ತಪಸ್ಸನ್ನು ಆಚರಿಸಿ ಶ್ರೀಮನ್ನಾ-ರಾಯಣನನ್ನು ಪ್ರತ್ಯಕ್ಷೀಕರಿಸಿಕೊಂಡು ಧನ್ಯನಾಗಿ ರಾಜ್ಯವನ್ನಾಳಿದ, **ಚೈದ್ಯ** = ಚೇದೀ ದೇಶಾಧಿಪತಿಯಾದ ಶಿಶುಪಾಲನು ಶ್ರೀ ಕೃಷ್ಣನನ್ನು ತುಂಬಿದ ಸಭೆಯಲ್ಲಿ ಮನಸ್ವೀ ದೂಷಣೆ ಮಾಡಿ, ಶ್ರೀ ಹರಿಯ ಚಕ್ರದಿಂದ ಸಂಹೃತನಾದ, **(ತಾನಳಿದಾ), ಮಾಗಧನು** = ಮಗಧ ದೇಶಾಧಿಪತಿ ಯಾಗಿದ್ದ ದುರುಳ ಜರಾಸಂಧನು ನಿನ್ನ ಪ್ರೇರಣೆಯಂತೆ ಭೀಮಸೇನ ದೇವರಿಂದ ವಿದಾರಿತವಾಗಿ ಸಂಹೃತನಾದ ಈ ನುಡಿಯಲ್ಲಿ ಉದ್ಭವರಾಗಿ ಇಬ್ಬರು ಭಗವದ್ಭಕ್ತರು (ಪ್ರಹ್ಲಾದ ಮತ್ತು ಧ್ರುವ), ಮತ್ತು ಹರಿನಿಂದಾ ಮತ್ತು ದ್ವೇಷಸಾಧಿಸಿದ ಇಬ್ಬರು ದೈತ್ಯರನ್ನು (ಶಿಶುಪಾಲ ಮತ್ತು ಜರಾ ಸಂಧ) ಉದಾಹರಿಸಿದ್ದಾರೆ.

**ವಾಸವಾನುಜ**= ಇಂದ್ರನ ತಮ್ಮನಾದ ಉಪೇಂದ್ರ ನಾಮಕ ಪರಮಾತ್ಮ (ಶ್ರೀ ವಾಮನ ರೂಪೀ ಶ್ರೀ ಹರಿ), **ಖಗವರಗಮನಾ** = ಪಕ್ಷಿ ಶ್ರೇಷ್ಠರಾದ ಶ್ರೀ ಗರುಡದೇವರನ್ನೇ ವಾಹನವನ್ನಾಗಿ ಉಳ್ಳ ಶ್ರೀ ಹರಿ (ಖಗ-ಆಕಾಶದಲ್ಲಿ ಸಂಚರಿಸುವ ಪಕ್ಷಿವರ್ಗ. ಖಗವರ-ಪಕ್ಷಿ ಶ್ರೇಷ್ಠನಾದ ಗರುಡ), **ವಾಸುಕೀಶಯನಾ** = ಶೇಷಶಾಯಿಯಾದ ಶ್ರೀ ಪರಮಾತ್ಮ. ಈ ನುಡಿಯಲ್ಲಿ (೧)ಇಂದ್ರ ಪದವಿಯನ್ನು ಉಪೇಂದ್ರ ನಾಮಕನಾಗಿ ಆಳಿದ ಪ್ರಸಂಗ. (೨) ಗರುಡವಾಹನವು ಮತ್ತು (೩) ಶೇಷಶಯನವು-ಈ ವೈಭವಗಳನ್ನು ಸ್ತೋತ್ರ ಮಾಡಿರುತ್ತಾರೆ, **ನಗಮೂಲದಿಂದಿದ** = ಪರ್ವ-ತದ ಮೂಲದಿಂದ ಉದ್ಭವಿಸಿ ಹರಿಯುವ ಶ್ರೀ ಕೃಷ್ಣಾನದಿ ಅದರ ತೀರಸ್ಥ ಕಾರ್ಪರ ನಾರಸಿಂಹನ ಸ್ತೋತ್ರವಿದು.



## ೪೪

## (ಅಂಕಿತ–ಕಾರ್ಪರ ಶ್ರೀನಾರಸಿಂಹ)

**ರಾಗ–ಖರಹರಪ್ರಿಯ** **ಆದಿತಾಳ**

ವೀರನ ನೋಡಿರೈ-ನರಮೃಗಾಕಾರನ ಪಾಡಿರೈ ॥ ॥ಪ॥

ಕಾರ್ಪರ ಋಷಿ ತಪಕೊಲಿದು ಅಶ್ವತ್ಥದಿ ಮೆರೆವಾ–
ಭಕುತರ ಪೊರೆವಾ ॥ ॥ಅ॥

ಚಾರುಚರಣ ಯುಗಳಾರಾಧಿಸುವರ ದುರಿತ-ತಿಮಿರಕೆ ಸವಿತ
ವಾರಿಜಭವ ತ್ರಿಪುರಾರಿ ಮುಖಸುರ ವ್ರಾತ–ಸೇವಿತ ಸ್ವರಿತ
ನಾರಾಯಣ ಮುನಿ ಪೂಜಿತ ಪದ ಮದ್ಬಂಧು–ಪೊರೆಯೋ ನೀನೆಂದು
ಪ್ರಾರ್ಥಿಸುವರಿಗಭೀಷ್ಟೆಯಗರಿಯಲು ದೇವ-ತರುಸ್ವಭಾವ ॥ ॥೧॥

ಉಗ್ರನಾದರು ಭಕುತಾ ಗ್ರಣಿಗಳಿಗೆ ಅನುಗ್ರ–ಒಲಿವನು ಶೀಘ್ರ
ವಾಗ್ದೇವಿಯರ ಸನಾಜ್ಞದಿ ನಮಿಸಿ ಪ್ರಹ್ಲಾದ-ಸ್ತುತಿಸಲು ಒಲಿದ
ಉಗ್ರಪದನ ಶಾಲಿ ಗ್ರಾಮಗಳ ರೂಪದಲಿ-ವೃಕ್ಷಾಗ್ರದಲಿ
ಭಾರ್ಗವಿರಮಣನನುಗ್ರಹಿಸಲು ಭಕುತರನ-ಪ್ರಕಟನಾಗಿಹನ ॥ ॥೨॥

ಸ್ಥಿರಚರದೊಳು ತನ್ನಿರುವಿಕೆಯನು ಬುಧಜನಕೆ-ತೋರಿಸುವುದಕೆ
ಸುರುಚಿರ ಷೋಡಶಕರಗಳಿಂದಾಯುಧ ಧರಿಸೀ-ಅಸುರನ ಮಥಿಸೀ
ತರುಮೂಲದೊಳವತರಿಸಿ ಚಕ್ರಾಂಕಿತ ಶಿಲದಿ-ನೆಲಸಿ ಕರುಣದಿ
ಶರಣು ಜನಕೆ ಭಯ ಪರಿಹರಿಸ್ಯಭಯ ನೀಡುವನ-ದಿವಿಜರೊಡೆಯನ ॥
॥೩॥

ಕ್ಷೋಣಿಯೊಳೀಸುಸ್ಥಾನ ದರ್ಶನದಿ ಮನುಜನ-ಪೋಪುದು ವೃಜಿನ
ಸ್ಥಾನದ ಮಹಿಮೆಪುರಾಣದಿ ಪೇಳಿರುವದನ–ತಿಳಿವದು ಮುನ್ನ

ಭಾನು ಕರ್ಕಾಟ ಸ್ಥಾನದಿ ಬರುವ ಕಾಲದಲಿ-ತೀರ್ಥಗಳಲ್ಲಿ
ಸ್ನಾನ ಜಪಾನುಷ್ಠಾನ ಮಾಳ್ಪರಿಗೆ ಒಲಿವಾ-ಹೃದಯದಿ ಪೊಳೆವಾ ॥
॥೪॥

ಚಾರು ಶ್ರೀ ಕೃಷ್ಣಾತೀರದಿ ಮೆರೆವಾಶ್ವತ್ಥ-ತರುವರ ಸಂಸ್ಥಾ
ನಾರದಮುನಿ ಸಂಕೀರ್ತಿತ ಪಾವನ ಚರಿತ-ತ್ರಿಗುಣಾತೀತ
**ಕಾರ್ಪರ ನಿಲಯ ಶ್ರೀನಾರಸಿಂಹನ** ಪದಯುಗಲ-ಬಿಡದನುಗಾಲ
ಸಾರಿ (ಭಜಿಪರಿಗಪಾರ) ಸೌಖ್ಯಗಳಿಂದ-ವಿಘ್ನವ ತರಿವಾ ॥ ॥೫॥



**ಅರ್ಥವಿವರಣೆ :**

ಪ್ರಸಕ್ತ ಕೀರ್ತನ ಸಾಹಿತ್ಯವು ಪೂಜ್ಯ **ಗಿರಿಯಾಚಾರ್ಯರ** ಕೃತಿ. ಕೊಪ್ಪರ ಕ್ಷೇತ್ರ ನಿವಾಸಿಗಳಾಗಿದ್ದ ಪೂಜ್ಯ ಗಿರಿಯಾಚಾರ್ಯರು ಶ್ರೀಮನ್ಮಧ್ವಶಾಸ್ತ್ರ ಸಂಪನ್ನರಾಗಿದ್ದ ಅರ್ಚಕ ಭೀಮಸೇನಾಚಾರ್ಯರ ಹಿರಿಯ ಪುತ್ರರು. ಬಾಲ್ಯದಲ್ಲಿ ಯಳಮೇಲಿ ಶ್ರೀ ವಿಠಲಾಚಾರ್ಯರ ಬಳಿ ವ್ಯಾಕರಣ, ಸಾಹಿತ್ಯ, ವೇದಾಂತ ಶಾಸ್ತ್ರಗಳನ್ನು ವಿಧ್ಯುಕ್ತವಾಗಿ ಅಧ್ಯಯನ ಮಾಡಿ, ವ್ಯಾಸ ವಾಙ್ಮಯರಲ್ಲಿಪ್ರಕಾಂಡ ಪಂಡಿತರಾಗಿ, ಕೊಪ್ಪರ ಕ್ಷೇತ್ರದಲ್ಲಿ ಶ್ರೀ ಲಕ್ಷ್ಮೀನೃಸಿಂಹ ದೇವರ ಪೂಜ ರೂಪವಾದ ತಪಸ್ಸನ್ನು ಆಚರಿಸಿದ ಮಹನೀಯರು. ಹಿರಿಯ ದಾಸರಾಯರ ಪರಮಾನುಗ್ರಹಕ್ಕೆ ಪಾತ್ರರಾಗಿ, ದಾಸಸಾಹಿತ್ಯ ಕ್ಷೇತ್ರದಲ್ಲೂ ಸಹ ಪದ ಪದ್ಯಗಳನ್ನು ರಚಿಸಿ, ಸಾರಸ್ವತ ಲೋಕವನ್ನು ಶ್ರೀಮಂತಗೊಳಿಸಿದರು.

**ವೀರನ ನೋಡಿರೈ** = ಅಸದೃಶ ಪರಾಕ್ರಮವಂತನಾದ ವೀರಾಗ್ರಣಿ ಶ್ರೀ ಲಕ್ಷ್ಮೀನರಸಿಂಹನ ದರ್ಶನ ಭಾಗ್ಯ ಪಡೆದು, ಧನ್ಯರಾಗಿರಿ, **ನರಮೃಗಾಕಾರನ**=ನರಸಿಂಹ ರೂಪವಾದ ಶ್ರೀ ಹರಿ, **ಕಾರ್ಪರ ಋಷಿತಪಕೊಲಿದು** =ಕಾರ್ಪರ ನಾಮಕರಾದ ಮುನಿ ಪುಂಗವರು ಶ್ರೀ ಕೃಷ್ಣಾ

ನದಿಯ ಸಮೀಪದ ಗುಡ್ಡದಲ್ಲಿ ದೀರ್ಘವಾದ ತಪಸ್ಸನ್ನು ಆಚರಿಸಿದರೆಂದು ಸ್ಥಳ ಪುರಾಣದ ಐತಿಹ್ಯ ಅವರ ತೀವ್ರ ತಪೋ ಮಹಿಮೆಗೆ ಮೆಚ್ಚಿ ಶ್ರೀ ಲಕ್ಷ್ಮೀನರಸಿಂಹನು ಅಶ್ವತ್ಥ ವೃಕ್ಷಸ್ಥವಾಗಿ ಅನುಗ್ರಹಿಸುತ್ತಿದ್ದಾನೆ. ಕ್ಷೇತ್ರಸ್ಥಮೂರ್ತಿ–ಕಾರ್ಪರ ನರಹರಿ.

**ಚಾರು ಚರಣ ಯುಗಳಾ**=ಅತ್ಯಂತ ಮನೋಹರವಾದ (ಅಪ್ರಾಕೃತವಾದ ಜಗದ್ವಿಲಕ್ಷಣವಾದ) ಪಾದದ್ವಂದ್ವಗಳನ್ನು ಆರಾಧಿಸುವ ಭಕ್ತರ, **ದುರಿತ ತಿಮಿರಕೆ**= ವಿಪತ್ತುಗಳೆಂಬ (ಪಾಪ) ಅಂಧಕಾರಕ್ಕೆ, **ಸವಿತ**= ಸೂರ್ಯಸದೃಶನು, ಭಾಸ್ಕರನ ಉದಯವಾದರೆ ಅಂಧಕಾರನಾಶ. ಅಂತೆಯೇ ಶ್ರೀ ಲಕ್ಷ್ಮೀನರಸಿಂಹನ ದರ್ಶನದಿಂದ ಸಕಲ ದುರಿತ ಪರಿಹಾರ, **ವಾರಿಜಭವ**=ಶ್ರೀಮನ್ನಾರಾಯಣನು ನಾಭೀಕಮಲ ಸಂಜಾತರಾದ ಶ್ರೀ ಬ್ರಹ್ಮದೇವರು (ವಾರಿಜ-ಕಮಲ ಭವ-ಕಮಲೋತ್ಪನ್ನರು), **ತ್ರಿಪುರಾರಿ** =ತ್ರಿಪುರಾಸುರರ ಸಂಹಾರಕರಾದ ಶ್ರೀ ಮಹರುದ್ರದೇವರು, **ಮುಖ** =ಇವರೇ ಮೊದಲಾದ (ಬ್ರಹ್ಮಾದಿ), **ಸುರವ್ರಾತ** = ದೇವತೆಗಳ ಸಮೂಹದಿಂದ, **ಸೇವಿತ**=ಪೂಜಿತನಾದವನು, **ಸ್ವರತ**=ಅಪ್ತಕಾಮನು ತನ್ನ ಭಗವದ್ರೂಪಗಳಲ್ಲಿ ತಾನೇ ರಮಣಮಾಡುವ ಸ್ವರಮಣನು, **ಮದ್ಬಂಧು**=ನನ್ನ ಪರಮಾಪ್ತ ಬಾಂಧವನಾದ ಬಿಂಬಮೂರ್ತಿ, **ಅಭೀಷ್ಟೆಯ ಗರೆಯುಲು**=ಶರಣಾಗತ ಜನರ ಸಕಲ ಮನೋಭಿಲಾಷೆಗಳನ್ನು ಪೂರೈಸುವವನು, **ದೇವತರು ಸ್ವಭಾವ**=ಕಲ್ಪವೃಕ್ಷ ಸದೃಶನು (ದೇವತರು-ಸುರರವೃಕ್ಷ–ಸ್ವರ್ಗ ಲೋಕದಲ್ಲಿರುವ ಕಲ್ಪವೃಕ್ಷ).

**ಉಗ್ರನಾದರು**=ಭೀಕರ ರೂಪವನ್ನು ತಾಳಿ ಸ್ತಂಭದಿಂದ ಬಗೆದು ಬಂದರೂ, **ಅನುಗ್ರ ಒಲಿವನು**=ತನ್ನ ಭಕ್ತರಿಗೆ ಸೌಮ್ಯ ಮೂರ್ತಿಯು ಅನುಗ್ರಹಪ್ರದನು, **ವಾಗ್ದೇವಿಯರ ಸನಾಜ್ಞದಿ**=ವಾಗಭಿಮಾನಿಯಾದ ಶ್ರೀ ಸರಸ್ವತೀ ದೇವಿಯರ ಅನುಗ್ರಹ ಪೂರ್ವಕವಾದ ಆದೇಶದಂತೆ, **ನಮಿಸಿ ಪ್ರಹ್ಲಾದ ಸ್ತುತಿಸಲು**=ಪ್ರಹ್ಲಾದರಾಜರು ನಿನಗೆ ಅಭಿನಂದನಾ ಪೂರ್ವಕ ಸ್ತುತಿಸಲು, **ಒಲಿದ ಉಗ್ರವದನ**=ಅವರಿಗೆ ಒಲಿದು ಬಂದ

ಭೀಕರ ಸ್ವರೂಪನು (ದೈತ್ಯರ ಪಾಲಿಗೆ), **ಶಾಲಿಗ್ರಾಮಗಳ ರೂಪದಲಿ**= ಶ್ರೀ ಲಕ್ಷ್ಮೀನರಸಿಂಹ ದೇವರು ಪ್ರಹ್ಲಾದ ವರದರಾಗಿ ಶಾಲಿಗ್ರಾಮ ಶಿಲೆಗಳ ರೂಪದಲ್ಲಿ, **ವೃಕ್ಷಾಗ್ರದಲಿ**= ಅಶ್ವತ್ಥ ವೃಕ್ಷದ ತುದಿಯಲ್ಲಿ, **ಭಾರ್ಗವಿ ರಮಣ**=ಭೃಗು ಕುಲೋತ್ಪನ್ನಳಾದ ಶ್ರೀ ಲಕ್ಷ್ಮೀದೇವಿಯ ಪತಿಯಾದ ಶ್ರೀ ನರಸಿಂಹನು, **ಭಕುತರನು ಅನುಗ್ರಹಿಸಲು** = ಶರಣಾಗತರಾಗಿ ಬಂದ ಭಕ್ತ ಜನರನ್ನು ಅನುಗ್ರಹಿಸಲು, **ಪ್ರಕಟವಾಗಿಹ**= ಇಲ್ಲಿ ಪ್ರಕಟನಾಗಿ-ದ್ದಾನೆ.

**ಸ್ಥಳದ ಐತಿಹ್ಯ**= ಕೊಪ್ಪರ ಗ್ರಾಮವು ಕೃಷ್ಣಾ ನದಿಯ ತೀರದಲ್ಲಿರುವ ಪುಣ್ಯಕ್ಷೇತ್ರ ನದಿಯ ತೀರದಲ್ಲಿ ಬೃಹತ್ ಅಶ್ವತ್ಥ ವೃಕ್ಷವಿದೆ. ಅದರ ಅಗ್ರದಲ್ಲಿ ಶಾಲಿಗ್ರಾಮ ಶಿಲಾ ರೂಪದಲ್ಲಿ ಪ್ರಹ್ಲಾದ ವರದ ಶ್ರೀ ನಾರಸಿಂಹನು ಪ್ರಕಟನಾಗಿದ್ದಾನೆ. ಈಗ ವೃಕ್ಷದ ಕೆಳಗಿನ ಪೊಟರೆಯಲ್ಲಿ ಆ ಸಾಲಿ ಗ್ರಾಮಗಳನ್ನು ಕಾಣಬಹುದು. ಕಾರ್ಪರ ಋಷಿ ತಪಸ್ಸನ್ನಾಚರಿಸಿದ ಸ್ಥಳ.

**ಸ್ಥಿರಚರದೊಳು** = ಸ್ಥಾವರ ರೂಪವಾದ ವೃಕ್ಷದಲ್ಲಿ, **ತನ್ನಿರುವಿಕೆಯನು**= ತನ್ನ ಪ್ರಕಟ ರೂಪವನ್ನು, **ಬುಧ ಜನಕೆ**= ಜ್ಞಾನಿವರ್ಗಕ್ಕೆ, **ಸುರಚರ**= ಅತ್ಯಂತ ಮನೋಹರವಾದ, **ಷೋಡಶಕರಗಳಿಂದ**= ಹದಿ-ನಾರು ಬಾಹುಗಳಲ್ಲಿ, **ಆಯುಧ ಧರಿಸಿ**= ೧೬ ವಿಧವಾದ ಆಯುಧಗಳಿಂದ ಯುಕ್ತನಾಗಿ, (ಷೋಡಶ ಬಾಹು ನರಸಿಂಹ ಪ್ರತೀಕವಿದೆ), **ಅಸುರನ ಮಥಿಸೀ**= ದೈತ್ಯನಾದ ಹಿರಣ್ಯ ಕಶಿಪುವನ್ನು ಸಂಹರಿಸಿ, **ತರುಮೂಲದೊಳವತರಿಸೀ**= ವಟ ವೃಕ್ಷದ ಬುಡದಲ್ಲಿ (ಪೊಟರೆ) ಪ್ರಕಟರೂಪನಾಗಿ. **ಚಕ್ರಾಂಕಿತ ಶಿಲದಿ**= ಚಕ್ರಾಂಕಿತ ಶಾಲಿಗ್ರಾಮ ಶಿಲೆಯಲ್ಲಿ ಮೂಡಿ, ಕರುಣಾ ಸಾಗರನಾದ ಕಂಜದಳಾಯತಾಕ್ಷನು ಭಕ್ತರ ದುಃಖ ಪರಿಹಾರ ಮಾಡಲು ಈ ಕ್ಷೇತ್ರದಲ್ಲಿ ನೆಲೆಸಿದ್ದಾನೆ.

**ಕ್ಷೋಣಿಯೊಳು** = ಈ ಭೂಮಂಡಲದಲ್ಲಿ, **ಈಸುಸ್ಥಾನ ದರ್ಶನದಿ** = ಈ ಪುಣ್ಯಕ್ಷೇತ್ರ ದರ್ಶನ ಮಾತ್ರದಿಂದ, **ಮನುಜನ ವೃಜಿನ ಪೋಪುದು** = ಮಾನವರ ಪಾಪ ರಾಶಿಗಳು ಪರಿಹಾರವಾಗುವುವು, **ಸ್ಥಾನ ಮಹಿಮೆ** = ಈ ಕ್ಷೇತ್ರದ ಮಹಿಮೆಯನ್ನು ಪುರಾಣಾದಿಗಳಲ್ಲಿ ಕೇಳಿ, ತಿಳಿದುಕೊಂಡು, **ಭಾನು ಕರ್ಕಾಟದಿ ಬರುವ ಕಾಲದಲಿ** ಸೂರ್ಯನು ಕರ್ಕಾಟಕ ರಾಶಿಯನ್ನು ಪ್ರವೇಶಿಸುವ ಸರ್ವ ಸಮಯದಲ್ಲಿ, **ತೀರ್ಥಗಳಲಿ** = ಈ ಕೃಷ್ಣಾ ನದಿಯಲ್ಲಿ ಸ್ನಾನ, ಜಪ, ಅನುಷ್ಠಾನಾದಿಗಳನ್ನು ಮಾಡುವವರಿಗೆ **ಶ್ರೀ** ನರಸಿಂಹನು ಅನುಗ್ರಹಿಸುವನು, **ಹೃದಯದಿ ಪೊಳೆವಾ** = ಹೃಸ್ಥ ಪದುಮದಲ್ಲಿ ಹೊಳೆಯುವನು.

**ಚಾರು ಕೃಷ್ಣಾ ತೀರದಿ** = ಸುಂದರವಾದ ಕೃಷ್ಣಾ ತೀರದಲ್ಲಿ, **ಮೆರೆವ ಅಶ್ವತ್ಥ ತರುವರ** = ವೈಭವದಿಂದ ವಿದ್ಯಮಾನನಾಗಿರುವ ಶ್ರೇಷ್ಠ ಅಶ್ವತ್ಥ ವೃಕ್ಷದಲ್ಲಿ, **ಸಂಸ್ಥಾ** = ನೆಲೆಗೊಳಿಸಿರುವ, **ನಾರದ ಮುನಿ ಸಂಕೀರ್ತನ** = ದೇವರ್ಷಿ ನಾರದ ಮುನಿಗಳಿಂದ ಸಂಸ್ತೂಯಮಾನನಾದ, **ಪಾವನ ಚರಿತ** = ಪರಮ ಪವಿತ್ರ ಚರಿತ್ರನಾದ, **ತ್ರಿಗುಣಾತೀತ** = ಪ್ರಾಕೃತ ಗುಣತ್ರಯಗಳಿಂದ ದೂರನಾದ, **ಕಾರ್ಪರ ನರಸಿಂಹನ ಪಾದ ಪದ್ಮಯುಗಳಗಳನ್ನು** ನಿರಂತರವೂ ಭಜಿಸುವವರನ್ನು ಅನುಗಾಲ ಸೌಖ್ಯಗಳನ್ನಿತ್ತು ವಿಘ್ನಗಳನ್ನು ಪರಿಹರಿಸಿ, ಸಂರಕ್ಷಿಸುವನು.



೪೫

(ಕಾರ್ಪರ ನರಶಿಂಗ–ಅಂಕಿತ)

ರಾಗ–ಯದುಕುಲ ಕಾಂಬೋದಿ ಆದಿತಾಳ

(ಶ್ರೀ ರಾಘವೇಂದ್ರ ಗುರುರಾಯರ ಸೇವಿಸಿರೋ-ಎಂಬ ಧಾಟಿಯಲ್ಲಿ)

ನಾರಸಿಂಹ ಪರಿಪಾಲಯ ಮಾಂ ಸಂತತಂ-ಭವಕೂಪನಿಪತಿತಂ ॥ ॥ಪ॥

ಘೋರ ದುರಿತಹರ ಚಾರುಚರಣ ಯುಗಲಂ-ಪ್ರಣಮಾಮಿ
ತ್ರಿಕಾಲಂ ॥ ॥ಅ॥

ಕಾರ್ಪರ ಋಷಿಕೃತ ಘೋರ ತಪಃಪ್ರೀತಾ-ಅತ್ರಾವಿರ್ಭೂತ
ಕಾರ್ಪರ ಗ್ರಾಮೇ ತೀರಗತಾಶ್ವತ್ಥ-ರೂಪೇಣ ಸಮಾಸ್ತ ॥
ಆರಾಧಕ ನಿಜಭಕ್ತ ಜನಾಭೀಷ್ಟ-ವರ್ಷಣ ಸರ್ವೇಷ್ಟ
ನಾರಾಯಣ ಮುನಿ ಪೂಜಿತ ಸುರವ್ರಾತ-ಸಂಸ್ತುತ ಶುಭಚರಿತ ॥ ॥೧॥

ಸಾಕ್ಷಾಬ್ಭ್ರೀರಪಿವೀಕ್ಷ್ಯಾದ್ಭುತರೂಪಂ-ತವ ಪ್ರಕಟಿತ ರೂಪಂ
ತ್ರ್ಯಕ್ಷಾದ್ಯಮರ್ತ್ಯೈಃ ಪ್ರೇಷಿತಾಪಿ ಸ್ವಪತೌ-ಶಂಕಿತೇವತಸ್ಥಾ
ರಕ್ಷಿತವಾನಸಭಿವೀಕ್ಷ್ಯ ಪ್ರಹ್ಲಾದಂ-ಕೃತ್ವಾ ಪ್ರಸಾದಂ ॥
ಲಕ್ಷ್ಮೀಧವ ಖಲಶಿಕ್ಷಣ ತವಚರಿತಂ-ಜ್ಞಾಪಯಮೋ ಸತತಂ ॥ ॥೨॥

ಭಕ್ತಿಂ ದೇಹಿ ಪ್ರಶಸ್ತಾಂತ್ವಯಿ ಕೃಪಯಾ-ಚಿಂತಿತದುರ್ವಿಷಯಾ
ಸಕ್ತಿಂಜಹಿ ಸದ್ಭಕ್ತ ಚಿತ್ತ ನಿಲಯ-ಕಾಯಾಧವಪ್ರಿಯಾ

ತೃಪ್ತಿ ರ್ಮೇಸ್ತು ಭವತ್ಕಥಾಖ್ಯಸುಧಯಾ–ಶೃತಿ ಪುಟ ಸಂಭೃತಯಾ ||
ಮುಕ್ತಾ ಮುಕ್ತ ಸಮಸ್ತ ಜಗತ್ಕಾಯಯಾ–ಸುರಗಣ ಸಂಸೇವ್ಯಾ || ||೩||

ಪದ್ಮಜಾದಿನುತ ಸದ್ಗುಣಗಣ ಪೂರ್ಣ–ಸುಜನಾರ್ತಿಹರಣಾ |
ಪದ್ಮಾಧವ ಮಾಮುದ್ಧರ ಸುಖಪೂರ್ಣ-ವೃಕ್ಷಾದವತೀರ್ಣ
ಮದ್ಹೃತ್ತಿರ ಪ್ರದ್ಯೋಮಿ ಕಿರಣ–ಸನ್ನತನ ಶುಭ ಚರಣ ||
ಪದ್ಮಾರ್ಚಿತ ಪದಪದ್ಮ ಸದಾ ಪೂರ್ಣ-ಷಡ್ಗುಣಸಂಪನ್ನ || ||೪||

ಮಂಗಳ ಕೃಷ್ಣ ತರಂಗಿಣಿಕೂಲಸ್ಥ-ಅಶ್ವತ್ಥೋದ್ಭೂತ
ತುಂಗವದನ ಬಹು ಶಾಲಿಗ್ರಾಮಗತ–ಷೋಡಶಬಾಹುಯುತ
ಮಂಗಳಪ್ರದ ನರಶಿಂಗ ಕೃಪಾಸಾಂಗ-ರಕ್ಷಿತಮಾತಂಗ ||
ಸಂಗೀತಪ್ರಿಯ ಮಂಗಳತರ ಚರಿತ-ಶೃತಿತತಿ ವಿಖ್ಯಾತ || ||೫||



**ಅರ್ಥವಿವರಣೆ :**

**ಭವಕೂಪನಿ ಪತಿತಂ** = ಸಂಸಾರವೆಂಬ ಕೂಪದಲ್ಲಿ ಬಿದ್ದಿರುವಂಥವನನ್ನು, **ಘೋರ ದುರಿತಹರ** = ಭೀಕರವಾದ ಪಾಪಗಳ ಪರಿಹಾರಕ ರೂಪ ಶ್ರೀ ನಾರಸಿಂಹರೂಪ, **ಪ್ರಣಮಾಮಿ ತ್ರಿಕಾಲಂ** = ಮೂರು ಕಾಲಗಳಲ್ಲೂ (ಬೆಳಿಗ್ಗೆ-ಮಧ್ಯಾಹ್ನ–ಸಂಜೆ) ನಿನ್ನನ್ನು ನಮಸ್ಕರಿಸುತ್ತೇನೆ.

**ಘೋರ ತಪಃಪ್ರೀತ** = ಕಾರ್ಪರ ಋಷಿಗಳು ಆಚರಿಸಿದ ಮಹಾ ತಪಸ್ಸಿಗೆ ಮೆಚ್ಚಿ ಒಲಿದು ಬಂದ ನರಸಿಂಹಮೂರ್ತಿ, **ಅತ್ರ ಆವಿರ್ಭೂತ** = ಅವರು ಕುಳಿತಿದ್ದ ಸ್ಥಳದಲ್ಲಿಯೇ ಪ್ರಕಟನಾದ, **ಕಾರ್ಪರ ಗ್ರಾಮೇ** = ಕೊಪ್ಪರವೆಂಬ ಗ್ರಾಮದಲ್ಲಿ, **ತೀರಗತಾಶ್ವತ್ಥ** = ಕೃಷ್ಣಾ ನದಿಯ ತೀರದಲ್ಲಿರುವ ಅಶ್ವತ್ಥವೃಕ್ಷ. (ವೃಕ್ಷದ ರೂಪಿನಲ್ಲಿ ನರಸಿಂಹ ಅಲ್ಲಿ ನೆಲೆಸಿದ್ದಾನೆ). **ರೂಪೇಣ.**

**ಜನಾಭೀಷ್ಟ** = **ಅಶ್ವತ್ಥ** ವೃಕ್ಷದ ರೂಪದಲ್ಲಿ ಆರಾಧಿಸುವ ಭಕ್ತಜನ ಸಂದೋಹಕ್ಕೆ ಸಕಲ ಅಭೀಷ್ಟಗಳನ್ನು ಸಲ್ಲಿಸುವ **ಕ್ಷೇತ್ರಸ್ಥ ಮೂರ್ತಿ ಶ್ರೀ** ನರಸಿಂಹ, **ನಾರಾಯಣ ಮುನಿ ಪೂಜಿತ** = ನಾರದ ಋಷಿಗಳಿಂದ ಪೂಜಿತನಾದವನು, **ಸುರವ್ರಾತ ಸಂಸ್ತುತ** = ದೇವತಾ ಗಣದಿಂದ ಸಂಸ್ತುತ್ಯಮಾನನು (ವ್ರಾತ-ಸಮೂಹ), **ಶುಭಚರಿತ** = ಮಂಗಳ ಚರಿತನು.

**ಸಾಕ್ಷಾತಚೀರ್ಲ್ಯರಪಿ** = ಸೌಮ್ಯಾಕಾರನಾಗಿದ್ದರೂ ಸಹ, **ವಿಕ್ಷ್ಯಾದ್ಭುತ ರೂಪಂ** = ನರಸಿಂಹನ ಭೀಕರ ರೂಪವನ್ನು ಕಂಡು, **ಪ್ರಕಟಿತ ತವ ಕೋಪಂ** = ಪರಮ ಶಾಂತ ಸ್ವಭಾವನು ಕೋಪಗೊಂಡವನಂತೆ ವಿಡಂಬನೆ ಮಾಡಿ ತೋರಿಸಿದ ಪ್ರಸಂಗ, **ತ್ರ್ಯಕ್ಷಾದಿ ಅಮರೈ** = ರುದ್ರ ದೇವತಾ ಮೊದಲಾದ ದೇವತೆಗಳಿಂದ (ತ್ರ್ಯಕ್ಷ-ತ್ರಯ + ಅಕ್ಷ ಮುಕ್ಕಣ್ಣನಾದ ಮಹರುದ್ರದೇವರು), **ಪ್ರೇಷಿತಾಪಿ ಸ್ವಪತೌ** = ಪ್ರೇರಕ ರೂಪದವನು ನರಸಿಂಹನ ಆ ಕರಾಳರೂಪ ದೇವತೆಗಳಿಗೂ ಸಹ ಭಯವನ್ನುಂಟುಮಾಡಿತು, **ರಕ್ಷಿತವಾನ ಅಭಿವೀಕ್ಷ್ಯ ಪ್ರಹ್ಲಾದಂ** = ತನ್ನಿಂದ ಸಂರಕ್ಷಿತನಾದ ಬಾಲ ಪ್ರಹ್ಲಾದನನ್ನು ಕೃಪಾವೀಕ್ಷಣದಿಂದ ಅವಲೋಕಿಸಿ, **ಕೃತ್ವಾ ಪ್ರಸಾದಂ** = ತನ್ನ ಅನುಗ್ರಹವನ್ನೂ ಮಾಡಿ, **ಲಕ್ಷ್ಮೀಧವ** = ರಮಾಪತಿಯಾದ **ಶ್ರೀ** ನಾರಸಿಂಹನು, **ಖಲ ಶಿಕ್ಷಣ** = ದುಷ್ಟರ ಶಿಕ್ಷಾ ವಿಚಾರದಲ್ಲಿ, **ತವ ಚರಿತಂ** = ನಿನ್ನ ಮಹಾಮಹಿಮೋಪೇತವಾದ ಚರಿತ್ರೆಯನ್ನು (ಲೀಲಾವಿಲಾಸಗಳನ್ನು), **ಮೇ ಸತತಂ ಜ್ಞಾಪಯ** = ನನಗೆ ಯಾವಾಗಲೂ ಸ್ಮರಣೆಗೆ ತರುವಂತೆ ಮಾಡು.

**ಭಕ್ತಿಂ ದೇಹಿ** = ನಿನ್ನಲ್ಲಿ ದೃಢವಾದ ಭಕ್ತಿಯನ್ನು ನೀಡು, **ಪ್ರಶಸ್ತ್ಯಾಂತ್ವಯ ಕೃಪಯಾ** ಕರುಣೆಯಿಂದ ನನ್ನನ್ನು ನೋಡು, **ಚಿಂತಿತ ದುರ್ವಿಷಯಾ ಸಕ್ತಂಜಹಿ** ಯಾವಾಗಲೂ ದುಷ್ಟ ವಿಷಯಗಳಲ್ಲಿಯೇ ಆಸಕ್ತವಾಗಿರುವ ನನ್ನ ಮನಸ್ಸನ್ನು ಅದರಿಂದ ದೂರವಿಡು, **ಸದ್ಭಕ್ತ-ಚಿತ್ತ ನಿಲಯ** = ಭಗವದ್ಭಕ್ತರ ಚಿತ್ತ ಮಂದಿರದಲ್ಲಿ ನೆಲೆಸಿರುವವನೇ,

**ಕಾಯೂಧವ ಪ್ರಿಯ** = ವೃಕ್ಷದ ಕಾಂಡದಲ್ಲಿ ಪ್ರಕಟವಾಗಿರುವ ಪ್ರಿಯ—**ತಸ್ತುತೇ** (ಕಾಯಾ-ಮರದಕಾಂಡೆ), **ಭವತ್ಕಥಾಖ್ಯಸುಧಯಾ** = ಶ್ರೀ ಪರಮಾತ್ಮನ ಕಥೆ ಎಂಬ ಸುಧಾ ವಚನಗಳಿಂದ, **ಮೇ ತೃಪ್ತಿರಸ್ತು** = ನನಗೆ ತೃಪ್ತಿಯಾಗಲಿ, **ಸದ್ಭಕ್ತ ಚಿತ್ತನಿಲಯ** = ಭಗವದ್ಭಕ್ತರ ಚಿತ್ತ ಮಂದಿರನೆ, **ಶ್ರುತಿಸಂಪುಟ ಸಂಭೃತಯಾ** = ಕಿವಿಗಳೆಂಬ ದೊನ್ನೆಗಳಿಂದ ನಿನ್ನ ಕಥಾ ಸುಧೆಯನ್ನು ಉಣ್ಣಿಸು, **ಮುಕ್ತಾ ಮುಕ್ತ ಸಮಸ್ತ ಜಗ—ತ್ಕಾಯಾ** = ಮುಕ್ತರೂ ಮತ್ತು ಅಮುಕ್ತರೂ ಯುಕ್ತವಾದ ಸಕಲ ಜಗತ್ತಿಗೂ ಸಂರಕ್ಷಕನು, **ಸುರಗಣ ಸಂಸೇವ್ಯ** = ದೇವತಾ ವರ್ಗದಿಂದ ಸಂಸೇವ್ಯಮಾನನು.

**ಪದ್ಮಜಾದಿನುತ** = ಶ್ರೀ ಹರಿಯ ನಾಭೀಕಮಲ ಸಂಜಾತರಾದ ಶ್ರೀ ಬ್ರಹ್ಮದೇವರಿಂದ ಸಂಸ್ತುತ್ಯನಾದ, **ಸದ್ಗುಣಗಣ ಪೂರ್ಣ** = ಪರಮ ಮಂಗಳವಾದ ಗುಣಗಳಿಂದ ಪರಿಪೂರ್ಣವಸ್ತು, **ಸುಜನರ ಆರ್ತ ಹರಣಾ** = ಸಜ್ಜನರ ದುಃಖ ಪರಿಹಾರಕನು, **ಪದ್ಮಾಂಧವ** = ಇಂದಿರಾ ರಮಣನು, **ಮಾಂ ಉದ್ಧರ** = ನನ್ನನ್ನು ಉದ್ಧರಿಸು, **ಸುಖಪೂರ್ಣ** = ಆನಂದ ಮಯನು, **ವೃಕ್ಷಾತ್ ಅವತೀರ್ಣ** = ವಟ ವೃಕ್ಷದಿಂದ ಕೆಳಗೆ ಇಳಿದು ಬಂದ, **ಮದ್‌ಹೃತತಿಮಿರ** = ನನ್ನ ಹೃದಯಾಂಧಕಾರಕ್ಕೆ, **ಪ್ರದ್ಯೋತನ ಕಿರಣ** = ಪ್ರಖರನಾದ ಸೂರ್ಯನ ಕಿರಣಗಳ ಸದೃಶನೇ (ಮತತಿಮಿರಾಪಹಾರಕನೇ), **ಶುಭಚರಣ** = ಮಂಗಳಕರವಾದ ಪಾದ ಪಂಕಜಯುಗಳನೇ, **ಪದ್ಮಾರ್ಚಿತ** = ಶ್ರೀ ಲಕ್ಷ್ಮೀದೇವಿಯಿಂದ ಪೂಜಿತನಾದ, **ಪದಪದ್ಮ** = ಚರಣಾರವಿಂದನೇ, **ಸದಾಪೂರ್ಣ** = ಅನಾದ್ಯನಂತ ಕಾಲದಿಂದಲೂ ಪರಿಪೂರ್ಣನಾಗಿರುವವನೇ, **ಷಡ್ಗುಣ ಸಂಪನ್ನ** = ಷಡ್ಗುಣೈಶ್ವರ್ಯವಂತನು.

**ಮಂಗಳ ಕೃಷ್ಣ** = ಶುಭ ಪ್ರದಳಾದ ಕೃಷ್ಣಾ ನದಿಯ, **ತರಂಗಿಣಿ ಕೂಲಸ್ಥ** = ನದಿಯ ತೀರದಲ್ಲಿರುವ, **ಅಶ್ವತ್ಥೋದ್ಭೂತ** = ಅಶ್ವತ್ಥ ವೃಕ್ಷದಲ್ಲಿ ಪ್ರಕಟನಾಗಿರುವ, **ತುಂಗವದನ** = ಮಂಗಳಕರವಾದ ಮುಖವುಳ್ಳವನೇ (ನರಸಿಂಹನ ವದನವು ದೈತ್ಯರ ಪಾಲಿಗೆ ಕರಾಳವದನ ಭಕ್ತರ ಪಾಲಿಗೆ

ಮಂಗಳವದನ), **ಬಹು ಶಾಲಿಗ್ರಾಮಗತ** = ಅನೇಕ ಶಾಲಿ ಗ್ರಾಮಗಳಿಂದ ಯುಕ್ತವಾದ, **ಷೋಡಶಬಾಹುಯುತ** = ೧೬ ಬಾಹುಗಳಿಂದ ಅಲಂಕೃತ ನಾದ ನರಸಿಂಹಮೂರ್ತಿ, **ಮಂಗಳಪ್ರದ** ಶುಭದಾಯಕರೂಪ, **ರಕ್ಷಿತ ಮಾತಂಗ** = ಗಜೇಂದ್ರನನ್ನು ಸಂರಕ್ಷಿಸಿದ ಕರಿವರದನು (ಮಾತಂಗ-ಸಲಗ-ಗಂಡಾನೆ), **ಸಂಗೀತಪ್ರಿಯ** = ಸಾಮಗಾನಲೋಲ, **ಮಂಗಳಕರ ಚರಿತ** = ಪವಿತ್ರ ಚಾರಿತ್ರ್ಯವುಳ್ಳವನೇ, **ಶ್ರುತಿತತಿವಿಖ್ಯಾತ** = ಅನಂತ ವೇದ ಗಳಿಂದ ಮುಖ್ಯ ಪ್ರತಿಪಾದ್ಯನೇ.



## ೪೬

## (ಅಂಕಿತ-ಶ್ರೀಪತಿವಿಠ್ಠಲ)

**ರಾಗ-ಶಂಕರಾಭರಣ** **ಆದಿತಾಳ**

ನರಹರೇ-ಪಾಹಿಮಾಂ-ನರಹರೇ ॥ ॥ಪ॥

ನರಹರೆ ನಮಿಪೆ ನಾನಿನಗೇ-ನಿನ್ನ
ಚರಿತೆ ಆಶ್ಚರ್ಯ ಕೇಳ್ವರಿಗೇ ॥ಅಹ॥
ತರಳ ಪ್ರಹ್ಲಾದನ್ನ ಪೊರೆದಹೋ ಬಲದಲ್ಲಿ
ಮೆರೆವ ಮೂರುತಿ ಸಿರಿವರ ಕರುಣಾಕರ ॥ ॥ಅ॥

ತಂದೆಯು ಮಾತನು ಮೀರಿ-ನಿತ್ಯಾ
ನಂದ ಭಾಜಕರುಪಕಾರೀ-ಎಂದು
ಕಂದ ನುಡಿದ ಬಾರಿ ಬಾರೀ ॥ಅಹ॥
ಮಂದಹಾಸದಲಿ ಆನಂದ ಮೂರುತಿ ಗೋ-
ವಿಂದ ಮುಕುಂದ ಎಂತೆಂದನು ಹರುಷದಿ ॥ ॥೧॥

ನುಡಿ ಕೇಳಲೊಲ್ಲ ಇವನೆಂದೂ–ಕರ
ಪಿಡಿದೆಳದನು ಖಳ ಬಂದೂ-ಹೊಡಿ
ಬಡಿ ಎನ್ನುತಲಿ ಹೊಯ್ಯು ಹೊಯ್ಯುಯೆಂದೂ-ಹೇಳಿ
ಮಿಡುಕುತ ದುರುಳನ ಬಂದೂ ॥ಅಹ॥
ಮಡದಿ ಬೆಂಬಿಡದೆಲೆ ಅಡಿಗೆರಗಿದರನ್ನ
ಕಡು ಕೋಪದಿಂದ ಆರ್ಭಟಿಸುತ ಇರಲಾಗಿ ॥ ॥೨॥

ಬತ್ತೀಸಾಯುಧದೀ ಬಾಧಿಸಲೂ–ಮೇಲ
ಕೆತ್ತಿ ಅಂತರಕೆ ಹಾರಿಸಲೂ– ಬೀಳ
ಲೊತ್ತಿ ಕೊರಳ ಮತ್ತೆ ನೊಸಲೂ-ತನ್ನ
ಹೆತ್ತಯ್ಯ ಪರನೆಂದೆನಲೂ ॥ಅಹ॥
ಮತ್ತತನದಿ ನುಡಿದುತ್ತರ ಕೇಳದೆ
ಒತ್ತಿ ಶ್ರೀ ಹರಿಸರ್ವೋತ್ತಮನೆನಲಾಗಿ ॥ ॥೩॥

ವಿಸೇಸು ಪರಿ ದಂಡಿಸಿದರೂ-ಜಗ
ದೀಶ ಶ್ರೀ ಹರಿಗ್ಯಾರೆದರೂ-ಭಕ್ತ
ಪೋಷಕ ಇವನಲ್ಲದಾರೂ-ಇಲ್ಲ
ಲೇಸಾಗಿ ತಿಳಿದು ಬೈಯ್ಯದಿರೂ ॥ಅಹ॥
ಈಶ ಅಹೀಶ ಪಾಣೇಶಾದ್ಯರೆಲ್ಲರು
ದಾಸಾನುದಾಸರು ಶ್ರೀಶಗೆಂದೆಂದನು ॥ ॥೪॥

ಎಲ್ಲಿಪ್ಪನೋ ನಿನ್ನ ದೈವಾ-ಎಂದೂ
ಕಳ್ಳ ಕೇಳಲು ಏಕೋಭಾವಾ-ದಲ್ಲೀ
ಪ್ರಹ್ಲಾದ ಭಕ್ತ ಸಂಜೀವಾ-ಪೇಳ್ದ
ಸೊಲ್ಲೆಂದು ಖಳ ದುಃಸ್ವಭಾವಾ ॥ಅಹಾ॥
ನಿಲ್ಲದವನ ಬಾಯಲ್ಲಿ ಶಸ್ತ್ರವನಿಕ್ಕಿ
ಎಲ್ಲ ಪರಿಯ ಬಾಧೆ ಎಲ್ಲವ ಬಡಿಸಿದ ॥ ॥೫॥

ಕರ್ಣಕಠೋರ ಈ ವಾಕಾ-ಕೇಳಿ
ಸ್ವರ್ಣಕಶಿಪು ಅನೇಕಾ–ಚಿಂ
ತಾರ್ಣವದೊಳು ಸೇರಿ ಶೋಕಾ–ಬಟ್ಟು
ನಿರ್ಣಯ ಕಾಣದೆ ವಿವೇಕಾ ॥ಅಹಾ॥

ತನ್ನೊಳು ತಾನೆ ಕಾದೆಣ್ಣೆ ಕುದಿಯುವ ಪರಿ
ಚನ್ನ ಬಿಡುತ ತರಳನ್ನ ನುಡಿಸಿದನು ॥ ॥೬॥

ನಿನ್ನ ಒಡೆಯನಿಹ ಸ್ಥಳವಾ-ತೋರು
ಮನ್ನಿಸು ಈ ಮಾತು ಫಲವಾ-ಬಿಟ್ಟು
ಘನ್ನ ಘಾತುಕನ್ನ ಕುಲವಾ-ಕೆಡಿ
ಪನ್ಯಾಯವ್ಯಾಕೋ ಎಮ್ಮೊಳವಾ ॥ಅಹಾ॥

ಚಿಣ್ಣನಪಿಡಿದು ಮತ್ತನ್ಯಚಿಂತೆಯ ಬಿಟ್ಟು
ಪನ್ನಗಾಭರಣನ ಬೆನ್ನಬೀಳಲೋ ಎಂದಾ ॥ ॥೭॥

ಕಂದ ನುಡಿದ ಕಂಭದಲ್ಲೀ-ನಮ್ಮ
ಇಂದಿರೇಶನು ಇಪ್ಪನಿಲ್ಲೀ-ಸುರ
ವೃಂದ ವಂದಿತನು ಎಲ್ಲೆಲ್ಲೀ-ವ್ಯಾಪ್ತ
ಸಂದೇಹವಿಲ್ಲದಿರಲ್ಲೀ-॥ಅಹಾ॥

ಎಂದಡಾರ್ಭಟ ಖತಿಯಿಂದ ಲೊದೆಯೆ ಸ್ತಂಭಾ
ದಿಂದಲುದ್ಭವಿಸಿ ನೀ ಬಂದೆಯೋ ಕರುಣದೀ ॥ ॥೮॥

ಸರಸಿಜಜಾಂಡವು ನಡುಗೇ-ಬಂದಾ
ಭರದಲ್ಯಸುರನ ಕೆಮ್ಮುಡಿಗೇ-ಕರ
ವಿರಿಸಿ ಸೆಳೆದೆ ಭೂಮಿ ಅಡಿಗೇ–ಬಿರಿ
ದೊರಸಿ ಬೀರುತಲಡಿಗಡಿಗೇ ॥ಅಹಾ॥

ಕರದ ಕೂರುಗುರಿಂದ ಕರುಳ ಬಗೆದು ನಿನ್ನ
ಕೊರಳಲ್ಲಿ ಧರಿಸಿದೆ ಪರಮೋದಾರದಲ್ಲೀ ॥ ॥೯॥

ಸೇರಿ ಅಜಭವ ಮುಖ್ಯ ಸುರಪಾ-ಮುಖ್ಯ
ಸುರಸಿದ್ಧ ಮುನಿ ವಾಯು ಧನಪಾ-ಮಿಕ್ಕೀ
ಪರಿವಾರ ಗಂಧರ್ವ ಕ್ಷಿತಿಪಾ-ರೆಲ್ಲ
ಕರವ ಜೋಡಿಸಿ ನಿಂದು ಸ್ತುತಿಪಾ ॥ಅಹಾ॥

ಪರಿಯ ಪರಿಯ ಆಶ್ಚರ್ಯವೆನುತ ಪುಷ್ಪ-
ಸುರಿದು ವ್ಯೋಮರದಲ್ಲಿ ನೆರೆದು ನಿಂದಿರುವರು ॥ ॥೧೦॥

ಆಳುತೆಂದೀ ಭಕ್ತರ ಮೇಲೆ-ನಿನ
ಗಳುಕದಿಪ್ಪರು ಧರೆವ್ಯಾಲೇ-ಯೆನ
ಗಳವಡಲಿಲ್ಲ ಈ ಲೀಲೇ-ಪೇಳ
ಲಳವಲ್ಲವೋ ವ್ಯಾಳಿ ವ್ಯಾಳೀ ॥ಅಹಾ॥

ಕುಳಿತು ಸಂತೋಷದಿ ಚೆಲುವ ಈ ಬಾಲನ್ನ
ಸಲಹಿದೆ ಬಿರುದಾಂಕ **ಸಿರಿಪತಿ ವಿಠ್ಠಲ** ॥ ॥೧೧॥



**ಅರ್ಥವಿವರಣೆ :**

ಶ್ರೀ ನರಸಿಂಹಾವತಾರವನ್ನು ಸಮಗ್ರರೂಪದಲ್ಲಿ ಚಿತ್ರೀಕರಿಸುವ ಸುಂದರ ಕೀರ್ತನೆ ಸಾಹಿತ್ಯವಿದು.

**ನರಹರೇ** = ಶ್ರೀ ನಾರಸಿಂಹನೇ (ನರ-ಮಾನವ. **ಹರಿ**-ಸಿಂಹ ಶಬ್ದಾರ್ಥ), **ಮಾಂಪಾಹಿ** = ನನ್ನನ್ನು (ಸಕಲ ಸಜ್ಜನರನ್ನು-ಎಂದು ಗ್ರಾಹ್ಯ), **ನಿನ್ನ ಚರಿತೆ** = ನಿನ್ನ ಚರಿತ್ರೆ ಪರಮಾದ್ಭುತವಾದುದು. ಅಚ್ಚರಿಯ. ಅಚ್ಚರದ ಅನಂತಮಹಿಮೋಪೇತನು. ಶ್ರೀ ನರಸಿಂಹಾವತಾರ ದೈತ್ಯರ ದಲ್ಲಣರೂಪ. ಸಜ್ಜನರಿಗೆ ಅನುಗ್ರಹರೂಪ. ಸಕಲ ಪರಿಹಾರಕ ರೂಪವದು, ತರಳ **ಪ್ರಹ್ಲಾದನ್ನ** = ಬಾಲಕನಾದ ಭಾಗವತೋತ್ತಮರಾದ ಪ್ರಹ್ಲಾದರಾಜರು, **ಅಹೋ ಬಲದಲ್ಲಿ** = ಶ್ರೀಪತಿವಿಠ್ಠಲದಾಸರು ಅಹೋ

ಬಲ ಕ್ಷೇತ್ರಕ್ಕೆ ಹೋಗಿದ್ದಾಗ, ಅಲ್ಲಿ ಕ್ಷೇತ್ರಸ್ಥ ಅಹೋಬಲ ನರಸಿಂಹನ ದರ್ಶನ ಭಾಗ್ಯವನ್ನು ಪಡೆದು, ರಚನೆ ಮಾಡಿದ ಕೀರ್ತನ ಸ್ತೋತ್ರವಿದು, **ಶಿರಿವರ** ಶ್ರೀ ಲಕ್ಷ್ಮೀಪತಿ. (ಶ್ರೀ ಲಕ್ಷ್ಮೀದೇವಿಗಿಂತಲೂ ಅನಂತಾನಂತ ಕೋಟಿ ಗುಣಗಳಿಂದ ಉತ್ತಮೋತ್ತಮನು).

**ತಂದೆಯು ಮಾತನು** = ದುರುಳನಾದ ಹಿರಣ್ಯ ಕಶಿಪು-ನಾನೇ ದೇವ ರೆಂದು ಮಧಾಂಧನಾಗಿ ವರ್ತಿಸಿದಾಗ, ಆತನ **ಮಾತನ್ನು ಅಲಕ್ಷ್ಯ** ಮಾಡಿದ ಧೀರ ತರಳ ಪ್ರಹ್ಲಾದ, **ನಿತ್ಯಾನಂದ** = ಸದಾ ಆನಂದಮಯ ನಾದ ಶ್ರೀ ಹರಿ, **ಬಾರಿ ಬಾರಿ** = ಶ್ರೀ ಹರಿಯೇ ಸರ್ವೋತ್ತಮ-ಸರ್ವ ನಿಯಾಮಕನೆಂದು ಅನೇಕಾವರ್ತಿ ತಂದೆಗೆ ಹೇಳಿದ ವಚನಗಳು, **ಗೋವಿಂದ** = ವೇದ ಪ್ರತಿಪಾದ್ಯ, **ಮುಕುಂದ** = ಮುಕ್ತಿಪ್ರದನಾದ ಶ್ರೀಪರಮಾತ್ಮ. ಅಂತಹ ಪರಶಿವನನ್ನು ನಾನಾ ಪರಿಯಾಗಿ ಹಿಂಸೆಗೆ ಗುರಿ ಮಾಡಿದನು ತಮೋ ಯೋಗ್ಯವಾದ ಹಿರಣ್ಯ ಕಶಿಪು, **ಬತ್ತಿ ಸಾಯುಧದೀ** = ಚಂದ್ರಾಯುಧ ದಿಂದ (ಖಡ್ಗ), **ಮೇಲಕ್ಕೆತ್ತಿ ಅಂತರಕೆ ಹಾರಿಸಲು** = ತರಳ ಪ್ರಹ್ಲಾದ ನನ್ನು ಮೇಲಕ್ಕೆತ್ತಿ ಆಕಾಶಕ್ಕೆ ಎಸೆಯುತಿರಲು, **ಹೆತ್ತಯ್ಯ ಪರನೆಂದೆ-ನಲೂ** = ಕೆಳಗೆ ಬಿದ್ದ ಬಾಲಕನ ಕತ್ತನ್ನು ಒತ್ತಿ ಹಿಡಿದು,-"ನಿನ್ನ ತಂದೆ ಯಾದ ಹಿರಣ್ಯ ಕಶಿಪುವೇ ಪರದೈವನು"-ಎಂದು ಹೇಳು-ಎಂದು ಬಲಾ ತ್ಕರಿಸುತ್ತಿರಲು, **ಒತ್ತಿ ಹರಿಸರ್ವೋತ್ತಮನೆನಲಾಗಿ** = ಮದೋನ್ಮತ್ತ ನಾದ ದುರುಳ ದೈತ್ಯನ ವಚನಗಳನ್ನು ಕಿವಿಗೆ ಹಾಕಿಕೊಳ್ಳಲೇ ಇಲ್ಲ ಭಾಗವ ತೋತ್ತಮನಾದ ಪ್ರಹ್ಲಾದ ಶ್ರೀ ಹರಿಯೇ ಸರ್ವೋತ್ತಮನೆಂದು ಬಾರಿ ಬಾರಿಗೆ ಘೋಷಿಸಿದನು, **ಈಶ ಅಹೀಶ ವಾಣೀಶಾದ್ಯರೆಲ್ಲರು** = ರುದ್ರ, ಸರ್ವಶ್ರೇಷ್ಠರಾದ ಶೇಷ ದೇವರು, ವಾಣೀ ಪತಿಯಾದ ಶ್ರೀ ಬ್ರಹ್ಮ ದೇವರು. ಇತ್ಯಾದಿ ಸಮಸ್ತರೂ ಶ್ರೀಶನಿಗೆ ದಾಸಾನುದಾಸರೆಂದು ನುಡಿ ದಿದ್ದಾನೆ. (ಈಶ-ಈಶಾನ್ಯ ದಿಕ್ಕಿನ ದಿಕ್ಪಾಲಕರಾದ ಶ್ರೀ ಮಹರುದ್ರ ದೇವರು. ಅಹಿ–ಸರ್ಪ ಅಹೀಶ-ಸರ್ಪರಾಜರಾದ ಶ್ರೀ ಶೇಷದೇವರು), **ಕಳ್ಳ ಕೇಳಲು** = ವಂಚಕನಾದ ಹಿರಣ್ಯ ಕಶಿಪು (ತನ್ನನ್ನೇ ದೇವರೆಂದು ಹೇಳ

**ಬೇಕೆಂಬ** ಹಠದಿಂದ ಆತ್ಮ ವಂಚಕನಾಗಿದ್ದಾನೆ), **ಏಕೋ ಭಾವದಲ್ಲಿ**= ಒಂದೇ ಮನಸ್ಸಿನಿಂದ, **ಭಕ್ತ ಸಂಜೀವ**= ಭಾಗವತೋತ್ತಮರಾದ ಪ್ರಹ್ಲಾದರಾಜರು, **ಬಾಯಲ್ಲಿ ಶಸ್ತ್ರವನಿಕ್ಕಿ**= ಹರಿಯೇ ಪರದೈವತೆ-ಎಂದು ಹೇಳುತ್ತಿದ್ದ ಬಾಲ ಪ್ರಹ್ಲಾದನ ಬಾಯಿಯಲ್ಲಿ ಹರಿತವಾದ ಅಸ್ತ್ರಗಳನ್ನಿಟ್ಟು ಚುಚ್ಚಿದ್ದಾರೆ.

**ಸ್ವರ್ಣಕಶಿಪು** = ಹಿರಣ್ಯ ಕಶಿಪು, **ಚಿಂತಾರ್ಣವದೊಳು**= ಚಿಂತಾ ಸಮುದ್ರದಲ್ಲಿ ಮುಳುಗಿದ ದುರುಳ ದೈತ್ಯ, **ನಿರ್ಣಯಕಾಣ ವಿವೇಕಾ** = ಏನು ಮಾಡಬೇಕೆಂಬುದೇ ಬುದ್ಧಿಗೆ ಹೊಳೆಯಲಿಲ್ಲ (ಕಿಂಕರ್ತವ್ಯ ಮೂಢನಾದ), **ಕಾದೆಣ್ಣೆ ಕುದಿವ ಪರಿ**= ಬಾಣಲೆಯಲ್ಲಿ ತರ ತರನೆ ಕುದಿಯುತ್ತಿರುವ ಎಣ್ಣೆಯಂತೆ ದಾನವನ ಮನಸ್ಸು ಕುದಿಯತೊಡಗಿ ತಲ್ಲಣಿಸಿತು, **ಘನ್ನ ಘಾತುಕನ ಕುಲವಾ**= ಎಲೈ ಪ್ರಹ್ಲಾದನೇ ! ನೀನು ನನ್ನ ವಂಶದಲ್ಲಿ ಕೆಡುಕನಾಗಿ ಜನಿಸಿರುವ ನೀನೊಬ್ಬ ಕುಲ ಘಾತುಕ-ಎಂದು ನುಡಿದ ದೈತ್ಯ, **ಪನ್ನಗಾಭರಣನ** = ನೀನು ಹರಿಯ ಚಿಂತೆಯನ್ನು ಬಿಟ್ಟು ಸರ್ಪಭೂಷಣನಾದ ರುದ್ರನನ್ನು ಸೇವಿಸು ಆತನೇ ಪರನೆಂದು ಹೇಳು-ಎಂದು ಒತ್ತಾಯಿಸಿದ, **ಸುರವೃಂದ ವಂದಿತನು** = ಸಕಲ ದೇವತಾವರ್ಗದಿಂದ ಸಂಸೇವ್ಯ ಮಾನನಾದ ಇಂದಿರಾ ಪತಿಯು ಸರ್ವತ್ರ ವ್ಯಾಪ್ತನಾಗಿದ್ದಾರೆ. ಆತನಿಲ್ಲದ ತಾಣವಿಲ್ಲ-ಎಂದಿದ್ದಾನೆ ದಿಟ್ಟ ಬಾಲಕ.

**ಆರ್ಭಟೆ ಖತಿಯಿಂದಲಿ ಒಡೆಯೆ** ಮಹಾ ರೋಷಾನ್ವಿತನಾಗಿ ಆರ್ಭಟಿಸುತ್ತಾ, ಸಭಾ ಮಂದಿರದ ಸ್ತಂಭವನ್ನು ಒಡೆಯಲಾಗಿ, **ಸರಸಿಜಾಂಡವು ನಡುಗೇ**= ಇಡೀ ಬ್ರಹ್ಮಾಂಡವೇ ಕಂಪಾಯಮಾನವಾಗುತ್ತಿರಲು (ಸರಸಿಜ-ಕಮಲ ಸರಸಿಜ = ನಾಭೀಕಮಲ ಸಂಜಾತರಾದ ಶ್ರೀ ಬ್ರಹ್ಮದೇವರು. ಸರಸಿಜಜಾಂಡ = ಬ್ರಹ್ಮಾಂಡ), **ಕೆನ್ನುಡಿಗೇ**= ಮುಂಗೂದಲು, **ಕರವಿರಿಸಿ**= ದುರುಳ ಹಿರಣ್ಯ ಕಶಿಪುವಿನ ಮುಂಗೂದಲನ್ನು ತನ್ನ ಮುಷ್ಟಿಯಿಂದ ಹಿಡಿದು, ಎಳೆದು ಭೂಮಿಗೆ ಕೆಡವಿದನು, **ಬಿರಿದೊರಸಿ ಬೀರುತ**= ಎಳೆದೆಳೆದು ಭೂಮಿಗೆ ಅವನ ದೇಹವನ್ನು ಅಪ್ಪ-

ಳಿಸಿ, **ಕರದ ಕೂಗುರಿಂದ**= ತನ್ನ ಎರಡು ಕೈಗಳ ಹತ್ತು ಬೆರಳುಗಳ ಉಗುರಿನ ಚೂಪಾದ ತುದಿಗಳಿಂದ (ನಖಾಗ್ರದಿಂದ), **ಪೆರವೋದಾರದಲ್ಲಿ** =ಅತ್ಯಂತ ವೈಭವದಿಂದ ದುರುಳನ ಉದರ ಬಗೆದು, ಅವನ ಕರುಳನ್ನು ತನ್ನ ಕತ್ತಿನಲ್ಲಿ ಹಾಕಿಕೊಂಡ ಪ್ರಸಂಗ ವಿಶೇಷ.

**ಅಜಭವ**=ಬ್ರಹ್ಮದೇವರು-ರುದ್ರದೇವರು, **ಸುರಪಾ ಮುಖ್ಯ**= ಅಮರಾಧಿಪತಿಯಾದ ಇಂದ್ರದೇವರೇ ಮೊದಲಾದ, **ಸುರಸಿದ್ಧ ಮುನಿ**= **ದೇವತೆಗಳು**-ಸಿದ್ಧರು-ಋಷಿವರ್ಯರು, **ವಾಯು ಧನಪಾ**= ಪ್ರವಾಹ ವಾಯು-ಕುಬೇರ ಇತ್ಯಾದಿ, **ಗಂಧರ್ವ ಕ್ಷಿತಿಪಾ**= ದೇವ ಮಾನವ ಗಂಧರ್ವರು, ಚಕ್ರವರ್ತಿಗಳೂ ಇತ್ಯಾದಿ (ದೇವ-ಋಷಿ-ಪಿತೃ-ಗಂಧರ್ವ-ಕ್ಷಿತಿಪರೆಂಬ ಪಂಚವಿಧ ಜೀವರು), **ಪರಿಯ ಪರಿಯ** = ಶ್ರೀ ಹರಿಯ ಈ ವಿಚಿತ್ರವಾದ ವ್ಯಾಪಾರವನ್ನು.

**ಆಶ್ಚರಿಯವೆನುತ**= ಅತ್ಯದ್ಭುತ-ಅತ್ಯಾಶ್ಚರ್ಯ-ಎಂದೆನುತ, **ಪುಷ್ಪ ಸುರಿದು**= ಪುಷ್ಪ ವೃಷ್ಟಿ ಸುರಿಸಿದರು, **ನೈಮರದಲ್ಲಿ**= ತಮ್ಮನ್ನು ತಾವೇ ಮರೆತು (ಶ್ರೀ ನರಸಿಂಹನ ದಿವ್ಯದರ್ಶನ ಭಾಗ್ಯದಿಂದ ಪುಳಕಾಂಕಿತರಾಗಿ), **ನೆರೆದು ನಿಂದಿರುವರು** - ಒಟ್ಟಾಗಿ ಸೇರಿ ನಿಂತಿದ್ದಾರೆ.

**ನಿನಗೆ ಅಳುಕದಿಪ್ಪರು** = ನಿನ್ನಲ್ಲಿ ನಿಶ್ಚಲವಾದ ಭಕ್ತಿಯನ್ನು ಮಾಡುವ ಭಗವದ್ಭಕ್ತರು, **ಎನಗೆ ಅಳವಡಲಿಲ್ಲ ಈ ಲೀಲೇ**=ನಿನ್ನ ವೈಭವಯುತವಾದ ಈ ಲೀಲೆಯನ್ನು ವರ್ಣಿಸಲು ನನಗೆಂತು ಸಾಧ್ಯ? **ಬಿರುದಾಂಕ** = ಶರಣಾಗತ ವತ್ಸಲನೆಂಬ ಬಿರುದು ಹೊತ್ತ ಶ್ರೀ ಲಕ್ಷ್ಮೀನರಸಿಂಹಮೂರ್ತಿ (ಸತಂವಿಧಾತುಂ ನಿಜಭೃತ್ಯಭಾಷಿತಂ-ಎಂಬ **ಶ್ರೀಮದ್ಭಾಗವತ ವಚನದಂತೆ**-ಭಕ್ತವತ್ಸಲನೆಂಬ ಬಿರುದು).



## ೪೭

### (ಅಂಕಿತ–ಶ್ರೀವೆಂಕಟೇಶ)

ರಾಗ– ತಾಳ

ನಾರಸಿಂಹಾ–ಶ್ರೀ ನಾರಸಿಂಹಾ
ಪಾರುಗಾಣಿಸಿ-ದುರಿತೌಘ ಹರಿಸಿ-ಕಾಯೋ ॥ ॥ಪ॥

ನರಹರಿ–ಜ್ವರಹರಿ-ಘೋರವ್ಯಾಧಿಯ
ಪರಿಹಾರಗೈಸಿ-ಪರಿಪಾಲಿಸಬೇಕಯ್ಯ ॥ ॥ಅ॥

ಘುಡಿ ಘುಡಿಸುತ-ಪಲ್ಕುಡಿದು-ಚೆಂಡಾಡುತ
ಮೃಡನೆ ಪರನು ಎಂದೂ-ನುಡಿದ ಕಶಿಪುವಿನ
ಒಡನೆ ಕಂಭದಿ ಬಂದು-ಒಡಲ ಬಗೆದು ತನ್ನ
ದೃಢ ಭಕುತಿಗೆ ಬಂದೆಡರ ಬಿಡಿಸಿದೆ-ನಾರಸಿಂಹಾ ॥ ॥೧॥

ತುಷ್ಟಿ ಪಡಿಸೋ–ಪರಮೇಷ್ಠಿಯ ಪಿತ ನಿನ್ನ
ದೃಷ್ಟಿಯಿಂದ-ಅನಿಷ್ಟ ನಿವಾರಣ
ಅಷ್ಟ ಕರ್ತೃತ್ವದ ಪ್ರಭೋ-ಕಷ್ಟ ಹರಿಸಿ-ಭಕ್ತ
ರಿಷ್ಟ ಪಾಲಿಪ-ಸರ್ವಸೃಷ್ಟಿಗೊಡೆಯ-ದೇವಾ-ನಾರಸಿಂಹಾ ॥ ॥೨॥

ಸಂಕಟ ಹರಿಸೋ-ಈ ಭವ ಕಂಟಕದಿಂದ ಶ್ರೀ
ವೆಂಕಟೇಶಾತ್ಮಕ–ಭೀಕರ ರೂಪ
ಶಂಕರಾತರ್ಗತ-ಸಂಕರುಷಣ ಮೂರುತೇ
ಮಂಕು ಹರಿಸಿ-ಪಾದ ಪಂಕಜ ತೋರೋ ॥ ॥೩॥

**ಪ್ರಸಂಗ ವಿಶೇಷ :–**

ಪ್ರಕಾಶಕರಾದ ಶ್ರೀ ಎಚ್. ಎಸ್. ಶ್ರೀನಿವಾಸಮೂರ್ತಿಗಳ ಪಿತರಾದ ಕೀರ್ತಿಶೇಷ ಶ್ರೀ ಎಚ್. ಹೊಳೆನರಸೀಪುರದ ಶ್ಯಾಮರಾಯರು ಶ್ರೀ ಉರಗಾದ್ರಿ ವಾಸವಿಠ್ಠಲಾಂಕಿತ ದಾಸವರೇಣ್ಯರ ಪ್ರಪ್ರಥಮ ಶಿಷ್ಯರು. ಕ್ರಿ. ಶ. ೧೯೩೦ ನೆಯ ಇಸವಿಯಲ್ಲಿ ಸನ್ಮಾನ್ಯ ಶ್ರೀ ಶ್ಯಾಮರಾಯರಿಗೆ ವಿಷಮ ಶೀತ ಜ್ವರ ಬಂದು, ೩೧ ದಿನಗಳ ಕಾಲ ದಿನ ದಿನಕ್ಕೆ ಏರುತ್ತಿದ್ದ ಜ್ವರದ ತಾಪದಿಂದ ಬಳಲುತ್ತಿದ್ದರು. ಆಗಿನ ಕಾಲದಲ್ಲಿ ಈಗಿರುವಂತೆ ರೋಗ ಪರಿಹಾರಕ ಔಷಧಿಗಳಿರಲಿಲ್ಲ. ಅವರ ಚಿಕಿತ್ಸೆಯನ್ನು ಕೈಕೊಂಡಿದ್ದ ಸುಪ್ರಸಿದ್ಧ ವೈದ್ಯರು ನಿರಾಶರಾದರು. ಆಗ ನಮ್ಮ ಪೂಜ್ಯ ಗುರುವರ್ಯರು. ಒಂದು ಇಡೀ ದಿನ ಉಪವಾಸವಿದ್ದು, ಅವರ ಕುಲದೈವನಾದ ಶ್ರೀನಿವಾಸನ ಉಪಾಸನೆಯಲ್ಲಿ ಉದ್ಯುಕ್ತರಾಗಿದ್ದರು.

ರೋಗ ಆರಂಭವಾದಾಗಿನಿಂದ ೩೦ನೆಯ ದಿನ ರಾತ್ರಿ ಮೇಲ್ಕಂಡ ಕೀರ್ತನ ಸಾಹಿತ್ಯವನ್ನು ರಚಿಸಿ, ದೇವರ ಮಂದಾಸನದ ಮುಂದೆ ಇಟ್ಟು, ಸಕಲ ದುರಿತ ಪರಿಹಾರಕನಾದ ಶ್ರೀ ನರಸಿಂಹ ದೇವರನ್ನು ಏಕಾಗ್ರ ಚಿತ್ತದಿಂದ ಪ್ರಾರ್ಥನೆಗೈದು. ಅದೇ ರಾತ್ರಿ ಸುಮಾರು 9-00 ಘಂಟೆಗೆ ನಮ್ಮ ಮನೆಗೆ ಬಂದು, ಜ್ವರದ ತಾಪದಿಂದ ಬಳಲುತ್ತಾ ಜ್ಞಾನಾವಿಹೀನ ಸ್ಥಿತಿಯಲ್ಲಿದ್ದ ನಮ್ಮ ತಂದೆಯವರ ತಲೆ ದಿಂಬಿನ ಕೆಳಗಿಟ್ಟು, ಅವರ ತಲೆಯ ಮೇಲೆ ಮಂತ್ರಾಕ್ಷತೆ ಕಾಳುಗಳನ್ನು ಹಾಕಿ, ಶ್ರೀ ನರಸಿಂಹ ಸ್ತೋತ್ರವನ್ನು ಪಠಿಸಲಾರಂಭಿಸಿದರು. ಮಧ್ಯ ರಾತ್ರಿಯ ಸಮಯ.

ಶ್ರೀ ಶ್ಯಾಮರಾಯರ ದೇಹಾದ್ಯಂತ ಬೆವರುಸೂಸಿ, ಬೆಳಗಿನ ಝಾವ ಮೆಲ್ಲನೆ ಕಣ್ಣು ಬಿಟ್ಟರು. ಅಂದಿನಿಂದ ಅವರ ಆರೋಗ್ಯ ಕ್ರಮ ಕ್ರಮವಾಗಿ ಸುಧಾರಿಸಿತು. ವೈದ್ಯರು ಮಾಡಲಾರದ್ದನ್ನು ದೈವ ಶಕ್ತಿಯಿಂದ ಮಾಡಿ ತೋರಿಸಿದ ಪರಮ ಜ್ಞಾನಿಗಳು. ಶ್ರೀ ತಂದೆ ಮುದ್ದು ಮೋಹನ ವಿಠ್ಠಲಾಂಕಿತ ದಾಸವರ್ಯರಿಂದ (ದೇವರಾಯನ ದುರ್ಗ) ಅಂಕಿತೋಪ-

ದೇಶಕ್ಕಿಂತ ಮುಂಚೆ, ತಮ್ಮ ಕುಲ ದೈವನೂ, ಇಷ್ಟ ದೈವನೂ ಆದ ಶ್ರೀ ಸಪ್ತಗಿರಿ ನಿವಾಸನ ಹೆಸರಿನಲ್ಲಿ **"ಶ್ರೀ ವೆಂಕಟೇಶ"**-ಎಂಬ ಮುದ್ರಿಕೆಯಿಂದ ನೂರಾರು ಕೀರ್ತನೆಗಳನ್ನು ರಚಿಸಿದ್ದರು. "ಉರಗಾದ್ರಿವಾಸ ವಿಠ್ಠಲ"-ಎಂಬ ಅಂಕಿತೋಪದೇಶವಾದ ನಂತರ, ಹಿಂದಿನ ಕೀರ್ತನ ಸಾಹಿತ್ಯಕ್ಕೆ ಇನ್ನೆರಡು ನುಡಿಗಳನ್ನು ಸೇರಿಸಿ, ಅಂಕಿತನಾಮದಿಂದ ಮುಕ್ತಾಯಗೊಳಿಸಿದರು.

ಪ್ರಸಕ್ತ ಕೀರ್ತನ ಸಾಹಿತ್ಯವು ಸರ್ವ ದುರಿತ ಪರಿಹಾರಕ ರೂಪನೂ, ಮೃತ್ಯುವಿಗೆ ಮೃತ್ಯು ಸ್ವರೂಪನೂ ಆದ **ಶ್ರೀ ಲಕ್ಷ್ಮೀನರಸಿಂಹ ದೇವರ ಪದವಾದ ಸ್ತೋತ್ರ.** ಸಾಹಿತ್ಯಾರ್ಥ ಗಂಭೀರವಾಗಿದೆ. ಅಷ್ಟೇ ತತ್ತ್ವಾರ್ಥ ಬೋಧಕವಾಗಿದೆ.

**ನಾರಸಿಂಹಾ**=ಈ ಶಬ್ದಕ್ಕೆ ಶ್ರೀ ಪರಮಾತ್ಮನ ಸರ್ವೋತ್ತಮತ್ವವನ್ನು ಅನಂತ ಕಲ್ಯಾಣ ಗುಣತ್ವವನ್ನು ಸೋಲಿಸುವುದು. ಅರಾ–ಅಂದರೆ ದೋಷಗಳು. ನಾರ-ಎಂದರೆ, ನಿಷೇದಾರ್ಥದಲ್ಲಿ ನಿರ್ದೋಷ ಎಂದರ್ಥ. ದೋಷ ಲವಲೇಶ ಸಂಪರ್ಕವಿಲ್ಲದಿರುವ ಶ್ರೀ ಹರಿಯು ಸರ್ವ ದೋಷ ವಿವರ್ಜಿತನು. ಅಂದರೆ, ಅನಂತ ಕಲ್ಯಾಣ ಗುಣಗಣಪೂರ್ಣನು. "ಸಿಂಹ"ವು ಮೃಗರಾಜ. ಇದರಿಂದ ಸರ್ವೋತ್ಕೃಷ್ಟನೆಂದು ಅರ್ಥವಾಗುವುದು. "ನಾರ ಸಿಂಹ"ನೆಂದರೆ, ಸರ್ವೋತ್ತಮನೂ, ಸರ್ವದೋಷ ವಿವರ್ಜಿತನೂ, ಅನಂತ ಶುಭಗುಣಗಣ ಸಾಗರನೂ ಆದ ಶ್ರೀ ಮನ್ನಾರಾಯಣನೆಂದು ತಾತ್ಪರ್ಯ.

**ದುರಿತೌಘ ಹರಿಸಿ** ದುರಿತ (ಪಾಪ)ಗಳೆಂಬ ಸಮೂಹವನ್ನು ನಿವಾರಿಸಿ ದುಷ್ಕರ್ಮಗಳ ಫಲವಾಗಿ ಪಾಪ ಪ್ರಾಪ್ತಿ. ಅದರ ಫಲವೇ ರೋಗಾದ್ಯುಪದ್ರವಗಳು. ಅದನ್ನು ಪರಿಹರಿಸೆಂದು ಪ್ರಾರ್ಥಿಸಿದ್ದಾರೆ, **ನರಹರಿ** =ನರ-ಮಾನವರೂಪ. ಹರಿ=ಸಿಂಹವದನ. ಅಂದರೆ "ನರಸಿಂಹ" ನೆಂದರ್ಥ, **ಜ್ವರಹರಿ**=ಅಂತಹ ನರಸಿಂಹನೇ ಜ್ವರ ಪರಿಹಾರಕನು ದುಸ್ತರ

ವಾದ ಸಂಸಾರವೆಂಬ ರೋಗವನ್ನು ಪರಿಹರಿಸುವ ಭವರೋಗ ಭೇಷಜನು, **ಪರಿಪಾಲಿಸಬೇಕಯ್ಯ** = ಇವನನ್ನು ಈ ಘೋರ ವ್ಯಾಧಿಯಿಂದ ಪರಿಹಾರ ಮಾಡಿ ಸಂರಕ್ಷಿಸಬೇಕೆಂದು ಪ್ರಾರ್ಥನೆ, **ಘುಡಿ ಘುಡಿಸುತ** = ಶ್ರೀ ನರ-ಸಿಂಹಾವತಾರದ ವೈಭವ, ಘೋರರೂಪ ತಾಳಿ, ಆರ್ಭಟಿಸುತ್ತಾ ಸಭಾ ಮಂದಿರದ ಸ್ತಂಭವನ್ನು ಸೀಳಿಕೊಂಡು ಹೊರ ಬಿದ್ದ ಮಂಗಳಮೂರ್ತಿ ನರಸಿಂಹನು, **ಪಲ್ಕಡಿದು** = ಕಟಕಟನೆ ಹಲ್ಲುಗಳನ್ನು ಕಡಿಯುತ್ತಾ, **ಚೆಂಡಾಡುತ** = ಚೆಂಡಿನಂತೆ ಪುಟಿಯುತ್ತಾ ಹಾರುತ್ತಾ, ಕುಪ್ಪಳಿಸುತ್ತಾ, **ಮೃಡನೆ ಪರನು ಎಂದೂ** ಮೃಡನಾಮಕನಾದ ಶ್ರೀ ರುದ್ರದೇವರೇ ಸರ್ವೋತ್ತಮನೆಂದು ಸಾರುತ್ತಿದ್ದ ದುರುಳ ಹಿರಣ್ಯ ಕಶಿಪು, **ಒಡಲ-ಬಗೆದು** = ಹಿರಣ್ಯ ಕಶಿಪುವಿನ ದೇಹವನ್ನು ಎರಡು ತೊಡೆಗಳ ಮೇಲೆ ಹಾಕಿ ಕೊಂಡು, ಅವನ ಉದರವನ್ನು ಸೀಳಿ ಬಗೆದು ಸಂಹರಿಸಿದ ರುದ್ರ ಪ್ರಸಂಗ, **ದೃಢಭಕುತಗೆ** ತನ್ನನ್ನೇ ದೃಢವಾಗಿ ನಂಬಿ, ಸರ್ವತ್ರ ವ್ಯಾಪ್ತನೆಂದು ಭಜಿಸುತ್ತಿದ್ದ ಭಾಗತೋತ್ತಮನಾದ ಬಾಲ ಪ್ರಹ್ಲಾದನ, **ಬಂದ ಎಡರ ಬಿಡಿಸಿದೆ** = ತಂದೆಯಿಂದ ಒದಗಿ ಬರುತ್ತಿದ್ದ ಆಪತ್ತನ್ನು ಪರಿಹರಿಸಿ, ಸಂರ-ಕ್ಷಿಸಿದ ಮಹಾಪ್ರಭು ಶ್ರೀ ನರಸಿಂಹ.

**ತುಷ್ಟಿಯು ಪಡಿಸೋ** ನನಗೆ ಆನಂದವನ್ನು ನೀಡು, **ಪರ-ಮೇಷ್ಠಿಯು ಪಿತ ನಿನ್ನ** = ಬ್ರಹ್ಮದೇವರ ತಂದೆಯಾದ ನಿನ್ನ (ಶ್ರೀ ಹರಿಯ ನಾಭೀಕಮಲ ಸಂಜಾತರಾದ ಬ್ರಹ್ಮದೇವರಿಗೆ ಶ್ರೀ ಹರಿ ತಂದೆ), **ಅನಿಷ್ಟ ನಿವಾರಣ** = ನಿನ್ನ ಕೃಪಾ ದೃಷ್ಟಿ ಮಾತ್ರದಿಂದಲೇ ಜೀವರಿಗೆ ಬರುವ ಸಕಲ ವಿಪತ್ತುಗಳು, ಪಾಪಗಳು ಪರಿಹಾರವಾಗುವುವು, **ಅಷ್ಟ ಕರ್ತೃತ್ವದ-ಪ್ರಭೋ** = ಜಗತ್ತಿನ ಸೃಷ್ಟಿ-ಸ್ಥಿತಿ-ಲಯ-ನಿಯಮನ-ಜ್ಞಾನ-ಅಜ್ಞಾನ-ಬಂಧ-ಮೋಕ್ಷಗಳೆಂಬ ಎಂಟು ವಿಧವಾದ ಕರ್ತೃತ್ವವುಳ್ಳ ಜಗತ್ಸ್ವಾಮಿಯೇ, **ಕಷ್ಟ ಹರಿಸಿ** = ನನ್ನ ಶಿಷ್ಯನಿಗೆ ಈಗ ಒದಗಿರುವ ವಿಪತ್ತನ್ನು ಪರಿಹರಿಸಿ, **ಭಕ್ತರ ಇಷ್ಟವ ಪಾಲಿಪ** = ಭಕ್ತರ ಮನೋಭೀಷ್ಟಗಳನ್ನು ಸಲ್ಲಿಸುವ, **ಸರ್ವಸೃಷ್ಟಿಗೊಡೆಯ** = ನಿನ್ನಿಂದ ಸೃಷ್ಟವಾದ ಸಕಲ ಚರಾಚರಾತ್ಮಕವಾದ ಸರ್ವ ಜಗತ್ತಿಗೆ ಸ್ವಾಮಿಯಾದವನೇ.

**ಸಂಕಟ ಹರಿಸೋ** = ಶಿಷ್ಯನಿಗೆ ಈಗ ಒದಗಿರುವ ದುಃಖವನ್ನು ಪರಿಹಾರ ಮಾಡು, (ಪ್ರಸಂಗಾರ್ಥ). ವಿಶಾಲಾರ್ಥದಲ್ಲಿ ಭವ ಜನಿತ ದುಃಖವನ್ನು ಪರಿಹರಿಸು, **ಈ ಭವ ಕಂಟಕದಿಂದಲಿ** = ಸಂಸಾರವೆಂಬ ಮುಳ್ಳಿನ ಜಾಲದಿಂದ ಮುಳ್ಳು ಚುಚ್ಚಿದರೆ ಶರೀರಕ್ಕೆ ಬಾಧೆಯಾಗುವುದು. ಅಂತೆಯೇ ಸಂಸಾರದಿಂದ ಜನಿತ ದುಃಖಗಳು ಮುಳ್ಳಿನ ಸದೃಶ (ಕಂಟಕ), **ಭೀಕರ ರೂಪ** = ರುದ್ರ ರೂಪೀ, ಶ್ರೀ ಹರಿಯು ಸೌಮ್ಯ ವದನನು. ಪರಮ ಸುಂದರ ಮಂಗಳವಿಗ್ರಹನು ಇಲ್ಲಿ ದುರುಳನಾದ ಹಿರಣ್ಯ ಕಶಿಪುವಿನ ಸಂಹಾರಕ್ಕಾಗಿ ಅವನ ಎದೆ ತಲ್ಲಣಿಸುವಂತೆ ಭೀಕರರೂಪ ದರ್ಶನ ಮಾಡಿಸಿದ, **ಶಂಕರಾಂತರ್ಗತ** = ಶ್ರೀ ಮಹರುದ್ರದೇವರ ಉಪಾಸನಾಮೂರ್ತಿ ಸಂಕರ್ಷಣಾಭಿನ್ನ ಶ್ರೀ ಲಕ್ಷ್ಮೀನರಸಿಂಹ ಶ್ರೀ ಲಕ್ಷ್ಮೀನರಸಿಂಹ ರೂಪ ಲಯ ಕಾರಕ ರೂಪ. ರುದ್ರಾಂತರ್ಗತ ನಾರಸಿಂಹನೇ ಜಗತ್ತನ್ನು ಲಯಗೊಳಿಸುವನು, **ಮಂಕು ಹರಿಸಿ** = ಈಗಿನ ದುಗುಡದಿಂದ ಉಂಟಾಗಿರುವ ಮನಸ್ಸಿನ ಕಳವಳವನ್ನು ಪರಿಹರಿಸು, **ಪಾದ ಪಂಕಜ ತೋರೋ** = ನಿನ್ನ ಚರಣ ಕಮಲಗಳ ದರ್ಶನ ಭಾಗ್ಯವನ್ನು ನೀಡೆಂದು ದಾಸಾರ್ಯರು ಸಕಲ ವಿಪತ್ತು ಪರಿಹಾರಕ ರೂಪನಾದ ಶ್ರೀ ಲಕ್ಷ್ಮೀನರಸಿಂಹನಲ್ಲಿ ಪ್ರಾರ್ಥಿಸಿರುತ್ತಾರೆ.



## ೪೮

### (ಅಂಕಿತ–ಉರಗಾದ್ರಿವಾಸವಿಠ್ಠಲ)

**ರಾಗ–ಶಂಕರಾಭರಣ** **ಆದಿತಾಳ**

ಗುಂಜಾ ನರಸಿಂಹಾ-ಪಾಹಿ–ಮಾಂ ಪಾಹಿ ॥ ॥ಪ॥

ಅಜಭವ ಫಣಿದ್ವಿಜರಾಜ ಸುಪೂಜಿತ
ತ್ರಿಜಗದೊಡೆಯ ನರಹರಿಯೆ–ದುರಿತ ಹರೇ ॥ ॥ಅ॥

ಪಟುತರಬಾಧೆ ಸಂಕಟಪಡುತಲಿ-ಸುರ
ಕಟಕ ನುತಿಸೆ ಕೋಟಿ ತಟಿತ್ಕಾಯನ
ತೊಟ್ಟೀ–ಖಳರೆದೆ ಕುಟ್ಟೀ-ಯಮಪುರಿ
ಗಟ್ಟೀ-ದಿಟ್ಟತನದಲಿ ನಿಶಾಚರನಳುಹಿದ ॥ ಗುಂಜಾ ನರಸಿಂಹಾ ॥ ॥೧॥

ಸಿಡಿಲೋಪಮ ಘುಡಿ ಘುಡಿಸುತ-ಕಿಡಿಯ
ಕಡೆಗಣ್ಣಿಂದಲಡಿಗಡಿಗುಳುತ
ಕೂಡೀ-ನಖಗಳ ನೀಡೀ–ಶಿರವನ
ಲ್ಲಾಡೀ-ಜಡ ಜಂಗಮ ನಡುಕ ಬಿಡಿಸಿದೆಯೋ ॥ ಗುಂಜಾ
ನರಸಿಂಹಾ ॥ ॥೨॥

ಅಡಿಗಡಿಗೆಡರನು ಪಡುತಿಹ ಹುಡುಗನ
ದೃಢತರ ಭಕುತಿಯ ನುಡಿಯನು ಕೇಳುತ
ನೋಡೀ- ಅಭಯವ ನೀಡೀ–ನೀ ದಯ
ಮಾಡೀ–ಬಿಡಗಣ್ಣರನು ಬಿಡದೆ ಸಲಹಿದೆಯೋ ॥ ಗುಂಜಾ ನರಸಿಂಹಾ ॥
॥೩॥

ಕಾಳ ರಕ್ಕಸರ ಬಾಧೆಗಳಿಂದ
ಗೋಳಾಡುತನಿನ್ನಡಿಗಳ ಸ್ತುತಿಸೇ
ಕೇಳೀ-ಹರುಷತ ತಾಳೀ-ದನುಜರ
ಧೂಳೀ ಪಟಮಾಡಿ ನಲಿದು ನಿಂದಾಡಿದೆ ॥ ಗುಂಜಾ ನರಸಿಂಹಾ ॥
॥೪॥

ಸಿಂಧುಶಯನ ಭವ ಬಂಧ ವಿಮೋಚಕ
ಇಂದಿರೆಯರಸ ಶ್ರೀ ವೆಂಕಟೇಶ ನೀ

ಬಂದೂ-ಸ್ತಂಭದಿ ನಿಂದೂ-ಭಕುತರ
ಬಂಧೂ–ಸುರವೃಂದಕೆ ಆನಂದವ ನೀಡಿದ ॥ ಗುಂಜಾ ನರಸಿಂಹಾ ॥ ॥೫॥

ಕಡಲುಗಳೀಳಡಿಗಡಿಗುಕ್ಕುತ
ಉಡುಗಣಗಳು ಪಥತಪ್ಪಿ ಬೀಳುತಿರೆ
ದಾಡೀ–ಕುಣಿದಾಡೀ–ಸ್ಮಶ್ರುಗಳ
ತೀಡೀ-ಬಡಬಾಲಲ್ಲಾಡಿಸಿ ನಿಂಥಾ ॥ ಗುಂಜಾ ನರಸಿಂಹಾ ॥ ॥೬॥

ಪರಿಹರಿಸುರರವಯುವಗಳನು ಧರಿಸಿ ।
ಉರುತರ ಕ್ರೀಡೆಯ ಮಾಡಿ ಪ್ರಳಯದಿ ।
ತೋರೀ-ದಿಕ್ಕರಿತಾಳೀ-ಹರುಷದಿ ।
ಕೇಳಿ–ಯೋಳು ಉರಗಾದ್ರಿವಾಸವಿಠ್ಠಲ ನೀನೆಂದೆಯೋ ॥ ॥೭॥



## ೪೭

### (ತಂದೆ ವೆಂಕಟೇಶ ವಿಠ್ಠಲಾಂಕಿತ)

### ಶ್ರೀ ನಾರಸಿಂಹ ಪಂಚಕ

### ಅಶ್ವಧಾಟಿ

ಶ್ರೀ ನಾರಸಿಂಹ ಜಯ । ದಾ ನಾರಸಿಂಹ ಭಯ । ಹಾ ನಾರಸಿಂಹ
ದ ಯಿತಾ ।
ದೀನಾರ್ತ ದಿವಿಜತರು । ವಾನಾರವಾಹ ವೈ । ಶ್ವಾನಾರ ಲೋಚನಮಿತಾ ।
ಭೂ ನಾಕ ಸರ್ವಲೋ । ಕಾನಾಮಯ ಕೃತ ವಿ । ಧಾನಾದ್ಭುತಾತ್ಮ
ಚರಿತಾ ।
ಶ್ರೀ ನಾರಿ ಭೂಮಿ ದು । ರ್ಗಾನಾಮ್ಯ ಚರಣ ಮ । ಧ್ವನಾಥ ಮೋದ
ಭರಿತಾ ॥೧॥

ಶರಣ ಪ್ರಹ್ಲಾದ ಉ । ದ್ಧರಣಾರ್ಥ ಮಾಸ ಭಾ । ವರಣ ಸನ್ನಿಹಿತ
ಮಹಿತಾ ।

ಹಿರಣ್ಯಕೋನ್ಮತ್ತ ಸಂ । ಹರಣ ಕೇವಲ ಶಕ್ತಿ । ಸ್ಫುರಣ
ಪ್ರದರ್ಶನರಥಾ ।
ತರುಣಾರ್ಕಶತ ಪ್ರಭಾ । ವರಣಾಮಿತೋಜ್ವಲಿತ । ಕಿರಣಾವಳೀ
ಪರಿವೃತಾ ॥
ಹರಣ ಮರಣದ್ಯಬ್ಧಿ । ತರುಣಿ ಲಾಲಿತ ವನಜ । ಚರಣಾಭಿ
ಭಿನ್ನ ಚರಿತಾ ॥೨॥

ಶಿಕ್ಷ ರಕ್ಷಕ ಅಂತ । ರಿಕ್ಷಾಪಗಾಮಲ । ಪ್ರಕ್ಷಾಳಿತಾಂಘ್ರಿ ಕಮಲಾ ।
ಋಕ್ಷ ಜಾಮಾತ ಸ್ವ । ರ್ಣಾಕ್ಷಾಗ್ರಜಾರಿ ಹ । ರ್ಯಾಕ್ಷಾನನೋಗ್ರ
ಪ್ರಬಲಾ ।
ವಕ್ಷಸ್ಥ ಶ್ರೀ ಸಹ । ಸಾ್ರಕ್ಷಾದಿ ಸುರನಿಕರ । ಪಕ್ಷಸುವ್ಯಸನ ಶೀಲಾ ।
ತ್ರ್ಯಕ್ಷಶರ ಹನುಮ ತಾ । ರಕ್ಷವಾಹನ ದುರಿತ । ಕಕ್ಷಾಗ್ನಿ ಮೂಲ
ನಿಖಿಳಾ ॥೩॥

ರಂಗಾ ಪದಾವಳಿ ವಿ । ಭಂಗಾ ಸು ಕರುಣಾಂತ । ರಂಗಾ
ಮನೋಜ್ಞ ವಿಭವಾ ।
ಗಂಗಾಪತೀ ನಿಲಯ । ಭೃಂಗಾಯಕೃತ ಮೌನಿ । ಪುಂಗಾತುಳಾಂಘ್ರಿ
ಕ ಭವಾ ।
ಸಂಗಾತಿ ದಾರಿದ್ರ್ಯ । ಸಂಘಾಗ್ನಿ ಚರ್ಯ ವೇ । ದಾಂಗಾದಿ ವೇದ
ಪ್ರಭವಾ ।
ಭೃಂಗಾರ ಕಶ್ಯಪ ಮ । ದಾಂಗಾರ ವಿದ್ಯುನ್ನಿಭ । ತುಂಗಾಭಿರಾಮ
ಸುಭವಾ ॥೪॥

ಭೇಶಾಭವಕ್ತ್ರ । ವಿಧಿ ವೀ । ಶೇಶ ತಂದೆ । ವೆಂಕಟೇಶಾಖ್ಯ ವಿಠ್ಠಲ ವಿಜಿತಾ ।
ಮೇಶಾಬ್ಧಿಶಯ ವೇದ । ವ್ಯಾಸಾತ್ರಿಜಾಪ ಮಹೀದಾಸೇಜತಾದಿ ಸ್ವಹಿತಾ ।
ಕ್ಲೇಶಾದಿ ದೋಷಕ ದೂ । ರ್ವಾಸಾದಿ ಮೌನಿ ಹೃ । ದ್ವಾಸಾರ್ತಿ ಭಂಜನ
ಕೃತಾ ।

ದಾಸಾರ್ಯ ಗುರು ಶ್ರೀನಿ । ವಾಸಾರ್ಯ ಪೂಜಿತ ಪಾ । ರಾಶರ್ಯ
ಪಾಹಿ ಸತತಾ ॥೫॥



**ಅರ್ಥವಿವರಣೆ :**

**ಶ್ರೀ ನಾರಸಿಂಹ** = ಕಾಂತಿ ಸಂಪನ್ನಳೂ, ನಿತ್ಯ ಯೌವ್ವನೆಯೂ, ಶುಭಪ್ರದಳೂ ಆದ ಶ್ರೀ ಲಕ್ಷ್ಮೀದೇವಿಯರ ಪತಿಯಾದ ಶ್ರೀ ನರಸಿಂಹ ನಾಮಕನೇ, **ಜಯದಾ** = ಶುಭೋತ್ಸವಗಳನ್ನೂ ಮತ್ತು ಶ್ರೀ ಮನ್ಮಹಾ ಭಾರತ, ಮಹಾ ಪುರಾಣಗಳ ಒಳರಹಸ್ಯವನ್ನು ತಿಳಿಯುವ ಜ್ಞಾನವನ್ನು ಕೊಡುವವನೇ, **ಭಯ** = ಆಧ್ಯಾತ್ಮಿಕ, ಆದಿ ದೈವಕ, ಆದಿ ಭೌತಿಕ ರೂಪವಾದ ಭಯಗಳನ್ನು, **ಹಾ** = ಪರಿಹರಿಸುವವನೇ, **ದಯಿತ** = ಸ್ವರೂಪಾಂತರ್ಗತನಾಗಿ, ಜೀವರುಗಳಿಗೆ ಪತಿ ಎನಿಸುವ ಪ್ರಾಣೇಶ್ವರನಾದ ನಾರಸಿಂಹನೇ (ಘೃಣೇನಾಮಕ ಶ್ರೀ ಪರಮಾತ್ಮ), **ದೀನಾರ್ತ** = ದರಿದ್ರ ಮತ್ತು ದುಃಖಿತರಿಗೆ, **ದಿವಿಜತರು** = ಕಲ್ಪವೃಕ್ಷ ಸದೃಶನಾಗಿರುವ, **ವಾನಾರವಾಹ** = ವಾನರ ಶ್ರೇಷ್ಠನಾದ ಹನುಮಂತನನ್ನು ಉತ್ಸವ ಕಾಲ ಗಳಲ್ಲಿ ವಾಹನವಾಗಿ ಮಾಡಿಕೊಂಡು ಸಂಚರಿಸುವ, ಹಾಗೂ ಅಧ್ಯಾತ್ಮದಲ್ಲಿ ಅನಾದ್ಯನಂತಕಾಲ ಬಿಂಬರೂಪೀ ಪರಮಾತ್ಮನಿಗೆ ಮುಖ್ಯವಾಗಿ ವಾಹನನಾದ ವಾಯು ವಾಹನನಾದ ಶ್ರೀ ನಾರಸಿಂಹನೇ, **ವೈಶ್ವಾನರ ಲೋಚನ** = ಅಗ್ನಿ ನೇತ್ರರಾದ ಶ್ರೀ ರುದ್ರದೇವರಿಂದ, **ನಮಿತ** = ನಮಸ್ಕರಿಸಲ್ಪಟ್ಟ-ವನು, **ಭೂ** = ಭೂಲೋಕ, **ನಾಕ** = ಸ್ವರ್ಗಲೋಕ, **ಸರ್ಪಲೋಕ** = ಪಾತಾಳಲೋಕ-ಈ ತ್ರಿಲೋಕಗಳಲ್ಲಿರುವ ಭಕ್ತರ, **ಆಮಯ** = ರೋಗ ರುಜಿನಾದಿ ಪೀಡೆಗಳು ಪರಿಹಾರ ಮಾಡುವ **(ಅನಾಮಯಕೃತ),** **ವಿಧಾನಾದ್ಭುತಾತ್ಮ ಚರಿತ** = ಅದ್ಭುತವಾದ ಲೀಲಾ ವಿಲಾಸಗಳುಳ್ಳ ಶ್ರೀ ನಾರಸಿಂಹನೇ, **ಶ್ರೀ ಭೂಮಿ ದುರ್ಗಾ** = ಶ್ರೀ, ಭೂ, ದುರ್ಗಾನಾಮಕ ಳಾದ ಶ್ರೀ ಲಕ್ಷ್ಮೀದೇವಿಯರಿಂದ, **ಅನಮ್ಯ ಚರಣ** = ನಮಸ್ಕರಿಸಲ್ಪಟ್ಟ

ಚರಣಗಳುಳ್ಳ, **ಮಧ್ವೇನಾಥ** = ಆಚಾರ್ಯ ಮಧ್ವರ ಪ್ರಭುವಾದ, **ಮೋದ ಭರಿತಾ** = ಆನಂದಮಯನೂ ಮತ್ತು ಮುಕ್ತರ ಆನಂದಕ್ಕೂ ಕಾರಣನಾಗಿದ್ದಾನೆ.

**ಶರಣ ಪ್ರಹ್ಲಾದ** = ಶರಣಾಗತನಾದ ಪ್ರಹ್ಲಾದನನ್ನು, **ಉದ್ಧರ ಣಾರ್ಥ** = ಉದ್ಧರಿಸಬೇಕೆಂದು, ಮತ್ತು ಅವನ ದೃಷ್ಟಾಂತದಿಂದ ಶ್ರೀ ಹರಿಯ ಸರ್ವತಂತ್ರ ಸ್ವತಂತ್ರತ್ವ-ಸರ್ವವ್ಯಾಪ್ತತ್ವ-ಸರ್ವಶಕ್ತಿತ್ವ ಮತ್ತು ಭಕ್ತ ಕ್ಷೇಮ ಪರಾಯಣತ್ವವನ್ನು ಸ್ಥಾಪಿಸುವ ಉದ್ದೇಶದಿಂದ, **ಮಾಸ ಭಾವರಣ** = ಸಾಮಾನ್ಯವಾಗಿ "ಅ"-ಎಂದರೆ ಹಿರಣ್ಯ ಕಶಿಪುವಿನ ರಾಕ್ಷಸ ಸಮೂಹದಿಂದ ತುಂಬಿ ತುಳುಕುತ್ತಿದ್ದ ಸಭಾವರಣವೆಂದು ಆಗುತ್ತವೆ. ಅಲ್ಲದೇ, ಮಾಸ ಭಾವರಣ-ಎಂದರೆ, ಶ್ರೀ ಹರಿಯೇ ಆ ಸಭಾ ಮಧ್ಯದಲ್ಲಿ ಸನ್ನಿಹಿತನಾಗುವುದಕ್ಕೆ ಆ ಸಭಾಸ್ಥಾನ ಮತ್ತು ಅದರ ವಾಸ್ತವ್ಯವೆಲ್ಲವೂ ಜಂಗಮ ಚರ ಯಾವತ್ತೂ ಲಕ್ಷ್ಮ್ಯಾತ್ಮಕವಾಗಿ ಪರಿಣಮಿಸಿದ ಆ ಸಭಾ ವರ ಣದಲ್ಲಿ, **ಸನ್ನಿಹಿತ** ಸನ್ನಿಹಿತನಾದ, (ಪ್ರತ್ಯಕ್ಷನಾದ), **ಮಹಿತಾ** = ಋಜ್ವಾದಿಗಳಿಂದ ಸ್ತುತಿಸಲ್ಪಟ್ಟ, ಶ್ರೀ ನಾರಸಿಂಹನೇ, **ಹಿರಣ್ಯಕೋ-ನ್ಮತ್ತ** = ಹಿರಣ್ಯಾದಿ ಉನ್ಮತ್ತ ಉದ್ಧಟರಾದ ವಿಷ್ಣು ವೈಷ್ಣವ ದ್ವೇಷಿಗಳಾದ ರಾಕ್ಷಸರನ್ನು, **ಸಂಹರಣ** = ಸಂಹಾರ ಮಾಡಿದ, **ಕೇವಲ ಶಕ್ತಿ** = ಕೇವಲ ಜ್ಞಾನ, ಇಚ್ಛಾ, ಕ್ರಿಯಾದಿ ಶಕ್ತಿ, ಪ್ರಬಲತಮವಾದ ಬಲದ, **ಸ್ಫುರಣ** = ಪುಂಖಾನು ಪುಂಖವಾಗಿ ಪ್ರದರ್ಶನ, **ಪ್ರದರ್ಶನ** = ಎಲ್ಲರಿಗೂ ಪ್ರದ-ರ್ಶನಕ್ಕೆ ಎಂದರೆ, ಅನುಭವಕ್ಕೆ ಬರುವಂತೆ ಮಾಡಿದ, **ಕಥಾ** = ಪ್ರಹ್ಲಾದ ಚರಿತ್ರೆ-ಎಂಬ ಕಥೆಗೆ ಕಾರಣನಾದ ಶ್ರೀ ನರಸಿಂಹನೇ, **ತರುಣಾರ್ಕಶತ** = ಆಗ ತಾನೇ ಉದಯವಾಗುತ್ತಿರುವ ನೂರಾರು, ಸಾವಿರಾರು, ಕೋಟ್ಯಂ-ತರ ಸೂರ್ಯರುಗಳ, **ಪ್ರಭಾವರಣ** = ಜಾಜ್ವಲ್ಯ ಮಾನವಾದ, **ಅಮಿತ** = ಅಸಂಖ್ಯಾತವಾದ, **ಉಜ್ವಲಿತ** = ಕಣ್ಣನ್ನು ಕೋರೈಸುವಂತಹ, **ಕಿರ ಣಾವಳೀ** = ಕಿರಣಗಳ ಸಮೂಹದಿಂದ, **ಪರಿವೃತ** = ಆವರಿಸಲ್ಪಟ್ಟ ಶ್ರೀ ನಾರಸಿಂಹನೇ, **ಹರಣ** = ಪ್ರಾಣ ಮತ್ತು ಶರೀರಗಳನ್ನು ಕೊಡುವ,

**ಮರಣ** = ಇವುಗಳಿಂದ ಜೀವರನ್ನು ಹೊರೆತೆಗೆಯುವುದು-ಮುಂತಾದ ಸೃಷ್ಟಿ, ಲಯ ಕಾರ್ಯಗಳನ್ನು ಮಾಡುವಂತಹ, **ಅಬ್ಧಿ ತರುಣಿ ಲಾಲಿತ** =ನಾಗರ ಕನ್ನಿಕೆಯಾದ ಶ್ರೀ ಮಹಾಲಕ್ಷ್ಮಿಯಿಂದ ಭಕ್ತಿ ಮತ್ತು ಪ್ರೇಮ ಪುರಸ್ಸರವಾದ, **ವನಜ ಚರಣ**=ಪಾದ ಪದ್ಮಗಳುಳ್ಳ ಶ್ರೀ ನಾರಸಿಂಹನೇ, **ಭಿನ್ನ ಚರಿತ** = ಕ್ಷರಾ ಕ್ಷರಾತ್ಮಕವಾದ ಜಂಗಮ ಸ್ಥಾವರ ಬೇಧಗಳುಳ್ಳ ಪ್ರಾಕೃತ. ಅಪ್ರಾಕೃತ ಇತ್ಯಾದಿ ಸಕಲವುಗಳಿಂದಲೂ, ಕೋಟಿ ಕೋಟಿ ವಿಜಾತಿ ಗುಣಗಳಿಂದಲೂ ಅತ್ಯಂತ ಶ್ರೇಷ್ಠನೂ, ಅತ್ಯಂತ ಭಿನ್ನನೂ ಆದ ಚಾರಿತ್ರ್ಯವುಳ್ಳ ಶ್ರೀ ನಾರಸಿಂಹನೇ ನಿನಗೆ ನಮಸ್ಕಾರವು.

**ಶಿಕ್ಷ ರಕ್ಷಕ**=ಜಗತ್ತಿನ ಜೀವರುಗಳನ್ನು ಶಿಕ್ಷಿಸುವುದಕ್ಕೂ, ಭಗವದ್ಭಕ್ತರುಗಳನ್ನು ಉದ್ಧಾರ ಮಾಡುವುದಕ್ಕೂ ಏಕೈಕ ನಿತಾಂತಕ ಕರ್ತೃವಾದ ಶ್ರೀ ನಾರಸಿಂಹನೇ, **ಅಂತರಿಕ್ಷ**=ಆಕಾಶ, **ಆಪಗ ಅತುಲ** = ನಿರ್ಮಲವಾದ ಗಂಗೆಯ ಉದರದಿಂದ (ಆಕಾಶ ಗಂಗೆಯಿಂದ ಎಂತ ತಾತ್ಪರ್ಯ), **ಪ್ರಕ್ಷಾಳಿತ**=ಚೆನ್ನಾಗಿ ತೊಳೆಯಲ್ಪಟ್ಟ, **ಅಂಘ್ರಿ ಕಮಲಾ**=ಪಾದ ಪದ್ಮಗಳುಳ್ಳ ಶ್ರೀ ನಾರಸಿಂಹನೇ, (ತ್ರಿವಿಕ್ರಮ ರೂಪ), **ಋಕ್ಷ** = ಕರಡಿ, **ಜಾಮಾತ**= ಅಳಿಯನಾದ, ಅಂದರೆ, ಜಾಂಬುವತೀ ರಮಣನಾದ ಶ್ರೀ ಕೃಷ್ಣಾಭಿನ್ನ ನಾರಸಿಂಹನೇ, **ಸ್ವರ್ಣಾಕ್ಷ**=ಹಿರಣ್ಯಾಕ್ಷನ, **ಅಗ್ರಜ** = ಅಣ್ಣನಾದ ಹಿರಣ್ಯ ಕಶಿಪುವಿನ, **ಅರಿ**=ಶತ್ರುವಾದ, **ಹರ್ಯಕ್ಷ**= ಸಿಂಹದ, **ಆನನ**=ಮುಖವುಳ್ಳವನು (ಅಂದರೆ, ಸಿಂಹವದನನು), **ಉಗ್ರ** =ಶತ್ರುಗಳಿಗೆ ಭಯಂಕರನೂ, ಮತ್ತು ಉಗ್ರನಾಮಕರಾದ ರುದ್ರದೇವರ ಬಿಂಬನೂ, **ಪ್ರಬಲ**= ಅತ್ಯಂತ ಬಲಿಷ್ಠನೂ ಹಾಗೂ ಬಲನಾಮಕ ಶ್ರೀ ವಾಯು ದೇವರಿಗಿಂತಲೂ ಉತ್ತಮೋತ್ತಮನಾದ, ಶ್ರೀ ನಾರಸಿಂಹನೇ, **ವಕ್ಷಸ್ಥ** = ತನ್ನ ವಕ್ಷಸ್ಥಳದಲ್ಲಿ ಧರಿಸಲ್ಪಟ್ಟ, **ಶ್ರೀ**=ಮಂಗಳ ಪ್ರದಳಾದ, ಕಾಂತಿಯುಕ್ತಳಾದ ಶ್ರೀ ಲಕ್ಷ್ಮಿಯನ್ನು ಉಳ್ಳವನೇ, **ಸಹಸ್ರಾಕ್ಷಾದಿ**= ಇಂದ್ರನೇ ಮೊದಲಾದ, **ಸುರನಿಕರ** = ದೇವತೆಗಳ ಸಮೂಹದ, **ಪಕ್ಷ** =ಪಕ್ಷಪಾರ ವ್ಯವಹರಣೆಯಲ್ಲಿ, **ಸುವ್ಯಸನ**=ಗಾಢವಾದ ಆಸಕ್ತಿ-

ಯುಳ್ಳ, **ಶೀಲಾ**=ಸಚ್ಚರಿತ್ರನಾದ ಶ್ರೀ ನಾರಸಿಂಹನೇ, **ತ್ರ್ಯಕ್ಷಶರ**= ರುದ್ರದೇವರಿಗೆ ತ್ರಿಪುರಾಸುರ ದಹನ ಕಾಲದಲ್ಲಿ ಬಾಣ ರೂಪದಲ್ಲಿದ್ದ ನಾರಾಯಣಾಭಿನ್ನ ಶ್ರೀ ನಾರಸಿಂಹನೇ (ತ್ರ್ಯಕ್ಷ-ಮೂರುಗಣ್ಣಿನಾದ ರುದ್ರ-ದೇವರು. ಶಿರ-ಬಾಣ), **ಹನುಮ**=ಹನುಮಂತನನ್ನು, **ತಾರ್ಕ್ಷ್ಯ-ವಾಹನ**=ಗರುಡನನ್ನೂ ವಾಹನವನ್ನಾಗಿ ಉಳ್ಳ (ಹನುಮ ವಾಹನನು-ಗರುಡವಾಹನನು), **ದುರಿತ....**ಪಾಪಗಳೆಂಬ, **ಕಕ್ಷ**=ಸಮೂಹಗಳಿಗೆ, **ಅಗ್ನಿಮಾಲಾ**=ಆದ್ಯಂತರಹಿತವಾದ ಅಗ್ನಿ ಸದೃಶನೇ, (ದುರಿತಪಾವಕ), **ನಿಖಿಳಾ....**ಯಾವಾಗಲೂ ನಾಶವಿಲ್ಲದಂಥಾ ಶ್ರೀ ನಾರಸಿಂಹನೇ, ನಿನಗೆ ನಮಸ್ಕಾರವು. ||೩||

**ರಂಗ**=ರಂಗನಾಥನೆಂದು ಪ್ರಸಿದ್ಧವಾದ ಶ್ರೀ ನಾರಸಿಂಹನೇ, **ಆಪ ದಾವಳಿ....**ಆಪತ್ ಸಮೂಹವನ್ನು, **ವಿಭಂಗ**= ಖಂಡ ತುಂಡವಾಗಿ ಮಾಡುವಂಥ, **ಅಸು**=ಪ್ರಾಣದೇವರ, **ಕರಣಾಂತರಂಗ**= ಸರ್ವ ಇಂದ್ರಿಯಗಳಲ್ಲೂ ಪ್ರವಿಷ್ಟನಾಗಿ, ಜಗತ್ಕಾರ್ಯ ಮಾಡಿಸುವ, **ಮನೋಜ್ಞ**=ಅತ್ಯಂತ ಚಿತ್ತಾಕರ್ಷಕವಾದ, **ವಿಭವ**=ಸಂಸಾರ ಸುಖ ದುಃಖಗಳ ಲೇಪವಿಲ್ಲದ ಶ್ರೀ ನಾರಸಿಂಹನೇ, **ಗಂಗಾಪತಿ ನಿಲಯ**= ಗಂಗಾ ಪತಿಯಾದ ವರುಣ, ಅಂದರೆ ಕ್ಷೀರ ಸಮುದ್ರವನ್ನೇ ತನ್ನ ಮನೆಯ ನ್ನಾಗಿ ಮಾಡಿಕೊಂಡಂಥ (ಕ್ಷೀರಸಾಗರ ಶಾಯಿಯಾದ) ವಿಷ್ಣುವಿಗೆ ಅಭಿನ್ನ ನಾದ ಶ್ರೀ ನಾರಸಿಂಹನೇ, **ಮೌನಿಪುಂಗ**=ಮುನಿ ಶ್ರೇಷ್ಠರಿಂದ, **ಭೃಂಗಾ ಯಕೃತ**=ದುಂಬಿಗಳಂತೆ ಮಾಡಲ್ಪಟ್ಟ, ಅಂದರೆ, ಮುನಿಶ್ರೇಷ್ಠರು ಶ್ರೀ ನಾರಸಿಂಹನ ಪಾದ ಕಮಲಗಳಿಗೆ ದುಂಬಿ ಸದೃಶರಾಗಿದ್ದಾರೆ, **ಅತುಳ**= ತ್ರಿಲೋಕವನ್ನು ಮೀರಿದ, **ಅಂಘ್ರಿ** ಪಾದಗಳುಳ್ಳ ಮತ್ತು ಲೀಲಾ ಮಾನುಷನಾಗಿ, **ಕಭವ....**ಬ್ರಹ್ಮನ ಸೃಷ್ಟಿಯಿಂದ ಬಂದಂಥ ಶ್ರೀ ಕಶ್ಯಪ ಋಷಿಜಾತ ಉಪೇಂದ್ರನಾಮಕ ಶ್ರೀ ಹರಿಯೇ. (ಕ-ನೀರು. ತತ್ಸಂಬಂಧೀ-ಕಮಲ. ಭವ-ಕಮಲ ಸಂಜಾತರಾದ ಬ್ರಹ್ಮದೇವರು). ಬ್ರಹ್ಮನು ಯಾವ ನಿನ್ನಿಂದ ಹುಟ್ಟಿ ಬಂದನೋ (ನಾಭೀಕಮಲೋದ್ಭವ), ಆ ಲೀಲೆಯನ್ನು ತೋರುವುದಕ್ಕಾಗಿ "ಕಭವ"-ಎಂತ ಕರೆಯಿಸಿಕೊಂಡ ಶ್ರೀ ನಾರಸಿಂಹನೇ,

**ಸಂಗಾತಿ**....ಭಕ್ತ ಜನರುಗಳ, **ದಾರಿದ್ರ್ಯ ಸಂಘ**=ಬಡತನ, ರೋಗ ರುಜಿನ ಮುಂತಾದ ಉಪದ್ರವಗಳ ಸಮೂಹವೆಂಬ ಒಣಗಿದ ಕಾಷ್ಠ ಸಂಗ್ರಹಕ್ಕೆ, **ಅಗ್ನಿಚರ್ಯ**....ಅಗ್ನಿಯಂತೆ ದಹಿಸುವ ಚರಿತ್ರೆಯುಳ್ಳ ಶ್ರೀ ನಾರಸಿಂಹನೇ, **ವೇದಾಂಗಾದಿ ವೇದ**=ವೇದಾಂಗ ಮೊದಲಾದ ಆದಿವೇದ, ಮೂಲ ವೇದಗಳಿಂದ, **ಪ್ರಭವಾ**=ಚೆನ್ನಾಗಿ ತೋರಿಸಿಕೊಳ್ಳುವ ಶ್ರೀ ನಾರಸಿಂಹನೇ, **ಭೃಂಗಾರ ಕಶ್ಯಪ**=ಹಿರಣ್ಯ ಕಶಿಪುವಿನ, **ಮದ**= ಉದ್ಧಟತನಕ್ಕೆ, **ಅಂಗಾರ**=ಅಗ್ನಿಯಂತಿರುವ, **ವಿದ್ಯುನಿಭ**.... ಮಿಂಚಿನಂತೆ ಮಾನುಷೋತ್ತಮರ ಹೃದಯದಲ್ಲಿ ಸುಳಿಯುವ, **ಉತ್ತುಂಗ**= ಉನ್ನತವಾದ, **ಅಭಿರಾಮ**=ಅತ್ಯಂತ ರಮಣೀಯತೆಯಿಂದ ಕೂಡಿದ, ಅಂದರೆ ಹಿರಣ್ಯ ಕಶಿಪುವಿನ ಮದ ಭಂಗಮಾಡಿ, ಅವನನ್ನು ಸಂಹರಿಸಿ, ಬಾಲಕ ಪ್ರಹ್ಲಾದನನ್ನು ಸಂರಕ್ಷಿಸಿದ. ಮಾನುಷೋತ್ತಮರ ಹೃದಯದಲ್ಲಿ ಮಿಂಚಿನಂತೆ ಹೊಳೆಯುವ ರಮಣೀಯ ರೂಪನಾದವನು-ಎಂತ ತಾತ್ಪರ್ಯ, **ಸುಭವ**=ಶ್ರೀ ವಾಯುದೇವರೊಡನೆ ನಿರಂತರದಲ್ಲಿಯೂ ಅಹೇಯನಾಗಿರುವ ಶ್ರೀ ನಾರಸಿಂಹನೇ ! ನಿನಗೆ ನಮಸ್ಕಾರವು. ||೪||

**ಭೇಶಾ**....ನಕ್ಷತ್ರ ಗಣಗಳಿಗೆ ಒಡೆಯನಾದ ಚಂದ್ರನಂತೆ (ಭ—ನಕ್ಷತ್ರ ಗಣಗಳು. ಈಶಾ-ಪತಿ), **ಅಭ**=ಪ್ರಕಾಶ ಮಾನವಾದ, **ವಕ್ತ್ರ**.... ಮುಖವುಳ್ಳವನು ಶ್ರೀ ನಾರಸಿಂಹನ ವದನವು ಚಂದ್ರನ ಕಾಂತಿಯಂತೆ ಪ್ರಕಾಶಮಾನವಾಗಿದೆ. (ಈ ಉಪಮಾನ ಕೇವಲ ಔಪಚಾರಿಕ), **ವಿಧಿ**= ಚತುರ್ಮುಖ ಬ್ರಹ್ಮದೇವರು, **ವೀಶ**=ಪಕ್ಷಿ ಶ್ರೇಷ್ಠರಾದ ಗರುಡದೇವರು (ವೀ—ಆಕಾಶ ಸಂಚಾರಿಗಳಾದ ಪಕ್ಷಿಗಳು), **ಈಶ**....ಶ್ರೀ ರುದ್ರದೇವರು (ಈಶಾನ್ಯ ಕೋಣಾಧಿಪತಿಯಾದ್ದರಿಂದ), **ತಂದೆ**=ಇವರಿಗೆಲ್ಲಾ ಜನಕನಾದ, **ವೆಂಕಟೇಶಾಖ್ಯ**=ವೆಂಕಟೇಶನೆಂಬ ಹೆಸರುಳ್ಳ, **ವಿಠ್ಠಲ**.... ವಿಠ್ಠಲರೂಪೀ ಶ್ರೀ ಪರಮಾತ್ಮನು, **ವಿಜಿತಾ**=ಏಕೈಕ ಅಜೇಯನಾದ, (ಅಜಾತ ಶತ್ರುವಾದ), **ಮೇಶ**=ರಮಾದೇವಿಯರಿಗೆ ನಿಯಾಮಕನಾದ (ಮ + ಈಶ=ಮೇಶ. ಮಾ-ರಮಾದೇವಿ), **ಅಬ್ಧಿಶಯ**=ಸಮುದ್ರಶಾಯಿಯಾದ (ಕ್ಷೀರಸಾಗರ ನಿವಾಸಿ), **ವೇದವ್ಯಾಸ**....ವೇದವ್ಯಾಸಾವ

ತಾರಿಯಾದ, **ಅತ್ರಿಜಾತ** ಅತ್ರಿ ಋಷಿಗಳ ಪುತ್ರನಾದ ದತ್ತಾತ್ರೇಯವತಾರ, **ಮಹಿದಾಸ....**ಇತರಾ ದೇವಿಯ ಪುತ್ರನಾದ ಮಹಿದಾಸವತಾರ, **ಅಜಿತಾದಿ** = ಅದಿ ನಾಮಕನಾಗಿ ಅನಂತರೂಪ ವಿಶಿಷ್ಟನಾದ, **ಸ್ವಹಿತ** = ತನ್ನನ್ನೇ ಆವಿರ್ಭವಿಸಿಕೊಂಡಂಥ (ತನ್ನಿಂದ ಅಭಿನ್ನಗಳಾದ) ರೂಪ ವಿಶೇಷವುಳ್ಳ ಶ್ರೀ ನಾರಸಿಂಹನೇ, **ಕ್ಲೇಶಾದಿ** = ದುಃಖ, ಸಂಶಯ ಇತ್ಯಾದಿ, **ದೋಷಹ** = ದೋಷ ನಾಶಕನಾದ, **ದೂರ್ವಾಸಾದಿ** = ದೂರ್ವಾಸನೇ ಮುಂತಾದ, **ಮೌನಿ** = ಮುನಿ ಶ್ರೇಷ್ಠರುಗಳ, **ಹೃದ್ವಾಸ** = ಹೃತ್ಕಮಲದಲ್ಲಿ ವಾಸಿಸುವ, (ದೂರ್ವಾಸರು ರುದ್ರದೇವರ ಅವತಾರರು. ಶ್ರೀ ರುದ್ರದೇವರ ಉಪಾಸನಾ ಮೂರ್ತಿ-ಶ್ರೀ ಸಂಕರ್ಷಣಾಭಿನ್ನ ಶ್ರೀ ಲಕ್ಷ್ಮೀನಾರಸಿಂಹನು), **ಅರ್ತಿ** = ಸಂಕಟಗಳ ಗುಂಪುಗಳನ್ನು, **ಭಂಜನ ಕೃತಾ** = ನಾಶ ಮಾಡುವ ಶ್ರೀ ನಾರಸಿಂಹನೇ, ನಿನಗೆ ನಮಸ್ಕಾರವು, **ದಾಸಾರ್ಯ** = ದಾಸ-ಮಾನ್ಯರಾದ, **ಗುರು ಶ್ರೀನಿವಾಸಾರ್ಯ ....**ಗುರು ಸ್ಥಾನೀಯರಾದ ಪೂಜ್ಯ ಶ್ರೀನಿವಾಸರಾಯರೆಂಬುವರಿಂದ, **ಪೂಜಿತ....** ಪೂಜಿಸಲ್ಪಟ್ಟ, **ಪಾರಾಶರ್ಯ** = ಪರಾಶರ ಪುತ್ರನಾದ ವೇದವ್ಯಾಸಾಭಿನ್ನ ಶ್ರೀ ನಾರ-ಸಿಂಹನೇ, **ಪಾಹಿ ಸತತಾ** = ನಿರಂತರದಲ್ಲಿ ನಮ್ಮನ್ನು ಸಂರಕ್ಷಿಸು.

❋

**೪೯**

**(ಗುರು ಗೋವಿಂದ ವಿಠ್ಠಲಾಂಕಿತ)**

**ರಾಗ–ಕಾಂಬೋದಿ** **ಝಂಪೆತಾಳ**

ಜ್ವರಹರಾಯ್ಯನೆ ಶ್ರೀ ನಾರಸಿಂಹ
ಘೋರನಾಮಯ ಕಳೆದು-ಆರೋಗ್ಯವೀಯೋ ॥ ||**ಪ**||

ರೋಗಹರ ನೀನೆಂದು-ಆಗಮವು ಪೇಳುವುದು
ಯೋಗ ಭೋಗದ ರೂಪ–ಭೋಗಿ ಗುರು ಬಿಂಬಾ

ವಾಗೀಶ ಮುನಿವಂದ್ಯ-ಭೋಗಿಶಯನನೆ ದೇವ
ರೋಗ ಹರಿಸುವುದರಿದೆ-ರೋಗಾರ್ತ ಶಿಶುಗೇ ॥ ॥೧॥

ನಾಗ ಗಿರಿಯಲಿ ವಾಸ–ನಾಗಭೂಷಣ ಸೇವ್ಯ
ನಾಗಾರಿವಾಹನನೆ-ಯೋಗಿ ವಂದ್ಯಾ
ಶೀಘ್ರದಲಿ ಶಿಶುವ ನಿ-ರೋಗಿಯನಿಸುವುದಯ್ಯ
ಬಾಗಿ ಬೇಡುವೆ ಹರಿಯೆ-ಭಾಗವತ ಪ್ರಿಯಾ ॥ ॥೨॥

ಈ ವಸುಮತಿಯು ಸಕಲ-ಜೀವಂತರ್ಯಾಮಿ
ದೇವ ನರಹರಿ ಜ್ವರಹ-ಕಾಯ್ವನು ಯೆನಿಸೀ
ಕಾವುತಿರೆ ಬಯವೇನು–ತೀವ್ರ ಪಾಲಿಪುದಿವನ
ಗೋವ ಪಾಲಿಪ ಗುರು-ಗೋವಿಂದ ವಿಠ್ಠಲಾಂಕಿತ ॥ ॥೩॥



## ೫೦

### (ಗುರು ಗೋವಿಂದ ವಿಠ್ಠಲಾಂಕಿತ)

ರಾಗ–ಕಾಂಬೋದಿ ಝಂಪೆತಾಳ

ಅಪಮೃತ್ಯು ಪರಿಹರಿಸೋ ನಾರಸಿಂಹ
ಕೃಪಣವತ್ಸಲ ಹರಿಯೆ ಬಿನ್ನವಿಪೆ ನಿನಗೇ ॥ ॥ಪ॥

ಅನ್ಯರಿಗೆ ಮೊರೆ ಇಡೆನೊ–ನಿನ್ಹೊರತು ಇನ್ನಿಲ್ಲ
ಮನ್ಯುಸೂಕ್ತೋದಿತನೆ–ಎನ್ನ ಶಿಷ್ಯನಿಗೇ
ಖಿನ್ನ ಬಡಿಸುವ ರೋಗ-ವನ್ನ ಮೋಟಿಪುದಯ್ಯ
ಅನ್ನಾಂತಮಹಿಮ ಹರಿ-ನಿನ್ನ ಕೃಪೆ ತೋರೋ ॥ ॥೧॥

ಜ್ವರಹರಾಹ್ವಯನೆಂದು-ವರ ವೇದ ಮುನಿಗಳು
ಪರಿವರಿಯಲಿಂ ನಿನ್ನ-ಸ್ತೋತ್ರಗೈವುದನ
ಅರಿತು ನಿನ್ನಲಿ ನಾನು-ಮೊರೆಯಿಡುವೆನೋ ಹರಿಯೆ
ಪರಿಪೋಷಿಸೋ ಇವನ-ಕರುಣರಸ ಪೂರ್ಣ ॥ ॥೨॥

ತಂದೆ ತಾಯಿಯು ನೀನೆ-ಬಂಧು ಬಳಗವು ನೀನೆ
ಇಂದು ಅಂದಿಗು ನೀನೆ–ಎಂದೆಂದಿಗು ನೀನೆ
ಕಂದನನು ಸಲಹೆಂದು-ಸಿಂಧುಶಯನನ ಬೇಡ್ವೆ
ಇಂದಿರಾಪತಿ ಗುರು ಗೋವಿಂದವಿಠ್ಠಲಾಂಕಿತ ॥ ॥೩॥

**ಅರ್ಥವಿವರಣೆ :**

ಕೀರ್ತಿ ಶೇಷರಾದ ಶ್ರೀ ಗುರುಗೋವಿಂದ ವಿಠ್ಠಲಾಂಕಿತ ದಾಸ ವರ್ಯರು, ತಮ್ಮ ಶಿಷ್ಯ ಕೋಟಿಯಲ್ಲಿ ಒಬ್ಬ ಶಿಷ್ಯನಿಗೆ ಬಂದ ರೋಗ ರೂಪವಾದ ವಿಪತ್ತನ್ನು ಪರಿಹರಿಸಲು, ಭವರೋಗ ಭೇಷಜನಾದ ಶ್ರೀ ಲಕ್ಷ್ಮೀನರಸಿಂಹನನ್ನು ಸ್ತುತಿಗೈದಿದ್ದಾರೆ. ಪ್ರಸಕ್ತ ಕೀರ್ತನ ಸಾಹಿತ್ಯ ದಲ್ಲಿ.

**ಅಪಮೃತ್ಯು**.... ಮೃತ್ಯುವಿನಲ್ಲಿ ಎರಡು ಪ್ರಕಾರ. (೧) ಕಾಲಮೃತ್ಯು ಮತ್ತು (೨) ಅಪಮೃತ್ಯು. ಜೀವನ ಆಯುಸ್ಸು ಪೂರ್ತಿಯಾದ ನಂತರ, ಒದಗುವ ಸ್ವಾಭಾವಿಕವಾದ ಮರಣವು ಕಾಲಮೃತ್ಯವು. ಅದನ್ನು ತಪ್ಪಿ ಸಲು ಯಾರಿಂದಲೂ ಸಾಧ್ಯವಿಲ್ಲ. ಗಂಡಾಂತರ-ರೋಗಾದಿ ಉಪದ್ರವ ಗಳು. ಅಪಘಾತ ಇತ್ಯಾದಿ ಪ್ರಸಂಗಗಳಿಂದ ಉಂಟಾಗುವ ವಿಪತ್ತು– ಅಪಮೃತ್ಯುವು. ಜ್ಞಾನಿಗಳು ಶ್ರೀ ಹರಿ ವಾಯುಗಳ ಸ್ತೋತ್ರ ದ್ವಾರಾ, ಅಂತಹ ಅಪಮೃತ್ಯುಗಳನ್ನು ಪರಿಹರಿಸಿದ ದೃಷ್ಟಾಂತಗಳು ಹಲವು.

**ನಿನ್ನೊರತು ನಿನ್ನಿಲ್ಲ** = ಸಕಲ ಭಯ, ವಿಪತ್ತುಗಳ ಪರಿಹಾರಕ ಭಗ ವದ್ರೂಪವು- ಶ್ರೀ ನರಸಿಂಹರೂಪವು. ಇದರಿಂದ ನಿನ್ನ ಬಿಟ್ಟು ಇಂತಹ

ಅಪಮೃತ್ಯುವನ್ನು ಪರಿಹರಿಸುವ ಶಕ್ತಿ ಇವರಿಗಿಲ್ಲ–ವೆಂದು ಸ್ತುತಿಸಿದ್ದಾರೆ, **ಮನ್ಯುಸೂಕ್ತೋದಿತನೆ** ಮನ್ಯುಸೂಕ್ತದ ಪ್ರತಿಪಾದ್ಯ ದೇವತಾ-ಶ್ರೀ ನರಸಿಂಹಮೂರ್ತಿಯು, **ಖನ್ನಪಡಿಸುವ ರೋಗ....** ಅತೀವ ದುಃಖ-ವನ್ನುಂಟು ಮಾಡುತ್ತಿರುವ ಈ ರೋಗವನ್ನು, **ನೋದಿಪುದಯ್ಯ....** ನೀನೇ ಪರಿಹರಿಸಬೇಕು, **ಅನ್ನಾಂತ ಮಹಿಮ ಹರಿ....** "ಹರಿ"-ಎಂದರೆ "ಸಿಂಹ"-ಇಲ್ಲಿ ನರಸಿಂಹ ರೂಪೀ ಶ್ರೀ ಹರಿಯು. ನೀನು ಅಪಾರ ಅಸದೃಶ ಮಹಿಮಾ ಸಂಪನ್ನನು, **ನಿನ್ನ ಕೃಪೆ ತೋರೋ** = ನಿನ್ನ ಕಾರುಣ್ಯವನ್ನು ಈ ಶಿಷ್ಯನ ಮೇಲೆ ಬೀರು-ಎಂದು ಪ್ರಾರ್ಥಿಸಿರುತ್ತಾರೆ. ||೧||

**ನುಡಿ–೨**

**ಜ್ವರಹರಾಹ್ವಯನೆಂದು** = ಭವನೆಂಬ ಮಹಾರೋಗಕ್ಕೆ ವೈದ್ಯ ರೂಪನು ಶ್ರೀ ಲಕ್ಷ್ಮೀನರಸಿಂಹ ದೇವರು. ಸರ್ವಜೀವರ ಸುಷುಮ್ನಾನಾಡಿ ಸ್ಥಿತನಾಗಿದ್ದು, ಅಪಮೃತ್ಯು ಪರಿಹಾರಕನೆಂದು ಖ್ಯಾತನಾಮನಾಗಿದ್ದಾನೆ. ಅಂತಹ ಭವರೋಗ ಭೀಷಜನಾದ ಶ್ರೀ ನರಸಿಂಹನು ಜ್ವರವನ್ನು ಪರಿಹರಿಸುವುದು ಏನಚ್ಚರಿ ! ಅವನಿಗೆ, **ಜ್ವರಹರಿ**-ಎಂದು ಹೆಸರು.

**ವರ ವೇದ ಮುನಿಗಳು** - ಶ್ರೇಷ್ಠರಾದ ವೇದಾಭಿಮಾನಿಗಳಾದ ಶ್ರೀ ಲಕ್ಷ್ಮೀದೇವಿ, ಶ್ರೀ ಸರಸ್ವತೀ, ಶ್ರೀ ಭಾರತೀದೇವಿ ಇತ್ಯಾದಿ ದೇವತಾ ವರ್ಗ ಶ್ರೀ ನರಸಿಂಹಾವತಾರ ಕಾಲದಲ್ಲಿ ಆ ದೇವ ದೇವನನ್ನು ನಾನಾ ಪರಿಯಲ್ಲ ಸ್ತುತಿಸಿದರು, **ಕರುಣ ಸರಪೂರ್ಣ** = ಶ್ರೀ ಹರಿಯು ಕರುಣಾರ್ದ್ರ ಹೃದಯನು. ತನ್ನ ಭಕ್ತರ ವಿಷಯದಲ್ಲಿ ಪರಮ ದಯಾಸಾಗರನು, **ಇಂದು ಅಂದಿಗು** = ಇಹ ಮತ್ತು ಪರಗಳಲ್ಲಿ, **ಎಂದೆಂದು ನೀನೆ** = ಜೀವರನ್ನು ಅರಕ್ಷಣ ಬಿಟ್ಟಗಲದ ಬಿಂಬರೂಪಿಯಾದ ಪರಮಾಪ್ತ ಬಂಧು, **ಸಿಂಧು ಶಯನನೆ** = ಕ್ಷೀರಸಾಗರ ಶಾಯಿಯಾದ ಶ್ರೀ ಹರಿ.



## ೫೧

## (ರಮಾಕಾಂತವಿಠ್ಠಲಾಂಕಿತ)

**ರಾಗ–ಕಾಂಬೋದಿ** **ಝಂಪೆತಾಳ**

ಶ್ರೀ ಲಕ್ಷ್ಮೀನರಸಿಂಹ ಪಾಹಿ ಸತತ ॥ ॥ಪ॥

ಬಾಲಕ ಪ್ರಹ್ಲಾದವರದ ಕರಿಗಿರಿ ವಾಸ ॥ ॥ಅ॥

ತ್ವರದಿ ಕಂಬದಿ ಬಂದು–ದುರುಳ ದೈತ್ಯನ ಸೀಳಿ
ಧರೆಗೆ ತೋರಿದೆ ಸರ್ವವ್ಯಾಪ್ತ ನೀನೆಂದೂ
ಸಿರಿ ದೇವಿಗಳ ವಲ್ಲದ ಪ್ರತಿಮ-ಸನ್ಮಹಿಮ
ಶರಣವತ್ಸಲ ದುರಿತ ಜೀಮೂತಹರವಾತ ॥ ॥೧॥

ಅತ್ಯಂತ ಕರುಣಾಳು ದೇವ ನಿನ್ನಯ ಮೂರ್ತಿ
ಭಕ್ತರಿಗೆ ಶಾಂತ ಮತ್ತನ್ಯರಿಗೆ ರೌದ್ರ
ಮೃತ್ಯುವಿಗೆ ಮೃತ್ಯುವೆಂದೆನಿಪ ನರಮೃಗರೂಪಿ
ನಿತ್ಯದಲಿ ನೀಡೆನಗೆ ನಿನ್ನ ನಾಮಸ್ಮರಣೆ ॥ ॥೨॥

ದಂತಿ ಶೈಲಾಗ್ರದಲಿ ನಿಂತ ಯೋಗಾ ಭೋಗ
ಶಾಂತಮೂರುತಿ ಸರಿತೆ ಬಾಂಧವ ಶ್ರೀಶಾ
ಕಂತುಹರ ಪಿತ ವಂದ್ಯ ಸುಮನನಾರ್ಚಿ ರಮಾ-
ಕಾಂತವಿಠ್ಠಲ–ಸಕಲ ಭಕ್ತ ಪರಿಪಾಲ ॥ ॥೩॥



**ಶ್ರೀ ರಮಾಕಾಂತ ವಿಠ್ಠಲದಾಸರ** ಜನ್ಮನಾಮ ಸಿ. ಕೃಷ್ಣರಾಯ (ಕ್ರಿ. ಶ. 1906–1984). ತಂದೆ-ಶ್ರೀ ಭೀಮಸೇನರಾಯರು. ತಾಯಿ-ಶ್ರೀಮತಿ ಭಾರತೀಬಾಯಿ ಶ್ರೀಯುತರು ಕ್ರಿ. ಶ. 1906 ರಲ್ಲಿ ಚಿತ್ರದುರ್ಗ ಜಿಲ್ಲೆಯ ಚಳ್ಳಕೆರೆಯಲ್ಲಿ ಜನಿಸಿದರು. ಮನೆತನದ ದೈವಿಕ ವಾತಾವರಣ. ಇವರ ಮನಸ್ಸಿನ ಮೇಲೆ ಚಿಕ್ಕಂದಿನಿಂದಲೇ ಪರಿಣಾಮ ಬೀರಿತು. ತಮ್ಮ 8ನೆಯ ವಯಸ್ಸಿನಲ್ಲಿ ಉಪನಯನ ಸಂಸ್ಕಾರ ಅವರ 17ನೆಯ ವಯಸ್ಸಿನಲ್ಲಿ, ಅಂದರೆ ಕ್ರಿ. ಶ. 1923 ರಲ್ಲಿ ಸೌ॥ ಸುಂದರಮ್ಮ ಎಂಬ ಸಾಧ್ವೀಮಣಿಯೊಡನೆ ವಿವಾಹ. ಶ್ರೀಯುತರು ರೈಲ್ವೆ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದರು. ಅವರ ಅಜ್ಜಿ ರುಕ್ಮಿಣಿ ಬಾಯಿಯವರ ದ್ವಾರಾ ಪರಮ ಪ್ರಿಯ ಸುಬ್ಬರಾಯ ದಾಸರ ಸಮಾಗಮವಾಗುವ ಸುಯೋಗ ಒದಗಿತು. ತಂದೆ ಮುದ್ದು ಮೋಹನ ವಿಠ್ಠಲಾಂಕಿತರಾದ ಶ್ರೀ ಸುಬ್ಬರಾಯ ದಾಸವರ್ಯರಿಂದ. ಶ್ರೀಯುತರ ಅಜ್ಜಿ ರುಕ್ಮಿಣೀಬಾಯಿಯವರಿಗೆ–ಸೀತಾಪತಿ ವಿಠ್ಠಲ-ಎಂಬ ಅಂಕಿತೋಪದೇಶವಾಯಿತು.

ಶ್ರೀಯುತರ ಅಕ್ಕನವರು **ಅಂಬಾಬಾಯಿಯವರು.** ಅವರ ಅಂಕಿತ ನಾಮ–**ಗೋಪಾಲ ಕೃಷ್ಣ ವಿಠ್ಠಲ.** ಅಜ್ಜಿ ಮತ್ತು ಅಕ್ಕನವರ ದಾಸದೀಕ್ಷೆ, ದೈವಭಕ್ತಿ, ತಾಳ್ಮೆ ಮುಂತಾದ ಅಪೂರ್ವ ಗುಣಗಳೇ ಶ್ರೀ ಕೃಷ್ಣರಾಯರಿಗೆ ಪ್ರೇರಕ ಶಕ್ತಿಯಾಗಿ, ಆ ತತ್ಫಲವಾಗಿ ಕ್ರಿ. ಶ. 1928 ರಲ್ಲಿ ಅವರಿಗೆ ಶ್ರೀ ಸುಬ್ಬರಾಯ ದಾಸವರೇಣ್ಯರಿಂದ–**"ರಮಾಕಾಂತವಿಠ್ಠಲ"**–ಎಂಬ ಅಂಕಿತೋಪದೇಶವಾಯಿತು. ಜೊತೆಗೇ ಅವರ ಧರ್ಮಪತ್ನಿಯವರಿಗೆ-**"ಸುರೇಶವಿಠ್ಠಲ"**-ಎಂಬ ಅಂಕಿತೋಪದೇಶ ಪರಮ ಪ್ರಿಯರಿಂದ ಆಯಿತು.

ಶ್ರೀಯುತರು 300 ಕ್ಕೂ ಮೇಲ್ಪಟ್ಟು ಕೀರ್ತನೆಗಳನ್ನು ರಚಿಸಿರುತ್ತಾರೆ. ಸ್ವಯಂ ಸ್ಫೂರ್ತಿಯಿಂದ ಮೂಡಿ ಬಂದ ಈ ಕೀರ್ತನ ಸಾಹಿತ್ಯಗಳ ಶೈಲಿ ಮತ್ತು ಸೊಬಗು ವರಕವಿಗಳಂತೆಯೇ ಇವೆ. ತಾರತಮ್ಯವಾಗಿ ದಾಸರರಕ್ಷ-ಮೂಲರಕ್ಷ–ದೇವತಾರಕ್ಷ–ಶ್ರೀ ಹರಿಯ ಪರವಾದ ಅನೇಕ ಕೀರ್ತನೆಗಳು ರಚಿತವಾಗಿವೆ. ಅವೆಲ್ಲವನ್ನು ಪ್ರಕಟಿಸುವ ಕಾರ್ಯ ಆಗ

ಬೇಕಾಗಿದೆ. ಅವರ "ಹರಿದಾಸದರ್ಪಣಂ"-"ಶ್ರೀ ಮಧ್ವರಿಕಥಾಮೃತ ಸಾರದ ಸಂಧಿಮಾಲಾ ಸ್ತೋತ್ರಗಳು" ಶ್ರೀಯುತರ ಶ್ರೇಷ್ಠ ಕೊಡುಗೆಗಳು. ಗುಪ್ತ ಸಾಧಕರೂ ಶ್ರೇಷ್ಠಜ್ಞಾನಿಗಳೂ ಆಗಿದ್ದ ದಾಸವರ್ಯರು ದಿನಾಂಕ 28-1-1983 ರಂದು (ಪುಷ್ಯ ಬಹುಳ ಏಕಾದಶೀ) ಹರಿ ಪದವನ್ನು ನೀಡಿದರು.



**ಅರ್ಥವಿವರಣೆ :**

**ಕರಿಗಿರಿವಾಸ** - ದೇವರಾಯನ ದುರ್ಗಕ್ಕೆ (ತುಮಕೂರು ಸಮೀಪ) "ಕರಿಗಿರಿ"-ಎಂದು ಸ್ಥಳ ಪುರಾಣ ಪ್ರಸಿದ್ಧಿ. ಅಲ್ಲಿ ಕೆಳ ಬೆಟ್ಟದಲ್ಲಿ ಭೋಗಾ ನರಸಿಂಹನೂ ಮೇಲಿನ ಬೆಟ್ಟದಲ್ಲಿ ಯೋಗಾನರಸಿಂಹನೂ ನೆಲೆಸಿ, ವಿದ್ಯ ಮಾನರಾಗಿದ್ದಾರೆ. ಪ್ರಸಕ್ತ ಕೀರ್ತನೆಯು ಕರಿಗಿರಿ ಕ್ಷೇತ್ರದ ಶ್ರೀ ಲಕ್ಷ್ಮೀ ನರಸಿಂಹ ದೇವರ ಪದವಾದ ಸ್ತೋತ್ರಪದವು, **ದುರುಳ ದೈತ್ಯನ** = ಭಗವ ದ್ವೇಷಿಯಾಗಿದ್ದ ಹಿರಣ್ಯ ಕಶಿಪುವಿನ ಉದರವನ್ನು ಸೀಳಿ, ನರಸಿಂಹನು ಸಂಹರಿಸಿದ ಪ್ರಸಂಗ, **ಸರ್ವವ್ಯಾಪ್ತನೆಂದು** = ಶ್ರೀ ಹರಿಯು ಸರ್ವತ್ರ ವ್ಯಾಪ್ತನಾಗಿದ್ದು, ಅಣುರೇಣು ತೃಣಕಾಷ್ಠಾದಿಗಳಲ್ಲಿ ಸಂಪೂರ್ಣನಾಗಿ ನೆಲೆಸಿದ್ದಾನೆಂದು ಉದ್ಘೋಷಿಸಿದ ಬಾಲಕ ಪ್ರಹ್ಲಾದನ ಮಾತನ್ನು ಸತ್ಯ ವಾಗಿಸಲು ಶ್ರೀ ನರಸಿಂಹಾವತಾರ, **ಸಿರಿದೇವಿಗೆ ಅಳವಲ್ಲದ** = ಶ್ರೀ ಹರಿಯು ನಿತ್ಯಾವಿನಿಯೋಗಿಯಾದ ಶ್ರೀ ಲಕ್ಷ್ಮೀದೇವಿಗೂ ಸಾಕಲ್ಯೇನ ತಿಳಿಯದಿರುವ, ಅನಂತ ಮಹಿಮಾ ಸಂಪನ್ನನು, **ದುರಿತ ಜೀಮೂತ ಹರವಾದ** = ಪಾಪ ಗಳೆಂಬ ಮೇಘಗಳಿಗೆ ಬಿರುಗಾಳಿ ಸದೃಶನು. ಜೀವರಿಂದ ಕೃತವಾದ ಪಾಪ ರಾಶಿಗಳು ಮೇಘಗಳ ಸದೃಶ. ಅದನ್ನು ಚದುರಿಸಲು ಬಿರುಗಾಳಿ ಬೇಕು. (ಜೀಮೂತ-ಮೇಘಗಳು ಹರ-ನಿವಾರಿಸುವ. ವಾತ-ಬಿರುಗಾಳಿ).

**ಭಕ್ತರಿಗೆ ಶಾಂತ** = ಅಂತರಂಗ ಭಕ್ತರಿಗೆ ಶ್ರೀ ನರಸಿಂಹನು ಶಾಂತ ಮೂರ್ತಿ, **ಅನ್ಯರಿಗೆ ರೌದ್ರ** = ಭಗವದ್ವೇಷಗಳಾದ ಅಸುರರಿಗೆ ಮೃತ್ಯು

ಸ್ವರೂಪನು, **ಮೃತ್ಯುವಿಗೆ ಮೃತ್ಯು** = ಶ್ರೀ ಲಕ್ಷ್ಮೀನರಸಿಂಹನ ರೂಪವು ಸಕಲ ದುರಿತ ಪರಿಹಾರಕ ರೂಪವು. ಅಪಮೃತ್ಯುವನ್ನು ನಿವಾರಿಸುವ ಭಗವದ್ರೂಪವು, **ನರಮೃಗರೂಪಿ** ನರಸಿಂಹಾಕೃತಿ (ನರ-ಮಾನವ ಮೃಗ-ಸಿಂಹ).

**ದಂತಿ** = ಆನೆ (ದಂತವುಳ್ಳದ್ದು ದಂತಿ–ಗಂಡಾನೆ), **ಶೈಲಾಗ್ರದಲಿ** = **ಬೆಟ್ಟದ** ತುದಿಯಲ್ಲಿ, ಅಂದರೆ ಕರಿಗಿರಿ ಕ್ಷೇತ್ರಸ್ಥ ಯೋಗಾನರಸಿಂಹನ ಮತ್ತು ಭೋಗಾನರಸಿಂಹನ ಸ್ತೋತ್ರ, **ಸರಿತ ಬಾಂಧವ** = ಗಂಗಾಜನಕ, **ಶ್ರೀಶಾ** = ಶ್ರೀ ನಾಮಕಳಾದ ಶ್ರೀ ಲಕ್ಷ್ಮೀದೇವಿಗೂ ನಿಯಾಮಕನೂ, **ಕಂತುಹರ** = ಮನ್ಮಥನನ್ನು ತನ್ನ ಫಾಲನೇತ್ರಾಗ್ನಿಯಿಂದ ಭಸ್ಮ ಮಾಡಿದ ಶ್ರೀ ರುದ್ರದೇವರು, **ಪಿತವಂದ್ಯ** = ರುದ್ರದೇವರ ತಂದೆಯಾದ ಚತುರ್ಮುಖ ಬ್ರಹ್ಮನಿಂದ ವಂದ್ಯನಾದವನು. (ತಾರತಮ್ಯ ಕ್ರಮವನ್ನು ನೋಡಿ), **ಸುಮನಸಾರ್ಚಿತ** = ದೇವತಾ ಗಣದಿಂದ ಸಂಪೂಜ್ಯನಾದವ, (ಸುಮನಸ್-ಸಮೀಚೀನವಾದ ಮನಸ್ಸುಳ್ಳ ದೇವತಾಗಣ).



**೫೨**

## ಅಹೋಬಲ ನರಸಿಂಹ ದೇವರ ಸ್ತೋತ್ರ

**ಸುಳಾದಿ**

**(ವಿಜಯವಿಠ್ಠಲಾಂಕಿತ)**

|| **ಧ್ರುವತಾಳ** ||

ಅನಂತಾನಂತ ಶಯನಾ ಅಂಬುಜದಳನಯನ
ಉನ್ನಂತ ಗುಣನಿಲಯಾ ಪನ್ನಗಗೇಯ

ಘನ್ನ ಕಾರುಣ್ಯಮೂರ್ತಿ ಸತತ ಮಂಗಳ ಕೀರ್ತಿ
ಚೆನ್ನ ಪ್ರಸನ್ನ ರನ್ನ ಶಿರಿ ಸಂಪನ್ನ
ಚಿನ್ನಾಂಬರ ಚಿನ್ನರೂಪ ಚಿನ್ಮಯಕಾಯ
ಭಿನ್ನ ಜೀವರಾಪರಿಭಿನ್ನ ವ್ಯಾಪ್ತಾ
ಪನ್ನಗನಾಗಾ ತಲ್ಪಾ ನಾಗಭಯ ವಿನಾಶ
ಜನ್ನಾ ಚೋರ ಚತುರಾ ಚತುರ್ಮೊಗನ್ಯೆಯ್ಯಾ
ಅಣೋರಣೀ ಅಜರಾ ಅನಾದಿದೇವ ಪಾ-
ವನ್ನಾ ಜೀವನ್ನಾ ದುಷ್ಟಜನಮರ್ದನಾ
ಬಣ್ಣಾ ಬಣ್ಣಾದ ಘನ್ನಾ ವರ್ಣಾ ಸುಪರ್ನ ವಾ-
ಹನ್ನಾ ಭವಾರಣ್ಯದಾಹನ್ನ ನಿತ್ಯಾ
ಜೊನ್ನ ಪ್ರಕಾಶ ಧಿಕ್ಕರಿಸುವ ತೇಜಾ ಪ್ರ-
ಸನ್ನಾ ಕೇಶವ ಭಂಜನ್ನಾ ಸುರನಿರಂಜನ್ನಾ
ಎನ್ನಂತರಂಗದೊಳಗಿಪ್ಪ **ವಿಜಯವಿಠ್ಠಲಾ**
ಅನಂತಗಿರಿ ವಾಸಾ **ನರಕೇಸರಿವೇಷಾ** || ||೧||

ಕಲ್ಪಾಯು ಪಡೆದ ಮುನಿ ಮಾರ್ಕಂಡೇಯಾ
ಸರ್ಪಗಿರಿಯಲ್ಲಿ ಶ್ರೀನಿವಾಸನ ನೋಡಿ
ತಪ್ಪದೆ ದೇವನ್ನ ವರವ ಸಂಪಾದಿಸೆ
ವಪ್ಪದಿಂದಲಿ ಈ ಗಿರಿಯಾ ಕಡೆ ಭಾಗಾ
ತಪ್ಪಾಲಲ್ಲೀ ಪೋಗಿ ತಪವನು ಮಾಡೆಂದು
ಅಪ್ಪಣೆ ಕೊಡಲಾಗಿ ಶುದ್ಧನವೊಡಗೂಡಿ
ಸುಪ್ರೀತಿಯಿಂದ ಭುವನವ ಸಂಚರಿಸೀ
ಅಪ್ರತಿಯಾಗಿದ್ದ ಸ್ಥಳವನೆ ನೀಕ್ಷಿಸುತ
ಮುಪ್ಪುರದೊಳಗಿದಕೆ ಎದರು ಗಾಣೆನೆಂದು

ಅಲ್ಪಾ ಮನಸು ಮಾಡದೆ ವಾಸವಾದನು ಇಲ್ಲಿ
ಮುಪ್ಪುಯಿಲ್ಲದ ದೇವ ವಿಜಯವಿಠ್ಠಲನ್ನಾ
ವರ್ಷಗಳು ಗುಣಿಸಿ ಧ್ಯಾನವ ಐದಿದನೂ ॥ ॥೨॥

॥ ತ್ರಿವಿಡಿತಾಳ ॥

ಹದಿನಾಲ್ಕು ಸಾವಿರ ವರ್ಷ ಭಕುತಿಯಿಂದ
ಒದಗಿ ತಪವಮಾಡಿ ಆಹಾರ ತೊರೆದೂ
ಮುದದಿಂದ ಬಂದು ನೇಮವಮಾಡಿ ಕೊಂಡಿಪ್ಪ
ಸದಮಲವಾದ ಅಹೋಬಲರಾಯನ
ಪದದರುಶನ ಮತ್ತೆ ಭುವನಾಶಿ ಮಜ್ಜನ
ಬುಧನು ಬಿಡದೆ ಒಂದು ಗುಹಾದಿಂದ
ಉದಯಕಾಲಕೆ ಪೋಗಿ ಬಲಗೊಂಡು ಬರುವಾ ಪ್ರಾಂ-
ತ್ಯದಲಿ ಬಂದಾಯಿತು ಕೇಳಿ ಜನರೂ
ಅದು ಭೂತಾದಿವಸ್ತ ಪ್ರಾಪ್ತವಾಯಿತು
ಮೊದಲು ಚಾತುರ್ಮಾಸ್ಯ ಏಕಾದಶೀ
ಅದರ ತರುವಾಯ ಕಳಮಾತ್ರ ಸಾಧನೆ
ಪದವಿಗೆ ಕೇವಲಾ ಶುಚಿಮಾರ್ಗವೋ
ಇದು ಉಲ್ಲಂಘಿಸಿದರೆ ಪಾಪ ಅಲ್ಲಿಗೆ ಪೋಗಾದೋ
ಇದ್ದಾರೆ ಎನ್ನನೇಮು ಭಂಗ
ಹದುಳ ತೊರದೇ ಮೌನಿ ಉಭಯ ಸಂಕಟದಿಂದ
ಪದುಮನಾಭನ ಚರಣ ನೆನೆಸಿ ಗುಣಿಸೆ
ಅದೆ ಅದೇ ಸಮಯದಲ್ಲಿ ದೇವ ನುಡಿದ ತಾನೆ
ಉದಯವಾಗದ ಮುನ್ನ ಅರುಣನ ಗತಿಗೆ
ನದಿ ಭವನಾಶಿಯಾ ಕರಕೊಂಡು ಪಾರಿಜಾ-
ತದ ವೃಕ್ಷ ಸಮೇತ ಬರುವೆನೆಂದೂ
ಹೃದಯದೊಳಗೆ ತಿಳಿಸಿ ಪೇಳಿದಂತೆ ಬಂದು

ಉದುಭವನಾದನು ಅಹೋಬಲರಾಯಾ
ಗಡಗಡನೆ ನಡುಗುತ್ತಾ ಅಂಜಳಿ ಪುಟದಿಂದ
ತೊದಲು ವಾಕ್ಯಗಳಿಂದ ಹರಿಯ ಸ್ತುತಿಸಿ
ತ್ರಿದಿಶಾದಿ ವಂದ್ಯ ನಾರಸಿಂಹನೆ ಪರಮಾ ಸು-
ಹೃದಯನೆ ಅನಂತನಾಮಕ ದೇವನೆ
ಮದಡಮತಿಗೆ ಒಲಿದು ಉದ್ಧರಿಸಿದೆ ಎಂದು
ಹದನವರಿತು ಪುಣ್ಯ ಫಳಿಸಿಕೊಂಡ
ಮಧುವೈರಿ ವಿಜಯವಿಠ್ಠಲ ಇಲ್ಲಿ ಪೊಳೆಯಲು
ವಿಧಿ ಶಿವಾದ್ಯರು ಬಂದು ವಾಲಗ ಮಾಡಿದರು ॥ ॥೩॥

|| ಅಟ್ಟತಾಳ ||

ಅನುಗ್ರಹ ಮಾಡಿದೆ ಅನಿಮಿತ್ತ ಬಂಧುವೆ
ಎನಗೊಂದು ವರವ ಪಾಲಿಸುವದು ನೀನಿಲ್ಲಿ
ಅನುಗಾಲಾ ವಾಸಾವಾಗಿರಬೇಕು ತೊಲಗಾದೆ
ವನದಿ ಸಂಭವೆ ಬೊಮ್ಮ ಶಂಭು ಸುರರು ಮಿಕ್ಕ
ಮುನಿ ಮನುಗಳು ತೀರ್ಥಾಭಿಮಾನಿಗಳಾ
ಜನರೆಲ್ಲಾ ಸನ್ನಿಧಿಯಾಗಿರಬೇಕು
ಮನುಜನಾವನು ಇಲ್ಲಿಗೆ ಬಂದರವನಿಗೆ
ಘನ ಪಾಪಾ ಓಡಿಸಿ ಪುಣ್ಯಾವ ತಂದಿತ್ತು
ಜನುಮಾಜನುಮಾದಲ್ಲಿ ಜ್ಞಾನವನೆ ಕೊಟ್ಟು ನಿ-
ನ್ನನೆ ಧೇನಿಸುವಂತೆ ಕೃಪೆಮಾಡು ಎನಲಾಗಿ
ಮುನಿಗೆ ಒಲಿದು ವರವನು ಇತ್ತನು ಇತ್ತಾ
ಕನಕಮಯವಾದಾದ ಗಿರಿ ಇದ ಇದೆ ಇದೆ
ವನಧಿ ಬಂಧನ ಕುರುಜಾಂಗುಲಿ ವಿಶಾಲಾ
ಮಣಿ ಕರ್ಣಿಕೆ ಕಾಶಿ ಶ್ರೀ ರಂಗ ಕ್ಷೇತ್ರ

ಮಣಿಯಾಗಿಪ್ಪಾದೆಂದು ಅತಿಶಯವಾದಾ ಮಾ-
ತನು ಕೊಟ್ಟ ಪರಮಾತ್ಮ
ದಿನ ಒಂದು ಮೂರೈದು ಏಳೆಂಟು ಒಂಭತ್ತು
(ಇನಿತರ ಮೇಲೆ ಪೆಗ್ಗಳವಾಗಿ ಇದ್ದರು
ಅನಿಮಿಷ ಗಂಗಾತೀರದಲ್ಲಿ ಶತವತ್ಸ
ರನುಸರಿಸಿ ಇದ್ದ ಫಲಕೆ ಮಿಗಿಲಯ್ಯಾ)
ಎಣಿಕೆ ಮಾಡುವರ್‍ಯಾರು ಈ ಕ್ಷೇತ್ರದ ಯಾತ್ರೆ
ಜನುಮದೊಳಗೆ ಒಮ್ಮೆ ಸಾರಿದಾನಂತ
ಜನನಕೆ ಯಾತ್ರೆ ಮಾಡಿದಂಥ ಫಲವಕ್ಕು
ಕನಸೀಲಿ ಮನಸೀಲಿ ಚಿಂತಿಸೆ
ಧನವಂತನಾಗುವಾ ಇಹ ಪರದಲ್ಲಿ ಸೌಖ್ಯ
ಹನುಮಾ ವಂದಿತ ನಮ್ಮ ವಿಜಯವಿಠ್ಠಲರೇಯಾ
ಸನತ್ಕುಮಾರ ನಾರದರಿಗೆ ಒಲಿದ ಕಾಣೋ ॥ ॥೪॥

ಎಸೆವಾ ತೀರ್ಥಗಳುಂಟು ಶೇಷ ಮಾರ್ಕಾಂಡ ಬ್ರಹ್ಮಾ
ಬಿಸರುಹನಾಭಾ ಲಕುಮೀ ಹನುಮಾ ರುದ್ರ ರುದ್ರಾಣಿ
ಋಷಿ ಗೌತುಮಾ ವಿಭಾಂಡಾ ಸ್ಕಂದ ಅಂತರಗಂಗೆ
ಬೆಸಸುವ ಭೈರವ ಪಾಪವಿನಾಶನ
ವಸುಧೆಯೊಳಗಿದ್ದ ಎಲ್ಲಾ ತೀರ್ಥಗಳಕ್ಕು
ಬೆಸನೆ(ಬೆಸನೆ)ಲೋಕದ ಜನರು ಬಂದು ವಿಧಾನ ತಿಳಿದು
ಕುಶಲಮತಿಯಿಂದಾ ಸತ್ಕರ್ಮಾಚರಿಸಲು
ವಶವಾಗಿಪ್ಪಾರು ಸರ್ವ ದೇವತೆಗಳು
ವಿಷಯಗಳಲಿ ಬಿದ್ದು ಕೆಟ್ಟು ಪೋಗದೆ ರ-
ಕ್ಕಸ ಯೋಗ ಮಾಡದಿರಿ ಗತಿಗೆ ಮಾರ್ಗವಾಗದು
ಅಸುರ ವಿರೋಧಿ ನಮ್ಮ ವಿಜಯವಿಠ್ಠಲರೇಯಾ
ನಸುನಗುತ ಗಂಡಿಕಿ ಶಿಲೆಯೊಳಗಿರುತಿಪ್ಪ ॥ ॥೫॥

|| ಜೊತೆ ||

ಪರಮಾಯು ಸಿದ್ಧಿಪುದು ಮಾರ್ಕಂಡ್ಯಕ್ಷೇತ್ರಾ
ನರಸಿಂಹಾನಂತಾ ವಿಜಯವಿಠ್ಠಲವಾಸಾ ||



**ಅರ್ಥವಿವರಣೆ :**

**ಅಹೋಬಲ ಕ್ಷೇತ್ರವು**= ಆಂಧ್ರ ಪ್ರದೇಶದಲ್ಲಿರುವ ದಿವ್ಯಕ್ಷೇತ್ರ. ನಂದ್ಯಾಲದಿಂದ ಸಮೀಪ. ನಂದ್ಯಾಲ ಅಥವಾ ಕಡಪಾದಿಂದಾಗಲೀ ಬಸ್‌ನಲ್ಲಿ ಪ್ರಯಾಣ ಮಾಡಬಹುದು.

ಇಲ್ಲಿರುವ ಬೆಟ್ಟದ ಬುಡ, ಮಧ್ಯ ಮತ್ತು ಅಗ್ರ ಭಾಗಗಳಲ್ಲಿ-ಮೂರು ಪ್ರಾಚೀನ ದೇವಸ್ಥಾನಗಳಿವೆ. ಇಲ್ಲಿ **ಭವನಾಶನೀ**–ಎಂಬ ಪವಿತ್ರ ನದಿ ಇದೆ. ಅನೇಕ ತೀರ್ಥಗಳಿವೆ.

ಪುರಾಣ ಪ್ರಸಂಗ ಕಥಾನಕಗಳಲ್ಲಿ, ಹಿರಣ್ಯ ಕಶಿಪುವಿನ ರಾಜಧಾನಿ ಈ ಸ್ಥಳದಲ್ಲಿಯೇ ಇತ್ತೆಂದು ಐತಿಹ್ಯವಿದೆ. ಬಾಲ ಪ್ರಹ್ಲಾದನ ಮೊರೆಯನ್ನು ಕೇಳಿ, ಅವನ ವಚನವನ್ನು ಸತ್ಯವನ್ನಾಗಿಸಲು, ಶ್ರೀ ಹರಿಯು ನರಸಿಂಹ ರೂಪದಿಂದ ಪ್ರಕಟನಾಗಿ, ದುರುಳ ದಾನವನನ್ನು ಸಂಹರಿಸಿ, ಪ್ರಹ್ಲಾದವರದನೆನಿಸಿದನು. ಈ ಸ್ಥಳದಲ್ಲಿ ಹಿರಣ್ಯ ಕಶಿಪುವಿನ ಅರಮನೆ–ಪ್ರಹ್ಲಾದನು ಅಕ್ಷರಾಭ್ಯಾಸ ಮಾಡಿದ ಬಂಡೆ. ಮುಂತಾದ ಸ್ಮಾರಕಗಳಿವೆ. ಅರ್ಜುನನು ತೀರ್ಥಯಾತ್ರಾ ಕಾಲದಲ್ಲಿ ಇಲ್ಲಿಗೂ ಬಂದಿದ್ದನೆಂದು ಇತಿಹಾಸ ಉಲ್ಲೇಖವಿದೆ, ಶ್ರೀ ರಾಮಚಂದ್ರನು ವನವಾಸದಲ್ಲಿದ್ದಾಗ, ಈ ಕ್ಷೇತ್ರಕ್ಕೂ ಬಂದಿದ್ದನೆಂದು ಪುರಾಣದ ಐತಿಹ್ಯವಿದೆ. ಈ ಕ್ಷೇತ್ರಕ್ಕೆ–**ನವನಾರಸಿಂಹ ಕ್ಷೇತ್ರ**-ವೆಂದು ಹೆಸರು.

ಈ ನವನಾರಸಿಂಹರ ವಿವರ ಇಂತಿದೆ-

(೧) ಜ್ವಾಲಾ ನರಸಿಂಹ. (೨) ಅಹೋಬಲ ನರಸಿಂಹ. (೩) ಮಾಮೋಲ ನರಸಿಂಹ. (೪) ಕ್ರೋಡಾಕಾರ ನರಸಿಂಹ. (೫) ಕಾರಂಜ ನೃಸಿಂಹ. (೬) ಭಾರ್ಗವ ನರಸಿಂಹ. (೭) ಯೋಗಾನಂದ ನರಸಿಂಹ. (೮) ಛತ್ರವಟ ನರಸಿಂಹ ಮತ್ತು (೯) ಪಾವನನೃಸಿಂಹ.

**ತೀರ್ಥಪ್ರಬಂಧದಲ್ಲಿ ಶ್ರೀ ವಾದಿರಾಜ ಸ್ವಾಮಿಗಳು–**

**ಅಹೋಬಲ ನೃಸಿಂಹಸ್ಯ ಮಹೋಬಲ ಮುಪಾಶ್ರಿತಾಃ |**
**ಅಸತ್ತ ಮಿಸ್ರ ಸಂಮಿಶ್ರಾಂ ಗಣಯಾಮೋ ನ ಸಂಸೃತಿಂ ||**
**-ಎಂದು ವರ್ಣಿಸಿರುತ್ತಾರೆ.**

ಅಂದರೆ, ಅಹೋಬಲ ಕ್ಷೇತ್ರಸ್ಥ ನರಸಿಂಹನ, ತೇಜಸ್ಸಿನ ಬಲವನ್ನು, ಆಶ್ರಯಿಸಿರುವ ನಾವು, ದುರ್ಜನರೆಂಬ ಅಂಧಕಾರದಿಂದ ಮಿಶ್ರಿತವಾದ ಸಂಸಾರವನ್ನು ಲೆಕ್ಕಿಸುವುದಿಲ್ಲ,

**ಪ್ರತಿಪದಾರ್ಥ :–**

**ಅನಂತ** = ಗಣನೆಗೆ ಸಿಗದ (ಸಾಕಲ್ಯೇನ ಯಾರಿಂದಲೂ ತಿಳಿಯಲು ಸಾಧ್ಯವಾಗದಿರುವ ಶ್ರೀ ಹರಿಯು), **ಅನಂತಶಯನಾ** = ಶೇಷ ಶಯನನು (ಅನಂತ–ಸಾವಿರ ಹೆಡೆಯುಳ್ಳ ಆದಿಶೇಷ ದೇವರು), **ಅಂಬುಜ ದಳ ನಯನಾ** = ಕಮಲಪುಷ್ಪದ ದಳದಂತೆ ವಿಶಾಲ ನೇತ್ರವುಳ್ಳ, **ಉನ್ನಂತ ಗುಣ ನಿಲಯ** = ರಮಾ ಬ್ರಹ್ಮಾದಿ ಯಾರಲ್ಲಿಯೂ ಇಲ್ಲದ ಅತ್ಯಂತ ಉತ್ಕೃಷ್ಟವಾದ ಗುಣಗಣಧಾಮ, **ಪನ್ನಗಗೇಯ** = ಸರ್ವ ಶ್ರೇಷ್ಠರಾದ ಶ್ರೀ ಶೇಷ ದೇವರಿಂದ ಸಂಸ್ತುತ್ಯಮಾನನು, **ಘನ್ನ ಕಾರುಣ್ಯ ಮೂರ್ತಿ** = ನಿಬಿಡೀಕೃತವಾದ (ಸ್ವಗರ್ತಭೇದ ವಿವರ್ಜಿತತ್ವ) ದಯಾಮೂರ್ತಿ, **ಸತತ ಮಂಗಳ ಕೀರ್ತಿ** = ಶಶ್ವದೇಕ ಪ್ರಕಾರನು. ಸರ್ವ ಮಂಗಳ ನಾಮಧೇಯ,

**ಚೆನ್ನ** =ಕೋಟಿ ಮನ್ಮಥ ಲಾವಣ್ಯವಂತನು (ಸಾಕ್ಷಾತ್ ಮನ್ಮಥ ಮನ್ಮಥಃ), **ಪ್ರಸನ್ನ** = ಭಕ್ತರಿಗೆ ಅನುಗ್ರಹಪ್ರದನು, **ರನ್ನ** = ಅಪ್ರಾಕೃತ ವಸ್ತು, **ಶಿರಿ ಸಂಪನ್ನ** = ಷಡ್ಗುಣೈಶ್ವರ್ಯ ಸಂಪನ್ನನು.

**ಚಿನ್ನಾಂಬರ** = ಪೀತಾಂಬರಧಾರಿ, **ಚಿನ್ನ ರೂಪ** = ಮಾಣವಕ ರೂಪನಾದ ಶ್ರೀ ವಾಮನರೂಪೀ, **ಚಿನ್ಮಯ ಕಾಯ** = ಚಿದಾನಂದಾತ್ಮಕ ದೇಹವುಳ್ಳವನು, **ಭಿನ್ನ ಜೀವರ** = ಸಕಲ ಜೀವವರ್ಗದವರಿಂದ ಅತ್ಯಂತ (ಭಿನ್ನರೂಪನು), **ಅಪರಿಚ್ಛಿನ್ನ** ಸರ್ವತ್ರ ಪರಿಪೂರ್ಣನಾಗಿರುವವನು, **ವ್ಯಾಪ್ತಾ** = ಸರ್ವತ್ರ ವ್ಯಾಪ್ತನು, **ಪನ್ನಗ ನಾಗಾ ತಲ್ಪಾ** = ಸರ್ವಶ್ರೇಷ್ಠರಾದ ಶೇಷ ದೇವರನ್ನೇ ಹಾಸಿಗೆಯನ್ನಾಗಿ ಉಳ್ಳವನು. ಅಂದರೆ, ಶೇಷಶಯನನೆಂದು ತಾತ್ಪರ್ಯ, **ನಾಗಭಯ ವಿನಾಶ** = ಸರ್ಪಗಳಿಂದ ಆಗುವ ಭಯಗಳನ್ನು ಪರಿಹರಿಸುವವನು, **ಜುನ್ನಾ ಚೋರ** = ಹಾಲು ಬೆಣ್ಣೆಗಳನ್ನು ಕದ್ದ ಶ್ರೀ ಕೃಷ್ಣ (ಕ್ಷೀರೋತ್ಪನ್ನ ವಸ್ತುಗಳಿಗೆ ಜುನ್ನಾ-ಎಂದು ಹೆಸರು), **ಚತುರಾ** = ಅತ್ಯಂತ ಕುಶಲಿಯು, **ಚತುರ್ಮೊಗನ ಅಯ್ಯಾ** = ಚತುರ್ಮುಖ ಬ್ರಹ್ಮನ ತಂದೆ (ಬ್ರಹ್ಮದೇವರು ಶ್ರೀ ಹರಿಯ ನಾಭೀಕಮಲಸಂಜಾತರು-ಪದ್ಮ ಸೃಷ್ಠಿಯಲ್ಲಿ. ಸೂಕ್ಷ್ಮ ಸೃಷ್ಠಿಯಲ್ಲಿ ಮಾಯಾ ದೇವಿಯಲ್ಲಿ ವಾಸುದೇವನಿಂದ ಸಂಜಾತರು, **ಅಣೋರಣೀ** = ಅಣುಗಳಲ್ಲಿ ಅವುಗಳಿಗಿಂತ ಅಣುತ್ವ ಮತ್ತು ಮಹತ್ತರ ವಸ್ತುಗಳಲ್ಲಿ ಅವುಗಳಿಗಿಂತ ಬೃಹತ್ತಾದ ಆವರಣ ರೂಪದಲ್ಲಿರುವವನು), **ಅಜರಾ** = ಮುಪ್ಪಿಲ್ಲದವನು. ಆದಿ ಮಧ್ಯಾಂತ ರಹಿತನು), **ಅನಾದಿ ದೇವ** = ಸರ್ವಕ್ಕೂ ಮೂಲ ಕಾರಣ ರೂಪನು (ಪುರಾಣ ಪುರುಷನು), **ಪಾವನ್ನ** = ಅತ್ಯಂತ ಪರಮ ಪವಿತ್ರ ವಸ್ತು (ಸಕಲ ದೋಷಗಳಿಂದ ರಹಿತನು), **ದುಷ್ಟ ಜನ ಮರ್ದನಾ** = ತಮೋಯೋಗ್ಯರಾದ ದುಷ್ಟರನ್ನು ಸಂಹರಿಸುವವನು (ದುಷ್ಟ ಶಿಕ್ಷಕನು), **ಘನ್ನವರ್ಣಾ** = ನೀಲಮೇಘ ಶ್ಯಾಮಲ ವರ್ಣ ವಿಶಿಷ್ಟನು (ಘನ್ನ-ನಿಬಿಡೀಕೃತವಾದ ಮೇಘಗಳು),

**ಸುಪರ್ಣ ವಾಹನ್ನಾ**= ಗರುಡನನ್ನೇ ವಾಹನವಾಗಿ ಉಳ್ಳವನು (ಸುಪರ್ಣ-ಬಂಗಾರದ ಕಾಂತಿಯಂತೆ ಹೊಳೆಯುವ ರೆಕ್ಕೆಗಳಿರುವ ಶ್ರೀಗರುಡ ದೇವರು), **ಭವಾರಣ್ಯ ದಾಹನ್ನಾ**= ಸಂಸಾರವೆಂಬ ದಟ್ಟವಾದ ಅರಣ್ಯಕ್ಕೆ ಅಗ್ನಿ ಸದೃಶನು, **ನಿತ್ಯಾ**= ಅಚ್ಯುತನಾಮನು ಶಶ್ವದೇಕ ಪ್ರಕಾರನಾಗಿ ಚತುರ್ವಿಧ ನಾಶರಹಿತನು, **ಜ್ಞಾನ್ನಾ ಪ್ರಕಾಶ**= ಅನಂತಕೋಟಿ ಸೂರ್ಯ ಪ್ರಕಾಶನು. (ಸೂರ್ಯನ ಪ್ರಕಾಶವನ್ನು ಧಿಕ್ಕರಿಸುವ ಕಾಂತಿಯುಕ್ತನು), **ಕೇಶವ ಭಂಜನ್ನಾ**= ಕೇಶೀ ಎಂಬ ಹಯರೂಪದಲ್ಲಿ ಬಂದಿದ್ದ ಪ್ರಬಲನಾದ ದೈತ್ಯನನ್ನು ಸಂಹರಿಸಿದ ಶ್ರೀ ಕೃಷ್ಣ, **ಸುರ ನಿರಂಜನ್ನಾ**= ದೇವ ದೇವೋತ್ತಮನು, ನಿರ್ದೋಷಿಯಾದವ, ಅನಂತ ಕಲ್ಯಾಣ ಗುಣಗಣಧಾಮನು, **ಎನ್ನಂತರಂಗದೊಳು ಇಪ್ಪ**= ಎನ್ನ ಹೃದಯಾಕಾಶಗತ ಹೃತ್ಪದ್ಮದಲ್ಲಿ ವಿರಾಜಮಾನನಾಗಿರುವ ಅಸ್ಮದ್ಬಿಂಬ ಮೂರುತೀ, **ಅನಂತಗಿರಿವಾಸಾ**= ಅಹೋಬಲ ಕ್ಷೇತ್ರವಾಸೀ ಶ್ರೀ ನರಸಿಂಹನೇ (ಅಹೋಬಲ ಕ್ಷೇತ್ರಕ್ಕೆ "ಅನಂತ ಗಿರಿ"-ಎಂದು ಹೆಸರು), **ನರಿ ಕೇಸರಿ ವೇಷಾ**= ನರಸಿಂಹರೂಪದಿಂದ ಪ್ರಕಟನಾದವನೇ, (ನರ-ಮಾನವ ರೂಪ-ಕೇಸರೀ-ಸಿಂಹರೂಪ. ವೇಷಾ-ಈ ರೂಪವನ್ನು ಧಾರಣ ಮಾಡಿದ ಶ್ರೀ ಹರಿ).

**ತಾಳೆ-೨**

**ಕಲ್ಪಾಯು ಪಡೆದ**= ಚಿರಂಜೀವಿ ಎನಿಸಿದ (ಶ್ರೀ ರುದ್ರದೇವರಿಂದ ಅನುಗ್ರಹೀತನಾಗಿ, ಚಿರಾಯುವಾದ), **ಮುನಿ ಮಾರ್ಕಂಡೇಯ**= ಮಾರ್ಕಂಡೇಯ ಋಷಿಯು. ಸ್ವಾಯಂಭುವ ಮನ್ವಂತರದಲ್ಲಿ ಬ್ರಹ್ಮ ಮಾನಸ ಪುತ್ರನಾದ ಭೃಗು ಮಹರ್ಷಿಯ ಸಂತತಿಯಲ್ಲಿ ಜನಿಸಿದ ಮೃಕಂಡು ಮುನಿಯ ಮಗ. ಮಾರ್ಕಂಡೇಯನು ಮಹರುದ್ರ ದೇವರನ್ನು ತಪಸ್ಸಿನಿಂದ ಮೆಚ್ಚಿಸಿ, ೧೪ ಕಲ್ಪಗಳವರೆಗಿನ ದೀರ್ಘಾಯುಷ್ಯವನ್ನು ಪಡೆದ ಮುನಿ ಪುಂಗವನು. ಈತನ ಪತ್ನಿ-**ಧೂಮೋರ್ಣೆ** ಎಂಬುವಳು. ಯಮ ಪಾಶವನ್ನು ತಪ್ಪಿಸಿಕೊಂಡು, ಅಪಮೃತ್ಯುವನ್ನು ಶಿವನ ವರಪ್ರಸಾದದಿಂದ

**ಕಳೆದುಕೊಂಡ ಚಿರಂಜೀವಿ.** ಶ್ರೀ ಹರಿಯ ಮಾಯೆಯಿಂದ ಕಲ್ಪಿತವಾದ ಮಹಾ ಪ್ರಳಯವನ್ನು ಕಂಡ ಪ್ರಸಂಗ ವಿಶೇಷ.

**ಸರ್ಪಗಿರಿಯಲ್ಲಿ** = ಶೇಷ ಪರ್ವತದಲ್ಲಿ, **ಶ್ರೀನಿವಾಸನ ನೋಡಿ** = ಶ್ರೀ ಹರಿಯ ಪ್ರಸಾದ ರೂಪವಾದ ಪರಮಾನುಗ್ರಹವನ್ನು ಪಡೆದು, **ವಪ್ಪದಿಂದಲಿ** = ಚೆಂದಾಗಿ, **ಈ ಗಿರಿಯ ಕಡೆ....** ಅನಂತ ಗಿರಿಯಿಂದ ವಿಖ್ಯಾತವಾದ ಈ ಅಹೋಬಲ ಕ್ಷೇತ್ರದ, **ಭಾಗಾ ತಪ್ಪಾಲಲ್ಲೀ ಪೋಗಿ** = ಗಿರಿಯ ತಪ್ಪಲನ್ನು (ಕೆಳಭಾಗ) ಸೇರಿ, **ತಪವನು ಮಾಡೆಂದು ಅಪ್ಪಣೆ ಕೊಡಲಾಗಿ** = ತಪಸ್ಸನ್ನು ಆಚರಿಸೆಂದು ಶ್ರೀ ಹರಿಯಿಂದ ಆಜ್ಞಪ್ತನಾಗಿ, **ಶುದ್ಧನವೊಡಗೂಡಿ** = ತ್ರಿಕರಣ ಶುದ್ಧಿ ಪೂರ್ವಕವಾಗಿ, **ಸುಪ್ರೀತಿಯಿಂದ** = ಅತ್ಯಂತ ಶ್ರದ್ಧಾ ಭಕ್ತಿಗಳಿಂದ ಕೂಡಿಕೊಂಡು, **ಭುವನವ ಸಂಚರಿಸಿ** = ಲೋಕ ಸಂಚಾರ ಮಾಡಿ, **ಅಪ್ರತಿಯಾಗಿದ್ದ ಸ್ಥಳವನೆ ನೀಕ್ಷಿಸುತ** = ಅಸದೃಶವಾದ ಪವಿತ್ರ ಕ್ಷೇತ್ರವನ್ನು ಅರಸುತ್ತಾ, **ಮುಪ್ಪುರದೊಳಗೆ ಇದಕೆ** = ಮೂಲೋಕಗಳಲ್ಲಿ (ಮೂರುಪುರ ಮುಪ್ಪುರ) ಈ ಕ್ಷೇತ್ರಕ್ಕೆ, **ಎಡರು ಗಾಣೆನೆಂದು** = ಸಮಾನವಿಲ್ಲ ಎಂದು ತಿಳಿದು, **ಅಲ್ಪ ಮನಸು ಮಾಡದೆ....** ಸಂಕೋಚ ಮನಸ್ಸನ್ನು ಮಾಡದೇ, ಅಂದರೆ, ಸ್ಥಿರ ಮನಸ್ಸಿನಿಂದ, **ವಾಸವಾದನು ಇಲ್ಲಿ....** ಈ ಕ್ಷೇತ್ರದಲ್ಲಿ ವಾಸ ಮಾಡಿದನು. ಇದರಿಂದ ಅಹೋಬಲ ಕ್ಷೇತ್ರಕ್ಕೆ "ಮಾರ್ಕಂಡೇಯ ಕ್ಷೇತ್ರ"-ವೆಂತಲೂ ಹೆಸರಿದೆ.

**ಮುಪ್ಪು ಇಲ್ಲದ ದೇವ** = ವೃದ್ಧಾಪ್ಯ ರಹಿತನಾದ, ಅಂದರೆ ಜನನ ಮರಣ ವಿದೂರನಾದ (ಆದಿಮಧ್ಯ ಅಂತರಹಿತವಾದ ಅನಾದಿ ನಿತ್ಯ ಶಾಶ್ವತವಾದ) ಶ್ರೀ ವಿಜಯವಿಠ್ಠಲಾಭಿನ್ನ ಅಹೋಬಲ ನರಸಿಂಹ ದೇವರನ್ನು, **ವರ್ಷಗಳು ಗುಣಿಸಿ....** ದೀರ್ಘಕಾಲ ಪರ್ಯಂತ, **ಧ್ಯಾನವ ಹಿಡಿದನೂ** = ಘೋರವಾದ ತಪಸ್ಸನ್ನು ಆಚರಿಸಿದನು.

**ತಾಳಿ-೩**

**ಪದಿನಾಲ್ಕು ಸಾವಿರ ವರ್ಷ....** ಹದಿನಾಲ್ಕು ಸಾವಿರ ವರ್ಷಗಳು, **ಭಕುತಿಯಿಂದ ಒದಗಿ ತಪವ ಮಾಡಿ** = ಭಕ್ತಿ ಪುರಸ್ಸರವಾಗಿ ತಪಸ್ಸನ್ನು ಗೈದು, **ಆಹಾರ ತೊರೆದೂ** = ನಿದ್ರಾಹಾರಗಳನ್ನು ತ್ಯಜಿಸಿ, **ಮುದದಿಂದ** = ಅತ್ಯಂತ ಸಂತೋಷದಿಂದ, **ಬಂದು ನೇಮವ ಮಾಡಿಕೊಂಡಿಪ್ಪ** = ಆ ಕ್ಷೇತ್ರಕ್ಕೆ ಸೇರಿ, ನೇಮ ನಿಯಮ ನಿಷ್ಠರಾಗಿ, **ಸದಮಲವಾದ** = ನಿರ್ದೋಷನೂ ಮತ್ತು ಅನಂತ ಕಲ್ಯಾಣ ಗುಣಗಣ ಪರಿಪೂರ್ಣನೂ ಆದ, **ಅಹೋಬಲ ರಾಯನ....** ಕ್ಷೇತ್ರಸ್ಥ ಅಹೋಬಲ ನರಸಿಂಹನ, **ಪದದರುಶನ** = ಚರಣ ಕಮಲದ ಸಂದರ್ಶನವನ್ನಿತ್ತು, **ಮತ್ತೆ** = ಅನಂತರ, **ಭವನಾಶಿ ಮಜ್ಜನು ಬುಧನು** = ಭವನಾಶಿ ನದಿಯಲ್ಲಿ ಸ್ನಾನ ಮಾಡಿ, **ಬಂದು ಗುಹಾದಿಂದ** = ಪರ್ವತದ ಗುಹೆಯಿಂದ ಬಂದು, **ಉದಯ ಕಾಲಕೆ ಪೋಗಿ** = ಬ್ರಾಹ್ಮೀ ಮುಹೂರ್ತಕ್ಕೆ ಬಂದು, **ಬಲಗೊಂಡು ಬರುವಾ** = ಪ್ರದಕ್ಷಿಣೆ ನಮಸ್ಕಾರ ಪೂರ್ವಕವಾಗಿ ಬರುವ, **ಪ್ರಾಂತ್ಯದಲಿ ಬಂದಾಯಿತು ಕೇಳಿ ಜನರೂ** = ಕೊನೆಯಲ್ಲಿ ಬಂದು ಸೇವಿಸುವ ವಿಷಯವನ್ನು ಕೇಳಿ ಸುಜನರು.

**ಅದು ಭೂತಾದಿ ವಸ್ತ ಪ್ರಾಪ್ತವಾಯಿತು ....** ಭೂತಾದಿಗಳಿಂದ ಪ್ರಾಪ್ತವಾಗುವ ಭಯಾದಿಗಳು ಪರಿಹಾರ, **ಮಾಡಲು ಏಕಾದಶೀ ಚಾತುರ್ಮಾಸ್ಯ** = ಏಕಾದಶೀ ವ್ರತ ಮತ್ತು ಚಾತುರ್ಮಾಸ್ಯ ವ್ರತ, **ಅದರ ತರುವಾಯ** = ಆದಾದ ನಂತರ, **ಕಳಮಾತ್ರ ಸಾಧನೆ....** ಅಲ್ಪ ಮಾತ್ರ ಸಾಧನಾ ಕ್ರಮ, **ಪರವಿಗೆ ಕೇವಲ ಶುಚಿ ಮಾರ್ಗವೋ** = ಮೋಕ್ಷ ಪದವಿಗೆ ಅತ್ಯಂತ ಶುದ್ಧವಾದ ಪಥವು, **ಇದು ಉಲ್ಲಂಘಿಸಿದರೆ** = ಈ ನೇಮ ವ್ರತಾದಿಗಳನ್ನು-ಉಪೇಕ್ಷಿಸಿದ್ದೇ ಆದರೆ, **ಪಾಪ ಅಲ್ಲಿಗೆ ಪೋಗಾದೋ** = ಕರ್ಮಜನ್ಯವಾದ ಪಾಪಗಳು ಹೋಗಲಾರವು.

**ಇದ್ದಾರೆ ನೇಮಭಂಗ....** ಹಾಗಿದ್ದಿದ್ದೇ ಆದರೆ, ವ್ರತ ನೇಮ ನಿಷ್ಠೆ ಭಂಗದಿಂದ, **ಹದುಳ ಮಾರ್ಗ ತೋರದೇ** = ಕ್ಷೇಮ ಮಾರ್ಗ ಕಾಣದೇ,

**ಮೌನಿ** = ಮಾರ್ಕಂಡೇಯ ಋಷಿಯು, **ಉಭಯ ಸಂಕಟದಿಂದ** = ಉಭಯ ಸಂಕಟಕ್ಕೆ ವಶನಾಗಿ, **ಪದುಮನಾಭನ ಚರಣನೆನೆಸಿ ಗುಣಿಸಿ** = ಪದ್ಮನಾಭ ದೇವರ ಪಾದ ಕಮಲಗಳನ್ನು ಧ್ಯಾನಿಸಿ, ಚಿಂತನೆಯ ಮಾಡೆ, **ಅದೇ ಅದೇ ಸಮಯದಲ್ಲಿ** = ಆ ಕಾಲದಲ್ಲಿ, **ಉದಯವಾಗದ ಮುನ್ನ** = ಸೂರ್ಯೋದಯಕ್ಕಿಂತ **ಪೂರ್ವ**, **ಅರುಣನ ಗತಿಗೆ** = ಸೂರ್ಯನ ಸಾರಥಿಯಾದ ಅರುಣನ ಪಥಕ್ಕೆ, ಅಂದರೆ ಅರುಣೋದಯ ಸಮಯದಲ್ಲಿ, **ನದಿ ಭವನಾಶಿಯಾ ಕರಕೊಂಡು** ಅಹೋಬಲ ಕ್ಷೇತ್ರದಲ್ಲಿ ಹರಿಯುವ ಭವ ನಾಶಿನಿ ನದಿಯು, **ಪಾರಿಜಾತ ವೃಕ್ಷ ಸಮೇತ** = ಪಾರಿಜಾತ ವೃಕ್ಷದೊಡನೆ, **ಬರುವೆನೆಂದು** = ಬರುತ್ತೇನೆಂದು, **ಹೃದಯದೊಳಗೆ** = ಅಂತರಂಗದಲ್ಲಿ ನಿಂತು ಹೇಳಿದಂತೆ ಆಗಮಿಸಿ, **ಉದುಭವನಾದನು** = ಅಹೋಬಲರಾಯನು ಪ್ರಾಧುರ್ಭವಿಸಿದನು, **ಗಡಗಡನೆ ನಡುಗುತ್ತ.............ಹರಿಯ ಸ್ತುತಿಸಿ** = ಗದ್ಗತ ಕಂಠದಿಂದ, ಶರೀರ ರೋಮಾಂಚನಗೊಂಡು, ಮುಗಿದ ಕರ ದ್ವಯಗಳಿಂದ ತೊದಲು ನುಡಿಗಳಿಂದ ಶ್ರೀ ಹರಿಯ ಮಹಿಮಾತಿಶಯ ಗಳನ್ನು ಕೊಂಡಾಡುತ್ತಾ, **ತ್ರಿದಿಶಾದಿವಂದ್ಯ** = ಸಮಸ್ತ ದೇವತಾಗಣ ದಿಂದ ನಮ್ಯನಾದ ಶ್ರೀ ನರಸಿಂಹ ಮೂರ್ತಿಯೇ, **ವಾತ್ಸಲ್ಯಪೂರ್ಣವಾದ** ಹೃದಯವುಳ್ಳವನೇ, ಅನಂತ ನಾಮಗಳಿಂದ ಪ್ರಖ್ಯಾತನಾದ **ಅಪ್ರಮೇ ಯನೇ**, **ಮದಡ ಮತಿಗೆ ಒಲಿದು** = ಮಂದ ಭಾಗ್ಯನಾದ ನನಗೆ ಒಲಿದು, ಉದ್ಧಾರ ಮಾಡಿದೆ-ಎಂಬುದಾಗಿ, **ಹದವರಿತು** = ತನ್ನ ಯೋಗ್ಯತಾನು ಸಾರ ಪುಣ್ಯ ಪ್ರಾಪ್ತಿಯನ್ನು ಹೊಂದಿದವನಾಗಿ, **ಮಧುವೈರಿ** = ಮಧು ನಾಮಕ ದೈತ್ಯ ಸಂಹಾರಕನಾದ ಶ್ರೀ ವಿಜಯವಿಠ್ಠಲನಾಮಾತ್ಮಕ ಶ್ರೀ ಹರಿಯು ನರಸಿಂಹ ರೂಪಿಯಾಗಿ ಈ ಪುಣ್ಯ ಕ್ಷೇತ್ರದಲ್ಲಿ ಹೊಳೆಯುತ್ತಿರಲು, **ವಿಧಿ ಶಿವಾದ್ಯರು ಬಂದು** = ಬ್ರಹ್ಮ ರುದ್ರಾದಿ ಸಕಲ ದೇವತಾವರ್ಗ ಆಗ ಮಿಸಿ, ವೈಭವದಿಂದ ಪೂಜಿಸಿದರು. ||೩||

**ತಾಳಿ–೪**

**ಅನುಗ್ರಹ ಮಾಡಿದೆ** = ಪ್ರತಿಬಿಂಬರಾದ ಜೀವರಿಗೆ ಅನಿಮಿತ್ತ ಬಂಧು, ವಾದ ಬಿಂಬರೂಪೀ ಶ್ರೀ ಹರಿಯೇ, ನೀನು ನನಗೆ ಪರಮಾನುಗ್ರಹಗೈದೆ,

**ನಿನಗೊಂದು ವರವ ಪಾಲಿಸುವುದು** = ನನಗೆ ನೀನು ಒಂದು ವರವನ್ನು ನೀಡು ಸ್ವಾಮಿ !, **ನೀನಿಲ್ಲಿ ಅನುಗಾಲಾ** = ನೀನು ಪರಮಾನುಗ್ರಹ ಮಾಡಿ, ಈ ಕ್ಷೇತ್ರದಲ್ಲಿ ನಿರಂತರದಲ್ಲಿ ನೆಲೆಸಿ, ವಾಸಿಸಬೇಕು, **ವನಧಿ ಸಂಭವೆ** = ಕ್ಷೀರಸಮುದ್ರ ಕನ್ಯೆಯಾದ ಶ್ರೀ ಲಕ್ಷ್ಮೀದೇವಿ, **ಬೊಮ್ಮ ಶಂಭು ಸುರರು** = ಬ್ರಹ್ಮ ರುದ್ರಾದಿ ಸಮಸ್ತ ದೇವತಾಗಣ, **ಮಿಕ್ಕ ಮುನಿ ಮನುಗಳು....**ಉಳಿದ ಋಷಿ ಶ್ರೇಷ್ಠರು ಮತ್ತು ಮನ್ವಂತರಾಧಿಪತಿಗಳು, **ತೀರ್ಥಾಭಿಮಾನಿಗಳು** = ನದಿ ಮತ್ತು ತೀರ್ಥಾಭಿಮಾನಿ ದೇವತಾವರ್ಗ, **ಜನರೆಲ್ಲಾ....**ಸಕಲರೂ ಈ ಪುಣ್ಯ ಕ್ಷೇತ್ರದಲ್ಲಿ ಸನ್ನಿಹಿತರಾಗಿರಬೇಕು.

**ಮನುಜನಾವನು** = ಯಾವ ಮಾನವನಾಗಲೀ, ಈ **ಪಾವನ** ಕ್ಷೇತ್ರಕ್ಕೆ ಬಂದು, ಶ್ರೀ ಅಹೋಬಲ ನರಸಿಂಹನ ದರ್ಶನ ಭಾಗ್ಯವನ್ನು ಪಡೆದವನಿಗೆ, **ಘನಪಾಪ** ಓಡಿಸಿ = ದುಸ್ತರವಾದ ಸಕಲ ಪಾಪ ರಾಶಿಗಳನ್ನು ಪರಿಹರಿಸಿ, ಪುಣ್ಯ ಫಲವನ್ನು ಅನುಗ್ರಹಿಸಿ, **ಜನುಮಾ ಜನುಮಾದಲ್ಲಿ** = ಜನ್ಮ ಜನ್ಮಾಂತರಗಳಲ್ಲಿ ಜ್ಞಾನ ಸಂಪತ್ತನ್ನು ನೀಡಿ, **ನಿನ್ನನೆ ಧೇನಿಸುವಂತೆ** – ನಿನ್ನನ್ನೇ ನಿರಂತರದಲ್ಲಿ ಮನಸಾ ಧ್ಯಾನಿಸುವಂತೆ ಕರುಣಿಸು-ಎಂದು ಪ್ರಾರ್ಥಿಸುತ್ತಿದ್ದ, **ಮುನಿಗೆ ಒಲಿದು** = ಮಾರ್ಕಂಡೇಯ ಋಷಿಗೆ ಒಲಿದು, **ವರವನು ಇತ್ತನು** = ವರವನ್ನು ದಯಪಾಲಿಸಿದನು, **ಇತ್ತ** – ಈ ಕಡೆ, **ಕನಕಮಯವಾದಾಗಿರಿ** = ಸುವರ್ಣಮಯವಾದ ಮೇರು ಪರ್ವತಕ್ಕೆ ಸದೃಶವಾದ, **ಇದೆ**— ಈ ಅನಂತಾದ್ರಿಯು, **ವನಧಿ ಬಂಧನ** = ರಾಮೇಶ್ವರ (ಶ್ರೀ ರಾಮಚಂದ್ರ ಸ್ವಾಮಿಯು ಸಮುದ್ರ ಬಂಧನದಿಂದ ಸೇತು ನಿರ್ಮಾಣ ಮಾಡಿದ ಕ್ಷೇತ್ರ), **ಕುರುಜಾಲಗುಲಿ** = ಪವಿತ್ರವಾದ ಕುರು ಕ್ಷೇತ್ರ, **ಶ್ರೀರಂಗ ಕ್ಷೇತ್ರ** = ಕಾವೇರೀ ತೀರಸ್ಥ ಶ್ರೀ ರಂಗ ಕ್ಷೇತ್ರ, **ಮಣಿಯಾಗಿಪ್ಪಾದೆಂದು** = ಮುಂತಾದ ಕ್ಷೇತ್ರಗಳ ಯಾತ್ರೆ ಮಾಡಿದ ಫಲ ಈ ಅಹೋಬಲ ಕ್ಷೇತ್ರದ ದರ್ಶನ, **ಅತಿಶಯವಾದಾ ಮಾತನು** = ಹೀಗೆಂದು ಶ್ರೇಷ್ಠ ವಚನಗಳನ್ನು ನುಡಿದ ಶ್ರೀ ಪರಮಾತ್ಮನು.

**ದಿನ ಒಂದು....** ಒಂದು ದಿನವಾದರೂ, **ಮೂರೈದು ಏಳೆಂಟು ಒಂಬತ್ತು.........ಫಲಕೆ ಮಿಗಿಲಯ್ಯಾ** = 3 + 5 + 7 + 8 + 9 = 32. ನರಸಿಂಹ ಮಂತ್ರವು 32 ಅಕ್ಷರದ ಮಹಾಮಂತ್ರ (ಉಗ್ರಂ ವೀರಂ...... ನಮಾಮ್ಯಹಂ). ನರಸಿಂಹ ಎಂಬುದು 80725 ರೂಪ ಬಿದ್ದೇಹದಲ್ಲಿರುವುದು. ಇಂಥಾ ನರಸಿಂಹ ಕ್ಷೇತ್ರದಲ್ಲಿ ಅನುಸಂಧಾನಪೂರ್ವಕ ಒಂದು ದಿನ ಸೇವೆಗೈದಲ್ಲಿ, ದೇವಗಂಗಾ ತಟದಲ್ಲಿ ಒಂದು ನೂರು ವರುಷವಿದ್ದರೆ ಏನು ಪುಣ್ಯ ಲಭಿಸಬಹುದೋ ಅದಕ್ಕಿಂತ ಅಧಿಕ ಫಲ ದೊರಕುವುದೆಂದು ದಾಸಾರ್ಯರು ಈ ಕ್ಷೇತ್ರದ ಮಹಿಮೆಯನ್ನು ಕೊಂಡಾಡುತ್ತಾರೆ, **ಎಣಿಕೆ ಮಾಡುವರ್‍ಯಾರು** = ಈ ಕ್ಷೇತ್ರದ ಮಹಿಮೆಯನ್ನು ಪರಿಗಣಿಸುವರು ಯಾರು ?ಅಂದರೆ ಅಪರಿಮಿತ ಮಹಿಮೆಯುಳ್ಳದ್ದು-ಎಂತ ತಾತ್ಪರ್ಯ, **ಜನುಮದೊಳಗೆ** = ನಮ್ಮ ಜನ್ಮದಲ್ಲಿ ಒಂದು ಸಾರಿ ಅಹೋಬಲ ಕ್ಷೇತ್ರ ಯಾತ್ರೆ ಮಾಡಿದರೆ, ಅನಂತ ಜನ್ಮದ ಫಲ ಪ್ರಾಪ್ತಿ, **ಕನಸೀಲಿ** ಕನಸು ಮನಸ್ಸಿನಲ್ಲಿ ಈ ಗಿರಿ ಯಾತ್ರೆಯನ್ನು ಚಿಂತಿಸಲು, **ಧನವಂತನಾಗುವಾ** = ಅವನು ಭಾಗ್ಯವಂತನಾಗುವನು, **ಇಹ ಪರದಲ್ಲಿ ಸೌಖ್ಯ** = ಇಹದಲ್ಲಿ ಸುಖ ಸಂಪತ್ತು ಮತ್ತು ಪರದಲ್ಲಿ **ಮೋಕ್ಷಾ**ನಂದ ಹೊಂದುವನು, **ಹನುಮಾ ವಂದಿತ** = ಶ್ರೀ ವಾಯು ವಂದಿತನಾದ ವಿಜಯವಿಠ್ಠಲಾತ್ಮಕ ಶ್ರೀ ಹರಿಯು ಸನತ್ಕುಮಾರ ಮತ್ತು ನಾರದರಿಗೆ ಒಲಿದು ಅನುಗ್ರಹಿಸಿದ ಪರಮ ಪವಿತ್ರ ಕ್ಷೇತ್ರವಿದು.

**ಎಸೆವಾ ತೀರ್ಥಗಳುಂಟು** = ಕಂಗೊಳಿಸುವ ತೀರ್ಥಗಳು ಪವಿತ್ರ ಈ ಕ್ಷೇತ್ರದಲ್ಲಿವೆ, **ಶೇಷ** = ಶೇಷದೇವರು, **ಮಾರ್ಕಾಂಡ** = ಮಾರ್ಕಂಡೇಯ ಮುನಿ, **ಬ್ರಹ್ಮಾ** = ಚತುರ್ಮುಖ ಬ್ರಹ್ಮದೇವರು, **ಬಸರುಹ ನಾಭಾ** = ಪದ್ಮನಾಭನಾಮಕ ಶ್ರೀ ಹರಿ, (ಬಿಸರುಹ = ಕಮಲ), **ಲಕುಮೀ....** ಶ್ರೀ ಲಕ್ಷ್ಮೀದೇವಿ, **ಹನುಮಾ** = ಆಂಜನೇಯಾ (ವಾಯು ದೇವರು), **ರುದ್ರ** = ಮಹರುದ್ರದೇವರು, **ರುದ್ರಾಣಿ** = ರುದ್ರ ಪತ್ನೀ ಶ್ರೀ ಪಾರ್ವತೀದೇವಿ, **ಋಷಿ ಗೌತಮಿ** = ಗೌತಮ ಋಷಿಗಳ ಪತ್ನೀ, **ವಿಭಾಂಡಾ** = ಋಷ್ಯಶೃಂಗ ಮುನಿಯ ತಂದೆ ವಿಭಾಂಡಕ ಋಷಿಗಳು, **ಸ್ಕಂಧ** = ಷಣ್ಮುಖ, **ಅಂತರಗಂಗೆ** = ಅಂತರಗಂಗೆ ಎಂಬ ತೀರ್ಥ, **ಬೆಸಸುವೆ** = ಹೇಳುತ್ತೇನೆ.

**ಭೈರವ ಪಾಪ ವಿನಾಶನ** = ಭೈರವ ತೀರ್ಥ, ಪಾಪ ವಿನಾಶನ ತೀರ್ಥ– ಹೀಗೆ ಭೂಮಂಡಲದಲ್ಲಿರುವ (ವಸುಧೆಯೊಳಗಿದ್ದ) ಸಮಸ್ತ ತೀರ್ಥಗಳು ಈ ಕ್ಷೇತ್ರದಲ್ಲಿವೆ, **ಬೆಸನೆ ಬೆಸನೆ**....ಆಸಕ್ತಿಯುತರಾಗಿ ಆದೇಶ ಹೊತ್ತು, **ಲೋಕದ ಜನರು**....ಭೂಲೋಕದ ಸಜ್ಜನರು, **ಬಂದು ವಿಧಾನ ತಿಳಿದು** = ಈ ಕ್ಷೇತ್ರ ಯಾತ್ರೆ ಕೈಗೊಂಡು, ಆಗಮಿಸಿ, ಕ್ಷೇತ್ರ ಪದ್ಧತಿ ತಿಳಿದು, **ಕುಶಲ ಮತಿಯಿಂದ** = ಜಾಣತನದಿಂದ (ವಿಧ್ಯುಕ್ತವಾಗಿ), **ಸತ್ಕರ್ಮ ಆಚರಿಸಲು** = ಕ್ಷೇತ್ರ ವಿಧಿಪೂರ್ವಕವಾಗಿ ಪುಣ್ಯ ಕಾರ್ಯಗಳನ್ನು ಮಾಡಲು, **ವಶವಾಗಿಪ್ಪರು ಸರ್ವದೇವತೆಗಳು** = ಸಮಸ್ತ ದೇವತಾಗಣ ಆ ಭಕ್ತರ ವಶ ರಾಗಿ ಅನುಗ್ರಹಿಸುವರು, **ವಿಷಯಗಳಲ್ಲಿ ಬಿದ್ದು** = ಪ್ರಾಪಂಚಿಕ ಭೋಗಾದಿ ವಿಷಯಗಳಲ್ಲಿ ಮನಸ್ಸು ಹಾಕಿ, ಬಾಳನ್ನು ವ್ಯರ್ಥ ಮಾಡಿಕೊಳ್ಳದೆ, **ರಕ್ಕಸ ಯೋಗ ಮಾಡದಿರಿ** = ತಾಮಸ ಬುದ್ಧಿಯನ್ನು ಮಾಡದಿರೆಂದು ಎಚ್ಚರಿಸು ತ್ತಾರೆ ದಾಸರಾಯರು.

**ಗತಿಗೆ ಮಾರ್ಗವಾಗದು** = ಅದು ಸದ್ಗತಿಗೆ ಪಥವಾಗುವುದಿಲ್ಲ, **ಅಸುರ ವಿರೋಧಿ** = ದೈತ್ಯ ಕುಲಾಂತಕನಾದ ನಮ್ಮ ವಿಜಯವಿಠ್ಠ ಸ್ವಾಮಿಯು, **ನಸು ನಗುತ** ಮಂದಹಾಸಯುಕ್ತನಾಗಿ, **ಗಂಡಕಿ ಶಿಲೆ ಯೊಳು ಇರುತಿಪ್ಪ** = ಗಂಡಕೀ ನದಿಯಲ್ಲಿ ದೊರೆಯುವ ಸಾಲಿಗ್ರಾಮ ಶಿಲೆ ಯಲ್ಲಿ ಸ್ವಯಂ ವ್ಯಕ್ತರೂಪದಿಂದ ವಿರಾಜಮಾನನಾಗಿದ್ದಾನೆ.

**ಜೊತೆ-**

**ಪರಮಾಯು** = ಉತ್ತಮವಾದ ದೀರ್ಘ ಆಯುಸ್ಸು ದೊರೆಯು ವುದು, **ಮಾರ್ಕಂಡ್ಯ ಕ್ಷೇತ್ರ** = ಮಾರ್ಕಂಡೇಯ ಕ್ಷೇತ್ರವೆಂದು ಸುಪ್ರಸಿದ್ಧ ವಾದ, **ನರಸಿಂಹ** = ಕ್ಷೇತ್ರ ಮೂರ್ತಿಯಾದ ಶ್ರೀ ಅಹೋಬಲ ನರ ಸಿಂಹನು, **ಅನಂತಾ** = ಈ ಅನಂತ ಗಿರಿಯಲ್ಲಿ (ಅಹೋಬಲಗಿರಿ), **ವಿಜಯ ವಿಠ್ಠಲವಾಸಾ** = ವಿಜಯವಿಠ್ಠಲಾಭಿನ್ನ ಶ್ರೀ ನರಸಿಂಹದೇವರು ನೆಲೆಸಿದ್ದಾನೆ.



೫೩

## ಶ್ರೀ ಹರಿಯ ಚತುರ್ವಿಂಶತಿ ನಾಮಾವಳಿ

### ಕೇಶವನಾಮ

(ಪುರಂದರ ವಿಠ್ಠಲಾಂಕಿತ)

**ರಾಗ–ಮಧ್ಯಮಾವತಿ** **ಅಟತಾಳ**

**ಅಚ್ಯುತಾ**ನಂದ **ಗೋ**ವಿಂದ–ಹರಿ
ಸಚ್ಚಿದಾನಂದ ಸ್ವರೂಪ–**ಮುಕುಂದ** ॥ ॥ಪ॥

**ಕೇಶವ** ಕೃಷ್ಣ ಮುಕುಂದ–ಹರಿ
ವಾಸುದೇವ ಗುರು ಜಗದಾದಿವಂದ್ಯ
ಯಶೋದೆಯ ಸುಕೃತದ ಕಂದ–ಸ್ವಾಮಿ
**ಶೇಷಶ**ಯನ ಭಕ್ತ ಹೃದಯಾನಂದ ॥ ॥೧॥

**ನಾರಾಯಣ** ನಿಮ್ಮ ನಾಮ–ಎನ್ನ
ನಾಲಿಗೆ **ಮೇ**ಲಿರಬೇಕೆಂಬ ನೇಮ
ನಾನು ಬೇಡುವೆ ನಿಮ್ಮ ನಾಮ–ಪ್ರಾಣ
ಪಯಣ ಸಮಯ ಕೊದಗಲಿ ಗುಣಧಾಮ ॥ ॥೨॥

**ಮಾಧವ** ಮಂಗಳ ಗಾತ್ರ–ಸ್ವಾಮಿ
ಯಾದವ ಕೈಲಾಸವಾಸನ ಮಿತ್ರ
ಮಹಿಮೆ ಕೇಳಿದರೆ ವಿಚಿತ್ರ–ನಿನ್ನ
ಮನ ಮೆಚ್ಚಲಿ ಸತ್ಯಭಾಮಾ ಕಳತ್ರ ॥ ॥೩॥

**ಗೋವಿಂದ** ಗೋಪಾಲ ಬಾಲಾ–ಸೋಳ
ಸಾಸಿರ ಗೋಪೇರ ಆನಂದ ಲೀಲಾ
ನೀಲಮಣಿ ಮುಕ್ತಾ ಮಾಲಾ-ನಿಮ್ಮ
ನೇನೆಂದು ಕರೆಯಲಿ-ಸುಗ್ರೀವ ಪಾಲಾ ॥ ॥೪॥

**ವಿಷ್ಣು** ಚಕ್ರವು ಬಂದು ಸುತ್ತಿ-ಮೂರು
ಸೃಷ್ಟಿಯನೆಲ್ಲ ತಿರುಗಿ ಬೆನ್ನಟ್ಟಿ
ಕೃಷ್ಣ ಸಲಹೆಂದು ಮೊರೆಯಿಟ್ಟ ಮುನಿ
ಶ್ರೇಷ್ಠ ಗಿಷ್ಟರ ಮೇಲೆ ಅಭಯವ ಕೊಟ್ಟೆ ॥ ॥೫॥

**ಮಧುಸೂದನ** ಮಾರಜನಕ–ಮದ
ಗಜಸೀಳಿ ಮಲ್ಲರ ಗೆಲಿದೆ ತವಕ
ಒದಗಿ-ಕಂಸನ ಕೊಂದ ಬಳಿಕ-ನೀ
ಮುದುಕಗೆ ಪಟ್ಟವ ಕಟ್ಟಿದ್ಯೋ ಧನಿಕ ॥ ॥೬॥

**ತ್ರಿವಿಕ್ರಮ** ತ್ರೈಲೋಕ್ಯನಾಥ-ದೇವ
ತ್ರಿಪುರದ ಸತಿಯರ ವ್ರತಕೆ ವಿಘಾತ
ಯದುವಂಶ ಪಾಂಡವ ಪ್ರೀತ–ಎನ್ನ
ಹೃದಯದೊಳಡಗಿರೋ ಶ್ರೀ ಜಗನ್ನಾಥ ॥ ॥೭॥

**ವಾಮನ** ರೂಪಿಲಿ ಬಂದು–ಬಲಿಯು
ದಾನವ ಬೇಡಲು ಉಚಿತವು ಎಂದು
ಧಾರೆಯನೆರೆಯಲು ಅಂದು-ಬೆಳೆದು
ಧಾರುಣಿಯಲ್ಲವನಳೆದ್ಯೋ-ನೀನಂದು ॥ ॥೮॥

**ಶ್ರೀಧರ** ಶೃಂಗಾರ ಹಾರ-ದಿವ್ಯ
ಶ್ರೀ ವತ್ಸಲಾಂಛನ ಶ್ರೀ ರಘುವೀರ

ವಾರಿಧಿ ಸಮ ಗಂಭೀರ–ಧೀರ
ಕ್ರೂರ ರಕ್ಕಸರನೆಲ್ಲರ ಸಂಹಾರಾ ॥ ॥೯॥

**ಹೃಷಿಕೇಶ** ವೃಂದಾವನದಲಿ-ನೀ
ಹರುಷದಿ ಕೊಳಲನೂದುತ ಯಮುನೆಯಲಿ
ಸತಿಯರ ಸಮ್ಮೇಳದಲಿ-ನೀ
ಧರಿಸಿದ್ಯೋ ಮಂದಾರಮಾಲೆ-ಕೊರಳಲ್ಲೀ ॥ ॥೧೦॥

**ಪದ್ಮನಾಭ** ಕೇಳೊ ಘನ್ನ-ಪಾದ
ಪದ್ಮವ ತೋರಿಸೋ ಬೇಗನೆ ನಿನ್ನ
ಮುದ್ದು ಮುಖವ ತೋರಿ ಎನ್ನ-ಬೇಗ
ಉದ್ಧಾರ ಮಾಡೆಂದು ಬೇಡುವೆ-ನಿನ್ನ ॥ ॥೧೧॥

**ದಾಮೋದರ** ಗುಣ ಧಾಮ-ಸ್ವಾಮಿ
ದಾವಾಂತಕ ಯದುಕುಲ ಸಾರ್ವಭೌಮ
ನೀಲಮೇಘ ನಿಭ ಶ್ಯಾಮ-ಕೃಷ್ಣ
ನೀಳಾಪತಿ ಎಂಬ ಬಹು ಪುಣ್ಯನಾಮ ॥ ॥೧೨॥

**ಸಂಕರ್ಷಣ** ದನುಜ ಹರಣ-ದೇವ
ಪಂಚಮುಖಿ ದ್ರೌಪದಿ ಮೇಲೆ ಕರುಣ
ಕುಂಕುಮಾಂಕಿತ ರೇಖಾ ಚರಣ–ನಿಜ
ಕಂಕಣರೇ ಯುೂರ ಕೌಸ್ತುಭಾಭರಣ ॥ ॥೧೩॥

**ವಾಸುದೇವ** ಕೇಳೊ ನಿನ್ನ-ದಿವ್ಯ
ಸಾಸಿರನಾಮವ ನೆನೆವನೆ ಧನ್ಯ

**ಬೇ**ಸರದೆ ಸಲಹಬೇಕೆನ್ನ-ತುಸ
ಘಾಸಿಯ ಮಾಡದೆ ಕರುಣಾಸಂಪನ್ನ ॥ ॥೧೪॥

**ಪ್ರದ್ಯುಮ್ನ**ನೆಂದು ನಾ ಕರೆದೆ-ಎನ್ನ
ಬದ್ಧವಾದ ದುಷ್ಕರ್ಮವ ಕಳೆದೆ
ದುರ್ಬುದ್ಧಿ ದುರ್ವಾಕ್ಯ ಮರೆದೆ—ಸಾಧು
ಸಜ್ಜನರ ಸಂಗ ನಿನ್ನಿಂದ ಬೆರೆದೆ ॥ ॥೧೫॥

**ಅನಿರುದ್ಧ** ಅನುದಿನದಲ್ಲಿ—ನೀ
ವಿನಯದಿಂದಿದ್ದೇ ಗೋಪಿಯರ ಮನೆಯಲ್ಲಿ
ಸನಕಾದಿ ವಂದ್ಯ ನಿನ್ನಗಲಿ—ಒಂದು
ಕ್ಷಣ ಬಿಟ್ಟಿರಲಾರೆ ನಿಲ್ಲೋ ಮನದಲ್ಲಿ ॥ ॥೧೬॥

**ಪುರುಷೋತ್ತಮ**ಗಾರು ಸಾಟಿ-ಪರ
ಬ್ರಹ್ಮಸ್ವರೂಪಿಯೆ ನಿನಗಾರೋ ಪೋಟಿ
ಮಹಿಮೆ ಕೇಳಿದರೊಂದು ಕೋಟಿ-ನಿನ್ನ
ಹೃದಯದಿ ಬ್ರಹ್ಮಾಂಡ ಕಂಡ ಕಿರೀಟ ॥ ॥೧೭॥

**ಅಧೋಕ್ಷಜ** ಅಸುರ ಸಂಹಾರಿ-ಕೃಷ್ಣ
ಅದ್ಭುತರೂಪ ಶಿಶುಪಾಲನ ವೈರಿ
ಭಕ್ತರ ಪಾಲಿಪ ಶೌರಿ-ಅಜಾ—
ಮಿಳ ನಾರಗನೆನ್ನೆ ಕಾಯ್ದೆ ಮುರಾರಿ ॥ ॥೧೮॥

**ನರಸಿಂಹ** ರೂಪವ ತಾಳ್ದೆ-ಕಂದ
ಕರೆಯೆ ಕಂಭದಿ ಬಂದು ಕರುಣದಿ ಕಾಯ್ದೆ
ದುರುಳ ಹಿರಣ್ಯಕನ ಸೀಳ್ದೆ—ಅವನ
ಕರುಳ ಬಗೆದು ವನಮಾಲೆ ಹಾಕಿದೆ ॥ ॥೧೯॥

**ಅಚ್ಯುತ** ನೀನತಿ ಮುದ್ದು-ಗೋಪಿ
ಬಚ್ಚಿಟ್ಟ ಹಾಲು ಮೊಸರು ಬೆಣ್ಣೆ ಮೆದ್ದು
ತುಚ್ಛ ಶಕಟನ ಕಾಲಿಲೊದ್ದು-ಕಾಡು
ಕಿಚ್ಚು ನುಂಗಿ ಪಾಲಿಸಿದೆಯೋ ಗೆದ್ದು ॥ ॥೨೦॥

**ಜನಾರ್ದನ** ರೂಪ ನೀನಾಗಿ-ಎನ್ನ
ಮನದ ಕರ್ಮವ ತೊಲಗಿಸೊ ಮುಂದಾಗಿ
ಮುನಿಗಳೆಲ್ಲರು ಒಂದಾಗಿ—ಈ
ತನು ನಿನ್ನದೆಂಬರೊ ಕೇಳೋ ನಿಜವಾಗಿ ॥ ॥೨೦॥

**ಉಪೇಂದ್ರ** ರೂಪದಿ ಬಂದೆ-ಅಪ್ರ
ಮೇಯ ಕಾಳಿಂಗನ ಮಡುವ ಧುಮುಕಿದೆ
ನಾಗನ ಹೆಡೆಗಳ ತುಳಿದೆ—ನಾಗ
ಪತ್ನಿಯರು ಬೇಡೆ ಪತಿಯ ಪಾಲಿಸಿದೆ ॥ ॥೨೨॥

**ಹರಿ** ಹರಿಯೆಂದರೆ ಪಾಪ—ರಾಶಿ
ಹರಿದು ಹೋಯಿತು ಎನ್ನ ಮನದ ಸಂತಾಪ
ಸರ್ವರೊಳಗೆ ವಿಶ್ವರೂಪ—ನಿನ್ನ
ನೆರೆನಂಬಿದವರನ್ನು ಸಲಹುವ ಭೂಪ ॥ ॥೨೩॥

**ಕೃಷ್ಣ** ಕೃಷ್ಣನೆಂಬ ಸೊಲ್ಲ—ಕೇಳಿ
ನಷ್ಟವಾಯಿತು ಎನ್ನ ಪಾಪಗಳೆಲ್ಲ
ಮುಟ್ಟಿ ಭಜಿಸಿರೊ ನೀವೆಲ್ಲ—ಪುರಂದರ
ವಿಠ್ಠಲ ನಲ್ಲದೆ ಮತ್ತೆ ಬೇರಿಲ್ಲ ॥ ॥೨೪॥



**ಶ್ರೀ ಪುರಂದರ ದಾಸರು :**

ದಾಸಶ್ರೇಷ್ಠ ಪುರಂದರರು ಪ್ರಖ್ಯಾತ ಹರಿದಾಸರು. ಚಂದ್ರಿಕಾಚಾರ್ಯರೆಂದು ಖ್ಯಾತನಾಮರಾಗಿದ್ದ ಶ್ರೀ ವ್ಯಾಸರಾಜ ಗುರು ಸಾರ್ವಭೌಮರಿಂದ- "ಪುರಂದರವಿಠ್ಠಲ"-ಎಂಬ ಅಂಕಿತನಾಮೋಪದೇಶವನ್ನು ಪಡೆದು. 4,75,000 ದೇವರ ನಾಮಗಳು, ಉಗಾಭೋಗಗಳು, ಸುಳಾದಿಗಳು, ಠಾಯಿಗಳು-ಈ ಪ್ರಕಾರ ಕೀರ್ತನ ಸಾಹಿತ್ಯ ಸಾಮ್ರಾಜ್ಯದ ಸಾಮ್ರಾಟರಾಗಿ ಮೆರೆದ ದಾಸವರೇಣ್ಯರಿವರು. "ದಾಸರೆಂದರೆ ಪುರಂದರ ದಾಸರಯ್ಯ" ಎಂದು ತಮ್ಮ ಗುಣಗಳಿಂದಲೇ ಸ್ತುತ್ಯಮಾನರಾದ ಕವಿಪುಂಗವರು. ಜನ್ಮಸ್ಥಳ-ಪುರಂದರಗಡ ಜನ್ಮನಾಮ-ಶ್ರೀನಿವಾಸಪ್ಪ ನಾಯಕ. ಶ್ರೀಹರಿಯ ಅನುಗ್ರಹದಿಂದ ಜೀವನದಲ್ಲಿ ವೈರಾಗ್ಯಪ್ರಾಪ್ತಿ.

ರತ್ನಪಡೆ ವ್ಯಾಪಾರಿಗಳಾಗಿ, ವಿಜಯನಗರದ ಸಾಮ್ರಾಟ ಕರ್ನಾಟಕದ ರಮಾ ರಮಣನಾದ ಶ್ರೀ ಕೃಷ್ಣ ದೇವರಾಯನಿಗೆ ಸಾಲ ನೀಡುತ್ತಿದ್ದ ಬಡ್ಡಿ ಭೂಪಾಲರಿವರು. ದಾಸರಾದ ಮೇಲೆ, ತಕ್ಕಡಿಯನ್ನು ತೂಗುತ್ತಿದ್ದ, ಅವರ ಕೈಯ್ಯಿನ ಬೆರಳುಗಳು ತಂಬೂರಿಯ ತಂತಿಯನ್ನು ಮೀಟಿ, ಝೇಂಕಾರವನ್ನು ಎಬ್ಬಿಸಿ, ನಾದ ಬ್ರಹ್ಮನ ಉಪಾಸನೆಗೆ ಅನುವಾದುವು. ಹಣವನ್ನು ವಸೂಲು ಮಾಡಲು ಹೋಗುತ್ತಿದ್ದ ಅವರ ಚರಣ ದ್ವಯಗಳು ಭಾರತಾದ್ಯಂತ ಪುಣ್ಯ ಕ್ಷೇತ್ರಗಳನ್ನು ಸಂಚರಿಸಿದುವು. ಪಾಗನ್ನು ಧರಿಸುತ್ತಿದ್ದ ಶಿರ, ರೇಷ್ಮೆಯ ರನೆಯ ಅಂಗಿಯನ್ನು ತೊಡುತ್ತಿದ್ದ ದೇಹ, ದಾಸವೇಷ ಭೂಷಣಗಳಿಂದ ಅಲಂಕೃತವಾಯಿತು.

ಪ್ರಸಕ್ತ ಕೀರ್ತನೆಯು ಶ್ರೀ ಹರಿಯ ಕೇಶವಾದಿ ಚತುರ್ವಿಂಶಂತತಿ ನಾಮಾವಳಿಗಳ ಸ್ತೋತ್ರ ಪದವು.

**ಕೀರ್ತನ ಸಾಹಿತ್ಯದ ಪೂರ್ಣ ಅರ್ಥವಿವರಣೆ :–**

ಕೇಶವಾದಿ ಕೃಷ್ಣ ಪರ್ಯಂತ ಶ್ರೀ ಪರಮಾತ್ಮನ ೨೪ ಭಗವದ್ರೂಪಗಳ ನಾಮಾವಳಿಯ ಕೀರ್ತನ ಸಾಹಿತ್ಯವಿದು. ಅನೇಕ ಭಗವದ್ಭಕ್ತರು

ಉದಯ ಕಾಲದಲ್ಲಿ ಪ್ರತಿ ನಿತ್ಯವೂ ಈ ಕೀರ್ತನೆಯನ್ನು ಹೇಳಿಕೊಳ್ಳುವ ಸಂಪ್ರದಾಯವಿದೆ.

**ಅಚ್ಯುತ** = ಚ್ಯುತಿ-ಎಂದರೆ ನಾಶ. ಚ್ಯುತ-ಎಂದರೆ ನಾಶವನ್ನು ಹೊಂದುವ ಧರ್ಮ. ಅಚ್ಯುತ–ನಾಶರಹಿತನೆಂದರ್ಥ. ಶ್ರೀ ಪರಮಾತ್ಮನು ಆದಿ ಮಧ್ಯಾಂತರಹಿತನು. ಚತುರ್ವಿಧ ನಾಶರಹಿತನು ಶಶ್ವದೇಕ ಪ್ರಕಾರ ನಾಗಿರುವ ನಿತ್ಯ ಶಾಶ್ವತ ಮೂರ್ತಿಗೆ-"ಅಚ್ಯುತ"ನೆಂಬ ನಾಮ.

**ಅನಂತ** = ಶ್ರೀ ಹರಿಯ ನಾಮ-ಅವತಾರ-ರೂಪ-ಕ್ರಿಯಾದಿಗಳು ಅಪಾರ ಮತ್ತು ಅಗಣಿತ ಎಣಿಕೆಗೆ ಮೀರಿದ್ದು. ಇದರಿಂದ ಅನಂತನಾಮ ಕನು, **ಗೋವಿಂದ** ಗೋ-ಎಂದರೆ, ವಚನಗಳು (ಮಾತು), ಅಂದರೆ ಅಪೌರೇಷವಾದ ವೇದ ಸಮೂಹಗಳು, ಅನಂತಾನಂತ ವೇದಗಳಿಂದ ಪ್ರತಿ ಪಾದ್ಯನಾದ್ದರಿಂದ-"ಗೋವಿಂದ"-ನಾಮಕನು. ಗೋ ಬ್ರಾಹ್ಮಣರ ಪಾಲಕ ನಾದ್ದರಿಂದಲೂ, ಗೋವಿಂದ ನಾಮಕನು, **ಸಚ್ಚಿದಾನಂದ** = ಸತ್-ಚಿತ್-ಆನಂದ ಮತ್ತು ಸ್ವರೂಪ, ಅಂದರೆ ಆತ್ಮ, ಹೀಗೆ ಚತುರ್ವಿಧ ಉಪಾಸನೆಗೆ ವಿಷಯನು. ಅಪ್ರಾಕೃತವೂ ಜಗದ್ವಿಲ್ಲಕ್ಷಣಗಳೂ ಆದ ಪೂರ್ಣ ಜ್ಞಾನ ಆನಂದಮಯ ಸ್ವರೂಪನೆಂದರ್ಥ, **ಮುಕುಂದ** = ಮೋಕ್ಷಪ್ರದನು. (ಮುಕುಂ-ಮೋಕ್ಷವನ್ನು ದ-ಕೊಡುವವನು).

ನಿತ್ಯ ಶಾಶ್ವತ ಸ್ವರೂಪಿಯೂ, ನಿತ್ಯಾನಂದಮಯನೂ, ಸಚ್ಚಿದಾ ನಂದ ಸ್ವರೂಪನೂ. ಸದಾಗಮ್ಯೈಕವೇದ್ಯನೂ, ಮುಕ್ತಿ ಪ್ರದನೂ ಅದ ಶ್ರೀ ಹರಿಯ ಸ್ತುತಿಯಿಂದ ಪ್ರಾರಂಭಿಸುತ್ತಾರೆ.

**ಕೇಶವ**-ಕ+ ಈಶ-ವ. ಕ-ಬ್ರಹ್ಮದೇವರು. ಈಶ-ಈಶಾನ್ಯ-ಕೋಣಾಧಿ ಪತಿಯಾದ ಶ್ರೀ ರುದ್ರದೇವರು. ವ-ವರಿಷ್ಠ. ಅಂದರೆ ಬ್ರಹ್ಮ ರುದ್ರಾದಿ ಗಳಿಗಿಂತ ಅನಂತಾನಂತ ಗುಣಗಳಿಂದ ಸರ್ವ ಶ್ರೇಷ್ಠನಾದವನು. **ಕೇಶವ**-ನಾಮಕನು. (1) ಉತ್ಕೃಷ್ಟವಾದ ತಲೆಗೂದಲನ್ನು ಹೊಂದಿರುವವನು.

(2) ತನ್ನ ಬಿಳಿ ಹಾಗೂ ಕಪ್ಪು ತಲೆಗೂದಲಿನಿಂದ ರಾಮಕೃಷ್ಣ ರೂಪಗಳಿಂದ ಭೂಮಿಯಲ್ಲಿ ಅವತರಿಸಿರುವವನು (ಕೇಶೌ ಶುಕ್ಲ ಕೃಷ್ಣ ಕೇಶೌ ವರ್ಣಯತೆ ಭೂಮಾವಿತಿ-ಕೇಶವ).

(3) ಕೇಶ ಎಂಬ ಅಸುರನ ಸಂಹಾರಕ (ಕೇಶಿವಧಾತ್–ಕೇಶವ).

(4) ದಕ್ಷಪ್ರಜಾ ಪತಿಯನ್ನು ಯಜ್ಞ ಮಾಡುವಂತೆ ಮತ್ತು ರುದ್ರನನ್ನು ಆ ಯಜ್ಞ ಧ್ವಂಸ ಮಾಡುವಂತೆ ಪ್ರವರ್ತಿಸುವವನಾದ್ದರಿಂದ–ಕೇಶವ ನಾಮಕನು.

(5) ಅವ್ಯಕ್ತ ತತ್ತ್ವಕ್ಕೆ ನಿಯಾಮಕ ಭಗವದ್ರೂಪ.

(6) ಆಯುಧಧಾರಣಾಕ್ರಮ. ಶಂಖ-ಚಕ್ರ-ಗದಾ-ಪದ್ಮ (ಬಲ ಮೇಲ್ಭಾಗದಿಂದ ಪ್ರದಕ್ಷಣಾಕಾರವಾಗಿ ಬಲ ಕೆಳಕ್ಕೆ ಪರ್ಯಂತ).

(7) ಲಕ್ಷ್ಮೀದೇವಿಯರ ನಾಮ-ಶ್ರೀ.

ಕೃಷ್ಣ = ದ್ವಾಪರ ಯುಗದಲ್ಲಿ ಶ್ರೀ ಹರಿಯ ಅವತಾರ, ಮುಕುಂದ = ಮೋಕ್ಷ ಪ್ರದಾಯಕನು, ಹರಿ = ಸಕಲ ಜೀವರ ಮುಖ್ಯ ಬಿಂಬರೂಪ-ಸಜ್ಜನರ ಸಕಲ ಪಾಪ ಪರಿಹಾರಕರೂಪ, ವಾಸುದೇವ = ಸರ್ವತ್ರ ವ್ಯಾಪ್ತ ರೂಪ, ಗುರು = ಜಗದಾದಿ ಗುರುವು, ಜಗದಾದಿ ವಂದ್ಯ = ತನ್ನಿಂದ ಸೃಷ್ಟವಾದ ಸಕಲ ಚರಚರಾತ್ಮಕವಾದ ಜಗತ್ತಿನಿಂದ ವಂದ್ಯನಾದವನು, ಯಶೋದೆಯ ಸುಕೃತದ ಕಂದ = ಯಶೋದಾ ದೇವಿಯ ಪುಣ್ಯದಿಂದ ಅವಳಿಗೆ ದೊರಕಿದ ಶಿಶುರೂಪ ಶ್ರೀ ಕೃಷ್ಣನು ಹುಟ್ಟಿದ್ದು-ಮಥುರೆಯಲ್ಲಿ–ದೇವಕೀ ವಸುದೇವರ ಪುತ್ರನಾಗಿ. ಬೆಳೆದಿದ್ದು-ನಂದ ಗೋಕುಲದಲ್ಲಿ–ನಂದ ಗೋಪ ಯಶೋದೆಯರ ಸಾಕು ಪುತ್ರನಾಗಿ, ಸ್ವಾಮಿ = ಜಗತ್ಪ್ರಭು, ಶೇಷಶಯನ = ಶೇಷ ದೇವರನ್ನೇ ಹಾಸಿಗೆಯನ್ನಾಗಿ ಉಳ್ಳವನು, ಭಕ್ತ ಹೃದಯಾನಂದ = ತನ್ನ ಭಕ್ತ ಜನರ ಮನಸ್ಸಿಗೆ ಆನಂದ ದಾಯಕನು.

**ನುಡಿ–೨**

**ನಾರಾಯಣ**=ನಿರ್ದೋಷನೂ ಮತ್ತು ಅನಂತ ಕಲ್ಯಾಣ ಗುಣಗಣ ಧಾಮನೂ ಆದ **ಶ್ರೀ** ಪರಮಾತ್ಮ (ಅರಾ:- ದೋಷಗಳು. ನ-ನಿಷೇದಾರ್ಥ ದಲ್ಲಿ–ಯಾರಲ್ಲಿ ಇಲ್ಲವೋ ಅಂದರೆ, ಯಾವಾತನು ಸಂಪೂರ್ಣ ನಿರ್ದೋ ಷನೋ, **ಅಯಣ**=ಅನಂತ ಕಲ್ಯಾಣ ಗುಣಗಳಿಗೆ ಆಶ್ರಯನೋ–ಅವನೇ "ನಾರಾಯಣ"-ಶಬ್ದವಾಚ್ಯನು).

**ವಿಷ್ಣು ಸಹಸ್ರನಾಮದ ವಾಕ್ಯದಂತೆ–**

(1) ಸದಾ ಸರ್ವ ಜೀವ ಜಡರುಗಳಿಂದ ಅತ್ಯಂತ ಭಿನ್ನನು. (2) ಸರ್ವರಿಗಿಂತಲೂ ಅಧಿಕವಾಗಿ ಸರ್ವ ದೋಷ ರಹಿತನು. (3) ಭಕ್ತರ ಅವಿದ್ಯಾದಿ ದೋಷ ಪರಿಹಾರಕನು. (4) ಕಲ್ಯಾಣ ಗುಣ ಪೂರ್ಣ ಸ್ವರೂ ಪನು. (5) ಶ್ರವಣ ಮನನಾದಿಗಳಿಂದ ಜ್ಞೇಯನು. (6) ನಾಶವಿಲ್ಲದ ಮುಕ್ತರ ಸಮುದಾಯದಿಂದ ಪ್ರಾಪ್ತನು (ನರೀಯಂತೆ ಇತಿ ನರಾ– ಮುಕ್ತಾಃ, ತೇಷಾಲ ಸಮುದಾಯೋನಾರಃ ತೀನೇಯತ ಇತಿ-ನಾರಾ ಯಣಃ-ತತ್ತ್ವ ದೀಪೀಕಾ). (7) ಜಲವೇ ತನ್ನ ಸ್ಥಾನವನ್ನಾಗಿ ಉಳ್ಳ ವನು (ಜಲಧಿವಾಸನು) (ನಾರಾಃ ಆಪಃ ಅಯನಂ ಪೂರ್ವಂ ನಿವಾಸ ಸ್ಥಾನಂ ಯಸ್ಯ ಸಃ-ನಾರಾಯಣಃ). (8) ಆಯುಧ ಧಾರಣಕ್ರಮ- ಶಂಖ–ಪದ್ಮ-ಗದಾ–ಚಕ್ರ (ಬಲ ಕೆಳಗೈಯಿಂದ). (9) ಮಹತ್ತತ್ವ ನಿಯಾಮಕ ರೂಪ-ಅವಾಂತರ ದೇವತಾ–ಬ್ರಹ್ಮ ವಾಯುಗಳ. (10) ಶ್ರೀ ರಮಾರೂಪ-ಶ್ರೀ ಲಕ್ಷ್ಮೀ. (11) ನಾರಾಯಣ ಭಗವದ್ರೂಪವು ಮಹತತ್ತ್ವಕ್ಕೆ ಮುಖ್ಯಾಭಿಮಾನಿ ರೂಪವು. (12) ನಾರಾಯಣ ರೂಪದ ಆಯುಧ ಧಾರಣಾಕ್ರಮ-ಪದ್ಮ-ಗದಾ–ಚಕ್ರ-ಶಂಖ. (13) ಲಕ್ಷ್ಮೀರೂಪದ ನಾಮ.

**ನಿಮ್ಮಯ ನಾಮ** ಶ್ರೀಮನ್ನಾರಾಯಣ ನಾಮವೇ ದುರಾಚಾರಿ ಯಾಗಿದ್ದ ಅಜಾಮಿಳನನ್ನು ಅಂತ್ಯ ಕಾಲದಲ್ಲಿ ಉದ್ಧರಿಸಿತು, **ಎನ್ನ ನಾಲಿಗೆ**

**ಮೇಲೆ ಇರಬೇಕೆಂಬ ನೇಮ**=ಹೇ ನಾರಾಯಣ ನಿನ್ನ ದಿವ್ಯ ನಾಮವು ಸದಾ ಎನ್ನ ನಾಲಿಗೆಯಲ್ಲಿ ನಲಿಯುತ್ತಿರಲಿ. ಈ ವ್ರತನಿಷ್ಠವಾದ ನೇಮವನ್ನು ನನಗೆ ಕರುಣಿಸು-ದೇವಾ ! **ಪ್ರಾಣ ಪಯಣ ಸಮಯದಲಿ**= ನನ್ನ ಅಂತ್ಯ ಕಾಲದಲ್ಲಿ–ಪ್ರಾಣೋತ್ಕ್ರಮಣ ಸಮಯದಲ್ಲಿ ಎನಗೆ ಒದಗಲಿ. (ಸಂತತಂ ಚಿಂತಯೇತ್ ಅನಂತಂ-ಅಂತ್ಯಕಾಲೇ ವಿಶೇಷತ :– ಆಚಾರ್ಯ ಮಧ್ವರ ವಾಕ್ಯ), **ಗುಣಧಾಮ**=ನೀನು ಅನಂತ ಕಲ್ಯಾಣ ಗುಣ ರಾಶಿಗಳಿಗೆ ಮುಖ್ಯಾಶ್ರಯನು.

**ಮಾಧವ–**

(1) **ಮಾ–ಶ್ರೀ** ಲಕ್ಷ್ಮೀದೇವಿ. ಧವ–ಪತಿ (ನಿಯಾಮಕ). ಶ್ರೀ ರಮಾದೇವಿಗೆ ನಿಯಾಮಕನಾಗಿರುವುದರಿಂದ-**ಮಾಧವ ನಾಮಕನು.** (**ಮಾಯಾಃ** ಲಕ್ಷ್ಮ್ಯಾಃ ಧವಃ ಸ್ವಾಮೀ–ಮಾಧವಃ). (2) ಅನ್ಯರಾದ ಯಜಮಾನನಿಲ್ಲದಿರುವವನು (**ಮಾನ** ವಿದ್ಯತೇ ಧವಃ ಸ್ವಾಮೀ ಯಸ್ಯ ಸಃ). (3) **ಮಧು**–ಎಂಬುವನ **ವಂಶದಲ್ಲಿ** ಅವತರಿಸಿದವನು (ಮಧೋರಯಂ ತದ್ವಂಶಿತ್ವಾತ್-ಮಾಧವಃ). (4) ಮಾಧವ ಭಗವದ್ರೂಪವು **ಅಹಂಕಾರ ತತ್ತ್ವಕ್ಕೆ** ಮುಖ್ಯಾಭಿಮಾನಿ ರೂಪವು. (5) ಆಯುಧ ಧಾರಣಾಕ್ರಮ– **ಚಕ್ರ-ಶಂಖ-ಪದ್ಮ**–ಗದಾ. (6) ಲಕ್ಷ್ಮೀರೂಪದ ನಾಮ.

**ಮಂಗಳ ಗಾತ್ರ**=ಶುಭ ಲಕ್ಷಣ ಯುಕ್ತ ಶರೀರವುಳ್ಳವನು. **ಪೂರ್ಣ ಜ್ಞಾನಾನಂದಮಯ ಶರೀರನು,** **ಸ್ವಾಮಿ**=ಚರಾಚರಾತ್ಮಕವಾದ ಜಗತ್ತಿಗೇ ನಿಯಾಮಕನು, **ಯಾದವ**=ಯದುಕುಲ ಲಲಾಮನಾದ ಶ್ರೀ ಕೃಷ್ಣ, **ಕೈಲಾಸ ವಾಸನ ಮಿತ್ರ**=ಕೈಲಾಸ ಪತಿಯಾದ ಶ್ರೀ ರುದ್ರದೇವರಿಗೆ ಪರಮಾಪ್ತನು, **ವಿಚಿತ್ರ**=ಅತ್ಯಾಶ್ಚರ್ಯಕರವಾದ ಚಿತ್ರ ವಿಚಿತ್ರ ಮಹಿಮಾ ಸಂಪನ್ನನು, **ನಿನ್ನ ಮನ ಮೆಚ್ಚಲಿ**=ಮನಸಾರೆ ನನ್ನನ್ನು ಅನುಗ್ರಹಿಸು, **ಸತ್ಯಭಾಮಾ ಕಳತ್ರ**=ಸತ್ಯಭಾಮಾ ಪತಿಯಾದ ಶ್ರೀ ಹರಿಯೇ ?.

**ಗೋವಿಂದ**- "ಗೋ"-ಶಬ್ದವು ಬಹ್ವರ್ಥಗರ್ಭಿತವು. ಮಾತು-ಭೂಮಿ-ಕಿರಣ-ಗೋವುಗಳು.................ಇತ್ಯಾದಿ ಅನೇಕ ಅರ್ಥಗಳಿವೆ. (1) ವೇದ ಪ್ರತಿಪಾದ್ಯವಾದ್ದರಿಂದ ಗೋವಿಂದ ನಾಮಕನು. (2) ಗೋ ಬ್ರಾಹ್ಮಣರ ರಕ್ಷಕನು. (3) ಪಾತಾಳಿಗೆ ಬಿದ್ದ ಭೂಮಿಯನ್ನು ವರಾಹ ರೂಪದಿಂದ ಎತ್ತಿದ ಕಾರಣ-ಗೋವಿಂದನೆಂದು ದೇವತೆಗಳು ಸ್ತುತಿ ಮಾಡಿದರು. (ಗಾಂ ಭೂಮಿಂ ವಿಂದತಿ-ಇತಿ-ಗೋವಿಂದಃ). (4) ವೇದ ವಾಣಿಯನ್ನೆಲ್ಲಾ ಚೆನ್ನಾಗಿ ಬಲ್ಲವನು. (5) ವೇದ ವಾಣಿಯನ್ನು ಚತುರ್ಮುಖನೇ ಮೊದಲಾದವರಿಗೆ ತಲುಪಿಸುವವನು (ಗಾಃ ವೇದವ ಪಾಲಿಸಿ ಚತುರ್ಮುಖಾದೀನ್ ಪ್ರತಿವಿಂದಯತ ಇತಿ-ಗೋವಿಂದಃ). (6) ಗೋಪಾಲಕನಾಗಿದ್ದ ಅನೇಕ ಗೋವುಗಳ ರಕ್ಷಕನು (ಗವಾಂ ಧೇನೂನಾಂ ಇಂದ್ರಃ-ಗೋವಿಂದಃ). (7) ವೇದ ವಾಣಿಗೆ ಪ್ರಭುವು (ಗವಾಂ ವೇದ ವಚಸಾಂ ಇಂದ್ರಃ-ಗೋವಿಂದಃ). (8) ಮನಸ್ತತ್ತ್ವಕ್ಕೆ ಮುಖ್ಯ ಅಭಿಮಾನಿ ಭಗವದ್ರೂಪವು. (9) ಆಯುಧ ಧಾರಣ ಕ್ರಮಃ-ಗದಾ-ಪದ್ಮ-ಶಂಖ-ಚಕ್ರ. (10) ಶ್ರೀ ರಮಾರೂಪ-

**ಗೋಪಾಲ ಬಾಲಾ** = ಗೋಪಾಲ ನಾಮಕನಾದ ಕಿಶೋರ. (ಬಾಲ ಕೃಷ್ಣ ರೂಪ), **ಸೋಳ ಸಾವಿರ ಗೋಪೇರೆ**=ಹದಿನಾರು ಸಾವಿರ ಸಂಖ್ಯಾಕವಾದ ಗೋಪಸ್ತ್ರೀಯರನ್ನು ಲೀಲಾ ಮಾತ್ರದಿಂದ ಹರ್ಷ ಪಡಿಸಿದವನು, **ಆನಂದ ಲೀಲಾ**=ಆನಂದ ಪರಿಪೂರ್ಣನು ಗೋಪೇರ ಸಂಗಡ ಲೀಲೆಯಾಡಿದನು. ಶ್ರೀ ಕೃಷ್ಣನು ಸ್ವರಮಣನು. ಆಪ್ತಕಾಮನು ಗೋಪಿಕಾಸ್ತ್ರೀಯರಿಂದ ಶ್ರೀ ಕೃಷ್ಣನಿಗೆ ಆನಂದವಿಲ್ಲ. ಅವರಿಗೆ ಆನಂದ ಕೊಡುವುದಕ್ಕಾಗಿ, ಅವರೊಡನೆ ಲೀಲೆಯಾಡಿದನು, **ನೀಲಮಣಿ**=ನೀಲವರ್ಣದ ರತ್ನ, **ಮುಕ್ತಾ ಮಾಲಾ**=ಶುದ್ಧ ಮುತ್ತಿನ ಸರವನ್ನು ಧರಿಸಿದ್ದಾನೆ, **ಸುಗ್ರೀವ ಪಾಲಾ** = ದುಷ್ಟನಾದ ವಾಲಿಯನ್ನು ಸಂಹರಿಸಿ, ಸುಗ್ರೀವನಿಗೆ ರಾಜ್ಯಾಭಿಷೇಕ ಮಾಡಿಸಿದ ಸುಗ್ರೀವ ಸಖನೂ ರಕ್ಷಕನೂ ಆದ ಶ್ರೀ ರಾಮಚಂದ್ರಮೂರ್ತಿ, ನಿನ್ನನ್ನು ಏನೆಂದು ಸ್ತುತಿಸಲಿ ?

**ವಿಷ್ಣು** – (1) "ವೃ, ವೃಷಲ್-ವ್ಯಾಪ್ತಿ"-ಎಂಬ ಪರಿಹಾರರೀತ್ಯಾ, ಸರ್ವಗುಣ ಪರಿಪೂರ್ಣನೂ, ಸರ್ವತ್ರ ವ್ಯಾಪ್ತನೂ ಆದ ಶ್ರೀ ಹರಿಯು **ವಿಷ್ಣು** ಶಬ್ದವಾಚ್ಯನು. (2) ಪರಬ್ರಹ್ಮ ಸ್ವರೂಪನು. (3) "ವಿಷ್ಣು" ಶಬ್ದವು ವಿ-ಷ-ಣ-ಎಂಬ ವರ್ಣಾಕ್ಷರ ಕ್ರಮದಿಂದ, ವಿ = 4. ಷ = 6, ಣ = 5. (ಅಕ್ಷರ ಸಂಖ್ಯಾಕ್ರಮ) ವಾಮಾಂಕ ಗತಿಯಿಂದ **564.** ಬ್ರಹ್ಮ ಸೂತ್ರಗಳ ಸಂಖ್ಯೆ = **564** ಎಂದು ಬ್ರಹ್ಮ ಶಬ್ದ ವಾಚ್ಯನಾದ ವಿಷ್ಣುವಿನ ಅರ್ಥದ ಸಾಂಕೇತವಾಗಿ ಆಚಾರ್ಯ ಮಧ್ವರು ನಿರ್ಣಯಿಸಿದ್ದಾರೆ. (4) ಶ್ರವಣೇಂದ್ರಿಯಕ್ಕೆ ಮುಖ್ಯಾಭಿಮಾನಿ ಭಗವದ್ರೂಪವು. (5) ಅವಾಂತರ ತತ್ತ್ವಾಭಿಮಾನಿ-ಚಂದ್ರ (ದಿಗ್ದೇವತೆಗಳು). (6) ಶ್ರೀ ಲಕ್ಷ್ಮೀರೂಪ– ಪದ್ಮನಾಮಕಳು. (7) ಆಯುಧ ಧಾರಣಕ್ರಮ. ಪದ್ಮ–ಶಂಖ–ಚಕ್ರ –ಗದಾ.

**ಚಕ್ರವು ಒಂದು ಸುತ್ತಿ** = ಅಂಬರೀಷ ಚಕ್ರವರ್ತಿಯನ್ನು ಪರೀಕ್ಷಿಸಲು ಬಂದಿದ್ದ ದೂರ್ವಾಸರನ್ನು ವಿಷ್ಣು ಚಕ್ರವು ಬೆನ್ನು ಹತ್ತಿತು, **ಮೂರು ಸೃಷ್ಟಿಯನ್ನೆಲ್ಲ ತಿರುಗಿ ಬೆನ್ನಟ್ಟಿ** = ಬೆನ್ನಟ್ಟಿ ಬರುತ್ತಿದ್ದ ಶ್ರೀ ವಿಷ್ಣು ಚಕ್ರಕ್ಕೆ ಹೆದರಿ, ದೂರ್ವಾಸರು ಮೂರಾವರ್ತಿ ಭೂಮಂಡಲವನ್ನೆಲ್ಲಾ ಸುತ್ತಿದ ಪ್ರಸಂಗ ವಿಶೇಷ, **ಕೃಷ್ಣ ಸಲಹೆಂದು ನೊರೆಯಿಟ್ಟ ಮುನಿ** = ಕೊನೆಗೆ ಸುತ್ತಿ ಬಂದಾದ ದೂರ್ವಾಸ ಮುನಿಗಳು ಕೃಷ್ಣನಿಗೆ ರಕ್ಷಿಸೆಂದು ಶರಣಾಗತರಾದರು, **ಅಭಯುವ ಕೊಟ್ಟ** = ಚಕ್ರ ಪ್ರಯೋಗದಿಂದ ವಿಷ್ಣು ಭಕ್ತಾಗ್ರೇಸರನಾದ ಅಂಬರೀಷ ಚಕ್ರವರ್ತಿಗೆ ಅಭಯ ನೀಡಿದ ಶ್ರೀ ವಿಷ್ಣು ಮೂರ್ತಿಯ ಸ್ತುತಿ.

**ಮಧುಸೂದನ**–

(1) ಸುಖ ಸಾಧನೆಗಳಾಗಿದ್ದು, ಮಧು-ಎನಿಸುವ ಪೃಥಿವ್ಯಾದಿ ವಿಷಯಗಳನ್ನು ನಾಶ ಮಾಡುವವನು (ಮಧೂನಿ ಸುಖಸಾಧನತಯಾ

ಮಧು ಶಬ್ದೋಕ್ತ ಪೃಥಿವ್ಯಾದಿ ವಿಷಯಾ :- ತಾನಿ ಸೂದಯತಿ–ನಾಶಯ ತೀತಿ–ಮಧುಸೂದನಃ).

(2) ಮಧು–ಎಂಬ ದೈತ್ಯನ ಸಂಹಾರಕನು (ಮದುನಾಮಾ ನಮ ಸುರಂ ಸೂದಿತವಾನಿತಿ ಮಧುಸೂದನಃ).

(3) ನೇತ್ರೇಂದ್ರಿಯಕ್ಕೆ ಮುಖ್ಯಾಭಿಮಾನಿ ಭಗವದ್ರೂಪವು.

(4) ಶ್ರೀ ಲಕ್ಷ್ಮೀನಾಮ-ಕಮಲಾ.

(5) ಅವಾಂತರ ತತ್ತ್ವಾಭಿಮಾನಿ ದೇವತಾ-ಸೂರ್ಯ.

(6) ಆಯುಧ ಧಾರಣ ಕ್ರಮ–ಶಂಖ-ಪದ್ಮ-ಗದಾ-ಚಕ್ರ.

**ಮಾರಜನಕ** ಮನ್ಮಥನ ತಂದೆ-ಪುರುಷರೂಪೀ ಶ್ರೀ ಪರಮಾತ್ಮನ ಮನಸ್ಸಿನಿಂದ ಮನ್ಮಥ ಮತ್ತು ಚಂದ್ರ-ಇಬ್ಬರೂ ಜನಿಸಿದರು, **ಮದಗಜ ಸೀಳಿ** = ಮದೋನ್ಮತ್ತವಾಗಿದ್ದ ಕುವಲಯಾಪೀಡ-ಎಂಬ ಆನೆಯನ್ನು ಸಂಹ ರಿಸಿದ ಶ್ರೀ ಕೃಷ್ಣ, **ಮಲ್ಲರ ಗೆಲಿಗೆ** ಚಾಣೂರ ಮತ್ತು ಮುಷ್ಟಿಕ-ಎಂಬ ಜಗಜಟ್ಟಿಗಳನ್ನು ಲೀಲಾಜಾಲವಾಗಿ ಯಮ ಸದನಕ್ಕೆ ಅಟ್ಟಿದ ಶ್ರೀ ಕೃಷ್ಣ, **ತವಕ ಒದಗಿ** = ಅತ್ಯಂತ ತ್ವರಿತವಾಗಿ, **ಕಂಸನ ಕೊಂದ ಬಳಿಕ** = ಮಾವ ನಾದ ಕಂಸಾಸುರನನ್ನು ಸಂಹರಿಸಿದ ನಂತರ, **ಮುದುಕಗೆ** = ಉಗ್ರಸೇನ ನಿಗೆ ಪಟ್ಟ ಕಟ್ಟಿದ ಧೀರ.

**ತ್ರಿವಿಕ್ರಮ–**

(1) ವಾಮನ ರೂಪದಿಂದ ಅವತರಿಸಿ, ಬಲಿ ಚಕ್ರವರ್ತಿಯನ್ನು ಮೂರು ಪಾದದಷ್ಟು ಭೂದಾನ ಬೇಡಿ, ತ್ರಿವಿಕ್ರಮನಾಗಿ ಬೆಳೆದು ಸಮಗ್ರ ಜಗತ್ತನ್ನೂ ತನ್ನ ಪಾದದಿಂದ ಅಳೆದ ಬೃಹತ್ ಭಗವದ್ರೂಪ. ಉಪೇಂದ್ರ ನಾಮಕ ಶ್ರೀ ಹರಿ.

(2) ಮೂರು ವೇದಗಳನ್ನು ಅತಿಕ್ರಮಿಸಿ ಇರುವವನು (ತ್ರೀನ್ ವೇದಾನ್ ವಿಕ್ರಮತೇ ಅತಿ ಕ್ರಮತ-ಇತಿ ತ್ರಿವಿಕ್ರಮಃ).

(3) ಮೂರು ಕಾಲಗಳನ್ನೂ ಅತಿ ಕ್ರಮಿಸಿದವನು (ತ್ರೀನ್ ಕಾಲಾನ ವಿಕ್ರಮತೇ).

(4) ಸತ್ತ್ವ, ರಜ ಮತ್ತು ತಮ-ಎಂಬ ಗುಣತ್ರಯಗಳನ್ನು ಅತಿ ಕ್ರಮಿಸಿರುವವನ-ಪ್ರಾಕೃತ ತ್ರಿಗುಣಾತೀತ (ತ್ರೀನ್ ಗುಣಾನ್ ಸತ್ತ್ವ ರಜಸ್ತಮೋ ಗುಣಾನ್ ವಿಕ್ರಮತೇ ಅತಿಕ್ರಮಿತ ಇತಿ-ತ್ರಿವಿಕ್ರಮಃ).

(5) ದೇವ, ದಾನವ, ಮಾನವರನ್ನು ಅತಿಕ್ರಮಿಸಿ ಇರುವವನು (ತ್ರೀನ್ ದೇವ ಮಾನವ ದಾನವಾನ್ ಜೀವಾನ್ ವಿಕ್ರಮತೇ ಇತಿ–ತ್ರಿವಿಕ್ರಮಃ).

(6) ಚೇತನ, ಅಚೇತನ, ಚೇತನಾ ಚೇತನರನ್ನು ಅತಿಕ್ರಮಿಸಿ ಇರುವವನು.

(7) ತ್ರಿಪಾದ ವಿನ್ಯಾಸ ಉಳ್ಳವನು (ತ್ರೀಣಿಪದಾ ವಿಚಕ್ರಮೇ ವಿಷ್ಣುರ್ಗೋಪಾ ಅದಾಭ್ಯಃ).

(8) ಆಯುಧ ಧಾರಣಾಕ್ರಮ-ಗದಾ-ಚಕ್ರ–ಪದ್ಮ-ಶಂಖ.

(9) ತ್ವಗಭಿಮಾನಿ ರೂಪ.

(10) ಅವಾಂತರ ತತ್ತ್ವಾಭಿಮಾನಿ-ಅಹಂಕಾರಿಕ ಪ್ರಾಣ.

(11) ರಮಾರೂಪ-ರಮಾ.

**ತ್ರೈಲೋಕ್ಯನಾಥ**=ಚರಾಚರಾತ್ಮಕವಾದ ಸ್ವರ್ಗ-ಮರ್ತ್ಯ-ಪಾತಾಳ ಗಳೆಂಬ ಮೂರು ಲೋಕಗಳ ಮಹಾಪ್ರಭು ಮತ್ತು ನಿಯಾಮಕನು ಮೂರು ಲೋಕಗಳನ್ನು ಆಳಿದ ಭಗವದ್ರೂಪ, **ದೇವ**= ಸರ್ವೋತ್ತಮ ದೇವತಾ, **ತ್ರಿಪುರದ ಸತಿಯರ ವ್ರತಕೆ ವಿಘಾತ** ಬೌದ್ಧಾವತಾರದಿಂದ ತ್ರಿಪುರಾ ಸುರರ ಪತ್ನಿಯರನ್ನು ಮೋಹವಶರನ್ನಾಗಿ ಮಾಡಿ, ತದ್ವಾರಾ ತ್ರಿಪುರಾ ಸುರರ ನಾಶಕ್ಕೆ ಕಾರಣನಾದವನು, **ಯದುವಂಶ**=ಯದುಕುಲಲಲಾಮ ನಾದ ಶ್ರೀ ಕೃಷ್ಣ, **ಪಾಂಡವ ಪ್ರೀತ**=ಪಂಚ ಪಾಂಡವರಿಗೆ ಅತ್ಯಂತ ಪ್ರೀತಿಯ ವಸ್ತು (ಮಮ ಪ್ರಾಣಾಹಿ ಪಾಂಡವಾಃ), **ಹೃದಯದಲಿ ಅಡಗಿರೋ**= ಎನ್ನ ಹೃತ್ಕಮಲದಲ್ಲಿ (ಹೃದ್ಗುಹಾ ನಿವಾಸಿಯಾಗಿ)ವಿರಾಜ ಮಾನನಾಗಿರುವ ಬಿಂಬರೂಪೀ ಶ್ರೀ ಪರಮಾತ್ಮ, **ಶ್ರೀ ಜಗನ್ನಾಥ**= ತ್ರೈಲೋಕ್ಯ ಪ್ರಭು.

**ವಾಮನ**-

(1) ಅತ್ಯಂತ ಸುಂದರಮೂರ್ತಿ. (2) ದೇವತೆಗಳ ಶತ್ರುವಾದ ಬಲೀಂದ್ರನನ್ನು ಪಾತಾಳಕ್ಕೆ ತುಳಿದವನು (ಬಲೀಂದ್ರಂ ಪಾತಾಲಂ ಪ್ರತಿ ನಯ ನೀತಿ-ವಾಮನಃ). (3) ಹ್ರಸ್ವರೂಪದಲ್ಲಿ (ಕುಳ್ಳ) ಇರುವವನು (ಬಲಿ ಬಂಧನಾರ್ಥಂ ಸೂಕ್ಷ್ಮರೂಪ ಧಾರಣಾತ್-ವಾಮನಃ). (4) ಅಪ ರೋಕ್ಷ ಜ್ಞಾನಿಯನ್ನು ಮುಕ್ತಾವಸ್ಥೆಯಲ್ಲಿ ಅತಿ ಸುಂದರರನ್ನಾಗಿ ಪ್ರೇರಿಸು ವವನು (ಅಪರೋಕ್ಷ ಜ್ಞಾನಿನಂ ಸ್ವರೂಪತಃ ವಾಮಂ ಅತಿ ಸುಂದರಂ ನಯತಿ ಪ್ರಣಯತೀತಿ–ವಾಮನಃ). (5) ಜ್ಞಾನಸ್ವರೂಪಿ ಹಾಗೂ ಆನಂದ ಸ್ವರೂಪಿಯು. (6) ಆಯುಧ ಧಾರಣಾಕ್ರಮ-ಚಕ್ರ-ಗದಾ-ಪದ್ಮ-ಶಂಖ. (7) ಈ ಭಗವದ್ರೂಪವು ಜಿಹ್ವೇಂದ್ರಿಯಕ್ಕೆ (ರಸನೇಂದ್ರಿಯ-ಜ್ಞಾನೇಂ- ದ್ರಿಯ) ಮುಖ್ಯಾಭಿಮಾನಿ ರೂಪವು. (8) ವರುಣನು ರಸನೇಂದ್ರಿಯಕ್ಕೆ ಅವಾಂತರಾಭಿಮಾನಿ ದೇವತಾ. (9) ರಮಾನಾಮ-ವೃಷಾಕಪಿ.

**ಬಲಿಯು ದಾನವ ಬೇಡಲು** = ಅದಿತಿ ಕಶ್ಯಪರ ತಪಸ್ಸಿನ ಮಹಿಮೆಯಿಂದ ಶ್ರೀ ವಿಷ್ಣುವೇ ಅವರಲ್ಲಿ ವಾಮನನಾಮಕನಾಗಿ ಅವತರಿಸಿದನು. ಸುಂದರವಾದ ವಟುವೇಷ ತಾಳಿ, ಬಲಿಚಕ್ರವರ್ತಿಯು ಶುಕ್ರಾಚಾರ್ಯರ ಪೌರೋಹಿತ್ಯದಲ್ಲಿ ನಡೆಯಿಸುತ್ತಿದ್ದ ೧೦೦ನೆಯ ಅಶ್ವಮೇಧಯಾಗ ಕಾಡಿಗೆ ಭೃಗುರಕ್ಷಾ ಎಂಬ ಯಜ್ಞ ಸ್ಥಳಕ್ಕೆ ಬಂದು, ತನ್ನ ಪಾದದಿಂದ ಅಳೆಯಲ್ಪಡುವ ತ್ರಿಪಾದ ಭೂಮಿಯನ್ನು ದಾನವಾಗಿ ಬೇಡಿದನು.

**ಉಚಿತವು ಎಂದು** = ಬಲಿಚಕ್ರವರ್ತಿಯು ವಾಮನನ ತೇಜಸ್ಸಿಗೆ ಮಾರುಹೋಗಿ, ಅಂತಹ ವಟುವಿಗೆ ದಾನವನ್ನು ನೀಡಲು ಪರಮ ಯೋಗ್ಯನೆಂದು ಭಾವಿಸಿದನು, **ಧಾರೆ ಯೆರೆಯಲು** = ಸತೀ ಸಹಿತ ಸಂಕಲ್ಪ ಪೂರ್ವಕ ಧಾರೆ ಎರೆದನು, **ಅಂದು ಬೆಳೆದು** = ವಾಮನನಾಗಿ ಬಂದಿದ್ದ ಬಲಿವಂಚಕನು ಬೃಹದಾಕಾರತಾಳಿ, ಸಮಗ್ರ ಬ್ರಹ್ಮಾಂಡವನ್ನೇ ಅಳೆದು ಸ್ವೀಕರಿಸಿದ ಪ್ರಸಂಗ.

**ಶ್ರೀಧರ-**

(1) ಕಾಂತಿ ಸಂಪನ್ನಳಾದ ನಿತ್ಯ ಯೌವ್ವನೆಯಾದ ಶ್ರೀ ಲಕ್ಷ್ಮೀದೇವಿಯನ್ನು ತನ್ನ ವಾಮ ವಕ್ಷಸ್ಥಳದಲ್ಲಿ ಧರಿಸಿರುವವನು. (ಶ್ರಿಯಂ ಧತ್ತ ಇತಿ-ಶ್ರೀ ಧಃ). (2) ಧರಾನಾಮಕಳಾದ ಶ್ರೀ ಲಕ್ಷ್ಮೀದೇವಿಯನ್ನೂ ಧರಿಸಿರುವುದರ ದ್ವಾರಾ, ಭೂಮಿಯ ಮೂಲಕ ಸರ್ವವನ್ನು ಧರಿಸಿರುವವನು. (3) ಶ್ರೀ ಲಕ್ಷ್ಮೀದೇವಿಯ ಶ್ರೀ ಮತ್ತು ಧರಾ–ಎಂಬ ರೂಪ ಧಾರಕನು (ಶ್ರೀಶ್ಚ ಧರಾಮಿ ಅಸ್ಯಸ್ತ ಇತಿ-ಶ್ರೀಧರ). (4) ಆಯುಧ ಧಾರಣಕ್ರಮ-ಚಕ್ರ-ಗದಾ-ಶಂಖ-ಪದ್ಮ. (5) ನಾಸಿಕೇಂದ್ರಿಯಕ್ಕೆ (ಜ್ಞಾನೇಂದ್ರಿಯ) ಮುಖ್ಯ ಅಭಿಮಾನಿ ಭಗವದ್ರೂಪವು. (6) ನಾಸತ್ಯ ಮತ್ತು ದಸ್ರ-ಎಂಬ ಅಶ್ವಿನೀದೇವತೆಗಳು–ಅವಾಂತರಾಭಿಮಾನಿಗಳು. (7) "ಪ್ರಕೃತಿ" ನಾಮಕಗಳು–ಶ್ರೀ ಲಕ್ಷ್ಮೀದೇವಿ.

**ಶೃಂಗಾರ ಹಾರ**=ತುಲಸೀ ವನಮಾಲೆಯಿಂದ ಅಲಂಕೃತನು, **ದಿವ್ಯ ಶ್ರೀವತ್ಸಲಾಂಛನ** = ತನ್ನ ಎಡದ ವಕ್ಷಸ್ಥಳದಲ್ಲಿ "ಶ್ರೀವತ್ಸ"-ಎಂಬ ಲಾಂಛನವನ್ನು ಧರಿಸಿದ್ದಾನೆ (ಶ್ರೀ ಲಕ್ಷ್ಮೀರೂಪ).

**ಶ್ರೀ ರಘುವೀರ**=ಸೂರ್ಯ ಕುಲಾಗ್ರಣಿಯಾದ ಶ್ರೀ ರಾಮಚಂದ್ರ, **ವಾರಿಧಿಸಮ ಗಂಭೀರ**=ಸಮುದ್ರಕ್ಕೆ ಸದೃಶವಾದ ಗಾಂಭೀರ್ಯ ಗುಣವುಳ್ಳವನು. (ಸಾಮಾನ್ಯವಾಗಿ ಗಾಂಭೀರ್ಯವನ್ನು ಅಗಾಧ ಜಲರಾಶಿಯ ರೂಪದಲ್ಲಿರುವ ಸಮುದ್ರಕ್ಕೆ ಹೋಲಿಸುವರು), **ಧೀರ**=ಅಸಮ ಪರಾಕ್ರಮಿ. (ಅಜೇಯನು), **ಕ್ರೂರ ರಕ್ಕಸರನೆಲ್ಲರ ಸಂಹಾರಾ**=ಸಜ್ಜನರ ಪೀಡಕನಾದ ದುಷ್ಟ ಸ್ವಭಾವದ ಸಕಲ ದೈತ್ಯರನ್ನು ನಾಶಗೊಳಿಸುವ-ದೈತ್ಯಾದಿ.

**ಹೃಷೀಕೇಶ-**

(1) ಹೃಷೀಕ-ಎಂದರೆ ದೇಹಗತ ಇಂದ್ರಿಯಗಳೆಂದರ್ಥ. ಈಶ-ನಿಯಾಮಕ ಸ್ಥೂಲದೇಹಗತ ಸಮಸ್ತ ಇಂದ್ರಿಯಗಳಲ್ಲಿದ್ದು, ಇಂದ್ರಿಯಾಭಿಮಾನಿ ದೇವತೆಗಳಿಗೆ ಪ್ರೇರಕನಾಗಿ, ಇಂದ್ರಿಯ ವ್ಯಾಪಾರಗಳನ್ನು ನಿಯಮಿಸುವವನು. (ಹೃಷೀಕಾಣಾಂ ಇಂದ್ರಿಯಾಣಾಂ ಈಶ:- ಹೃಷೀಕೇಶಃ). (2) ಜಗತ್ತನ್ನು ಹರ್ಷಪಡಿಸುವ ಕಿರಣಗಳೆನಿಸುವ ಕೇಶವುಳ್ಳವನು (ಹೃಷ್ಟೋ ಹರ್ಷ ಹೇತವಃ ಕೇಶಾಃ ಅಸ್ಯೇತಿ-ಹೃಷೀಕೇಶಃ), (3) ಸುಖೀ ಮತ್ತು ಲಕ್ಷ್ಮೀ-ಚತುರ್ಮುಖ ಬ್ರಹ್ಮರ ಒಡೆಯ (ಹೃಷ:-ಹರ್ಷಃ ಅಸ್ಯಾಸ್ತೀತಿ-ಹೃಷೀ-ಸುಖೀ. ಈ-ಲಕ್ಷ್ಮೀಃ, ಕಃ-ಚತುರ್ಮುಖಶ್ಚ ಈಕೌ। ತಯೋಃ ಈಶಃ-ಈ ಕೇಶಃ। ಹೃಷೀ ಚಾಸೌ ಈ ಕೇಶಶ್ಚ-ಹೃಷೀಕೇಶಃ) (4) ಆಯುಧ ಧಾರಣ ಕ್ರಮ-ಚಕ್ರ-ಪದ್ಮ-ಶಂಖ-ಗದಾ. (5) ವಾಗಿಂದ್ರಿಯಾಭಿಮಾನಿ ಭಗವದ್ರೂಪ. (6) ಅಗ್ನಿಯು ಅವಾಂತರಾಭಿಮಾನಿ. (7) "ಬುದ್ಧೀ"-ರಮಾದೇವಿಯರ ಹೆಸರು.

**ವೃಂದಾವನದಲಿ** = ನಂದಗೋಕುಲಕ್ಕೆ ಸಮೀಪದಲ್ಲಿರುವ ಸುಂದರ ತಾಣ. ಯಮುನಾ ನದಿಯ ತೀರದಲ್ಲಿರುವ ಶ್ರೀ ಕೃಷ್ಣನ ವಿಹಾರಸ್ಥಳ, **ನೀ ಹರುಷದಿ ಕೊಳಲನೂದುತ** = ಶ್ರೀ ಕೃಷ್ಣನು ವೇಣುಗಾನವನ್ನು ಮಾಡುತ್ತಿರಲು (ಕೊಳಲು-ಶ್ರೀ ಲಕ್ಷ್ಮೀದೇವಿಯು ಕೊಳಲಿನ ರೂಪದಲ್ಲಿದ್ದಾಳೆ).

**ಸತಿಯರ ಸಮ್ಮೇಳನದಲಿ** = ೧೬,೦೦೦ ಗೋಪಿಕಾ ಸ್ತ್ರೀಯರ ವೃಂದದಲ್ಲಿ, **ಮಂದಾರಮಾಲೆ** = ಪಾರಿಜಾತ ಪುಷ್ಪದ ಮಾಲೆಯನ್ನು ನೀನು ಕಂಠದಲ್ಲಿ ಧರಿಸಿದೀ.

**ಪದ್ಮನಾಭ-**

(1) ಶ್ರೀ ಹರಿಯು ಪದ್ಮನಾಭ ರೂಪದಿಂದ ಕ್ಷೀರ ಸಮುದ್ರದಲ್ಲಿ ಪವಡಿಸಿದನು. ಆಗ ಆತನ ಇಚ್ಛೆಯಂತೆ, ಅವನ ನಾಭೀಪ್ರದೇಶದಿಂದ ಸುವರ್ಣಾತ್ಮಕವಾದ ಕಮಲವು ಉತ್ಪನ್ನವಾಯಿತು. ಅದು ಲಕ್ಷ್ಮ್ಯಾತ್ಮಕ ವಾದದ್ದು. ಅದರಲ್ಲಿ ಹಿರಣ್ಯ ಗರ್ಭನಾಮಕರಾದ ಬ್ರಹ್ಮದೇವರ ಉತ್ಪತ್ತಿ. (2) ವೇದ ಪ್ರತಿಪಾದ್ಯರಾದವರೆಲ್ಲ ಶ್ರೇಷ್ಠರಾಗಿರುವವರು. (ಪದ್ಯಂತ ಇತಿ ಪದ್ಮಾನಿ ವೇದ ಪ್ರತಿಪಾದ್ಯಾನಿ ತೇಷು ಶ್ರೇಷ್ಠ ಇತಿ). (3) ಮುಮುಕ್ಷುಗಳಿಂದ ಹೊಂದಲ್ಪಡುವವನು. ಮತ್ತು ಅವರ ಸಂಸಾರ ಬಂಧನ ನಿವಾರಕನು (ಪದ್ಯತೇ ಪ್ರಾಪ್ಯತೇ ಮುಮುಕ್ಷುಭಿರಿತಿ ಪದ್ಮ ನಾಭಯತಿ ಮುಮುಕ್ಷೂಣಾಂ ಸಂಸಾರಂ ಹಿನಸ್ತೀತಿ ನಾಭಃ ಪದ್ಮ ಶ್ಚಾಸೌನಾಭಶ್ಚ ಪದ್ಮನಾಭಃ). (4) ಕಲ್ಪಾಂತದಲ್ಲಿ ಚತುರ್ಮುಖನ ಸಂಹಾರಕನು (ಪದ್ಮಂ ಚತುರ್ಮುಖಂ ನಾಭಯತಿ ಕಲ್ಪಾಂತೇ ಸಂಹಾರತೇತಿ–ಪದ್ಮನಾಭಃ). (5) ಆಯುಧ ಧಾರಣ ಕ್ರಮ-ಪದ್ಮ-ಚಕ್ರ-ಗದಾ-ಶಂಖ. (6) ಪಾಣಿ ಇಂದ್ರಿಯರ (ಕರ್ಮೇಂದ್ರಿಯ ಮುಖ್ಯಾಭಿಮಾನಿ. (7) ದಕ್ಷ ಪ್ರಜಾಪತಿಯು ಅವಾಂತರಭಿಮಾನಿಯು. (8) "ಯಜ್ಞಾ"-ಲಕ್ಷ್ಮೀ ನಾಮವು.

**ಕೇಳೋ ಘನ್ನ** = ಸರ್ವೋತ್ತಮನಾದ ಶ್ರೀ ಹರಿಯೇ, ನನ್ನ ಮಾತನ್ನು ಆಲಿಸು, **ಪಾದ ಪದ್ಮವ ತೋರಿಸೋ** = ಎನ್ನ ಹೃನ್ಮಂದಿರದಲ್ಲಿ ನಿನ್ನ ಚರಣ ಕಮಲಗಳ ದಿವ್ಯ ದರ್ಶನ ಭಾಗ್ಯವನ್ನು ದಯಪಾಲಿಸು· **ಮುದ್ದು ಮುಖವ ತೋರಿ** = ನಿನ್ನ ದಿವ್ಯ ಮಂಗಳ ರೂಪವನ್ನು (ವದನಾರವಿಂದವನ್ನು ತೋರಿಸು, ಎನ್ನ ಬೇಗ **ಉದ್ಧಾರ ಮಾಡೆಂದು ಬೇಡುವೆ ನಿನ್ನ** = ಎನ್ನ ಭವಬಂಧನವನ್ನು ಬಿಡಿಸಿ, ಉದ್ಧರಿಸು. ನಿನ್ನ ಲೋಕಕ್ಕೆ ಕರೆದೊಯ್ಯು.

**ದಾಮೋದರ**–

(1) **ದಾಮ**-ಹಗ್ಗ. ಉದರ-ಹೊಟ್ಟೆ ಯಾರ ಉದರದಲ್ಲಿ ದಾಮ ವಿದೆಯೋ, ಅವನು ದಾಮೋದರ ನಾಮಕ ಶ್ರೀ ಕೃಷ್ಣನು ಯಶೋದೆಯು ಪುಟ್ಟ ಕೃಷ್ಣನ ತುಂಟತನವನ್ನು ತಾಳಲಾರದೇ ಹಗ್ಗದಿಂದ ಒರಳಿಗೆ ಕಟ್ಟಿದಳು ಆಗ ತುಂಟ ಕೃಷ್ಣನು ತನ್ನ ಅದ್ಭುತ ಲೀಲಲೀಲೆಗಳನ್ನು ತೋರಿದ ಪ್ರಸಂಗ ವಿಶೇಷಗಳು. (2) ಸಮಸ್ತ ಲೋಕಗಳನ್ನು ತನ್ನ ಉದರದಲ್ಲಿ ಧರಿಸಿರುವವನು. (3) ಪಾದ ತತ್ತ್ವಕ್ಕೆ (ಕರ್ಮೇಂದ್ರಿಯ) ಮುಖ್ಯಾಭಿಮಾನಿ ಭಗವದ್ರೂಪವು. (4) ಅವಾಂತರ ತತ್ತ್ವಾಭಿಮಾನಿ-"ಜಯಂತನು". (5) ರಮಾನಾಮ-"ಇಂದಿರಾ". (6) ಆಯುಧ ಧಾರಣಕ್ರಮಾ-ಶಂಖ–ಗದಾ-ಚಕ್ರ-ಪದ್ಮ.

**ಗುಣಧಾಮ** = ಸಕಲ ಶುಭ ಗುಣಗಳಿಗೆ ಆಶ್ರಯನು, ಸ್ವಾಮಿ ಚರಾಚರಾತ್ಮಕ ಸಮಗ್ರ ಜಗತ್ತಿಗೇ ಮುಖ್ಯ ಪ್ರಭುವು, **ದಾನವಾಂತಕ** =ತಮೋಯೋಗ್ಯ ಚೇತನರಾದ ದುಷ್ಟ ದೈತ್ಯರ ಸಂಹಾರಿ, (ಅಂತಕ-ಅವರ ಪಾಲಿಗೆ ಯಮ ಸ್ವರೂಪನು, **ಯದುಕುಲ ಸಾರ್ವಭೌಮ** = ಯಾದವ ಕುಲಕ್ಕೇ ಅತ್ಯಂತ ಶ್ರೇಷ್ಠನು.

**ನೀಲಮೇಘ ನಿಭ ಶ್ಯಾಮ** = ನೀಲಮೇಘ ವರ್ಣ ವಿಶಿಷ್ಟನು (ಶ್ಯಾಮ–ಶ್ಯಾಮವರ್ಣ- ನಿಭ–ಕಾಂತಿ), **ಕೃಷ್ಣ ಇಳಾಪತಿ** = ಭೂರಮಣ ನಾದ ಶ್ರೀ ಕೃಷ್ಣನು (ಇಳಾಪತಿ ಕೃಷ್ಣನು). ಕೊನೆಯ ತತ್ತ್ವವಾದ ಪೃಥಿವೀ ತತ್ತ್ವಕ್ಕೆ ಮುಖ್ಯ ಅಭಿಮಾನಿ–ಶ್ರೀ ಕೃಷ್ಣ ರೂಪವು, **ಬಹು ಪುಣ್ಯನಾಮ** = ಅನಂತಾನಂತ ಮಂಗಳ ನಾಮಧೇಯನು.

**ಸಂಕರ್ಷಣ :–**

(1) ಲಯ ಕಾಲದಲ್ಲಿ ಸಮಸ್ತ ವಸ್ತುಗಳನ್ನು ಆಕರ್ಷಿಸಿ ಮೂಲ ರೂಪಗಳಲ್ಲಿ ಸೇರಿಸುವ ಲಯಕಾರದ ಭಗವದ್ರೂಪವು. (ಸಮ್ಯಕ್ ಕರ್ಷತೀತಿ–ಸಂಕರ್ಷಣ). (2) ವಾಯು ತತ್ತ್ವದ ಮುಖ್ಯಾಭಿಮಾನಿ ಭಗವ ದ್ರೂಪವು (ಕರ್ಮೇಂದ್ರಿಯ). (3) ಮಿತ್ರನಾಮಕ ಸೂರ್ಯನು-ಅಪಾಂತ ರಾಭಿಮಾನಿ. (4) "ಹಿರಣ್ಯಾ"-ರಮಾನಾಮ. (5) ಆಯುಧ ಧಾರಣಾ ಕ್ರಮ–ಶಂಖ–ಪದ್ಮ-ಚಕ್ರ–ಗದಾ.

**ದನುಜ ಹರಣ** = ದೈತ್ಯರ ವಿನಾಶಕನು (ದನೂ-ಕಶ್ಯಪ ಮಹಾ ಮುನಿಗಳ 13 ಪತ್ನಿಯರಲ್ಲಿ ಒಬ್ಬಳು. ಅವಳ ಪುತ್ರರೇ-"ದನುಜರು", **ದೇವ** = ದೇವ ದೇವೋತ್ತಮನಾದ ಶ್ರೀ ಹರಿ (ಪರಮ ಪೂಜ್ಯನೆಂಪರ್ಥ), **ಪಂಚಮುಖಿ ದ್ರೌಪದಿ ಮೇಲೆ** ಸುಂದರ ವದನಾರವಿಂದಳಾದ ದ್ರೌಪದಿ ದೇವಿಯರ ಮೇಲೆ (ಪಂಚ-ಅಗಲವಾದ-ವಿಸ್ತಾರವಾದ ಮುಖಿ-ವದನವುಳ್ಳ ವಳು-ಚಂದ್ರಮುಖಿ).

**ಕರುಣ** = ಪರಮಾನುಗ್ರಹ ಮಾಡಿದ ಶ್ರೀ ಕೃಷ್ಣ, **ಕೆಂಪು ಮೊಂದವ ರೇಖಾರಚರಣ** = ಕೆಂಪಾದ ಪಾದ ದ್ವಯಗಳಲ್ಲಿ ಅಂಕುಶ ರೇಖಾ ಚಿಹ್ನೆಗಳಿವೆ, **ನಿಜ ಕಂಕಣ ಕೇಯೂರ** = ತನ್ನ ಶರೀರದ ಮೇಲೆ ಧರಿಸಿ ರುವ ಹಸ್ತಾಭರಣ ಭಾಪುರಿ ಮುಂತಾದ ಆಭರಣ ವಿಶೇಷಗಳು-ಎಲ್ಲವೂ ಭಗವನ್ಮಯ, **ಕೌಸ್ತುಭಾಭರಣ** = ಶ್ರೀ ಹರಿಯ ಕಂಠದಲ್ಲಿ ಅಲಂಕೃತ

ವಾದ ಕೌಸ್ತುಭವೆಂಬ ದಿವ್ಯಮಣಿ ಶ್ರೀ ಬ್ರಹ್ಮದೇವರು ಕೌಸ್ತುಭ ಮಣಿಯ ರೂಪದಲ್ಲಿ ಶ್ರೀ ಹರಿಯನ್ನು ಸೇವಿಸುತ್ತಿದ್ದಾರೆ.

**ವಾಸುದೇವ-**

(1) ಸರ್ವಭೂತ ನಿವಾಸಿಯಾದವನು (ಸರ್ವಭೂತ ನಿವಾಸೋಽಸಿ ವಾಸುದೇವ ನಮೋಽಸ್ತುತೇ). (2) ಆಕಾಶದಲ್ಲಿ ವಾಸಿಸಿಕೊಂಡಿರುವವನು ಅವಕಾಶಪ್ರದನು. ನಿಯಾಮಕನಾಗಿ ಭೋಕ್ತ್ರಾದಿಗಳನ್ನು ಪ್ರವೇಶಿಸಿರುವವನು (ಅವಕಾಶ ಪ್ರದೋ ನಿತ್ಯಂ ವಾಸುದೇವೋ ನಭಃ ಸ್ಥಿತಃ). (3) ಶರೀರದಲ್ಲಿ ಮಹತ್ತತ್ವದ ವಿಕಾರವಾದ ವಿಜ್ಞಾನಮಯ ಕೋಶ ಎನಿಸುವ ಚಿತ್ತದಲ್ಲಿ ವಿಜ್ಞಾನಮಯ ನಾಮಕನಾಗಿ ವಾಸಿಸುವವನು. ವಿಜ್ಞಾನಮಯ ಕೋಶದ ಮುಖ್ಯಾಭಿಮಾನಿಯು). ವಸತಿ ಮಹತ್ತತ್ವಸ್ಯ ವಿಕಾರಭೂತೇ ವಿಜ್ಞಾನಮಯ ಕೋಶೇ ಇತಿ ವಾಸುಃ ದೀವ್ಯತಿ ಅಥವಾ ದೇವಯತಿ ದ್ಯೋತಯತೀವ ದೇವಃ). (4) ಉಪಸ್ಥ ತತ್ತ್ವಕ್ಕೆ (ಕರ್ಮೇಂದ್ರಿಯ) ಮುಖ್ಯಾಭಿಮಾನಿಯು. (5) ಸ್ವಾಯಂಭುವಮನುವು ಅವಾಂತರಾಭಿಮಾನಿ ತತ್ತ್ವದೇವತಾ. (6) "ಹರಿಣೀ"-ಶ್ರೀ ರಮಾನಾಮ. (7) ಆಯುಧ ಧಾರಣಕ್ರಮ-ಶಂಖ-ಚಕ್ರ-ಪದ್ಮ-ಗದಾ.

**ದಿವ್ಯ ಸಾಸಿರ ನಾಮವ ನೆನೆವನೆ** = ವಿಷ್ಣು ವಷಟ್ಕಾರಾದಿ ಸಹಸ್ರ ನಾಮಾಂಕಿತನು. ಶಿರದಲ್ಲಿರುವ ಸಹಸ್ರ ದಳಯುತ ಕಮಲದಲ್ಲಿ ಸಹಸ್ರ ನಾಮಗಳಿಂದ ತುರ್ಯನಾಮಕನಾಗಿ ವಿದ್ಯಮಾನವಾಗಿರುವ ಭಗವದ್ರೂಪವು. ವಾಸುದೇವನ ಸಹಸ್ರ ನಾಮಗಳನ್ನು ಸ್ಮರಿಸುವವನೇ ಪರಮಧನ್ಯನು, **ಬೇಸರದೆ ಸಲಹ ಬೇಕೆನ್ನ** = ಉದಾಸೀನ ಮಾಡದೇ ನನ್ನನ್ನು ಸಂರಕ್ಷಿಸು, **ತುಸ ಘಾಸಿಯ ಮಾಡದೇ** - ಸ್ವಲ್ಪವೂ ನೋವನ್ನು ಉಂಟು ಮಾಡದೇ, **ಕರುಣಾ ಸಂಪನ್ನ** ಕಡು ದಯಾಸಾಗರನು.

**ಪ್ರದ್ಯುಮ್ನ-**

(1) ವಿಶೇಷ ಕಾಂತಿಯಿಂದ ಬೆಳಗುವವನು (ದ್ಯುತಿ-ಕಾಂತಿ ದ್ಯುಮ್ನ -ಕಾಂತಿಯುಕ್ತನು. ಪ್ರದ್ಯುಮ್ನ-ಪ್ರಕೃಷ್ಟವಾದ (ಶ್ರೇಷ್ಠವಾದ) ಪ್ರಕಾಶ ಯುವನು). (ದ್ಯುಪ ಸ್ವರೂಪತ್ವಾರ ಪ್ರದ್ಯುಮ್ನಃ). (2) ಪ್ರಕೃಷ್ಟ ನಾದ ಜ್ಞಾನಸ್ವರೂಪನು (ಪ್ರಕೃಷ್ಟಂ ದ್ಯುಮ್ನಂ ಜ್ಞಾನಂ ಯಸ್ಯಸಃ-ಪ್ರದ್ಯುಮ್ನ). (3) ಪ್ರಾಣಮಯ ಕೋಶಕ್ಕೆ ಮುಖ್ಯಾಭಿಮಾನಿಯು. (4) ಇಂದ್ರಿಯಕ್ಕೆ ಮುಖ್ಯಾಭಿಮಾನಿ ದೇವತಾ. (5) ಅವಾಂತರ ತತ್ತ್ವಾವ ಭಿಮಾನಿ—(6) ಆಯುಧ ಧಾರಣಕ್ರಮ-ಶಂಖ-ಗದಾ-ಪದ್ಮ-ಚಕ್ರ. (7) ರಮಾನಾಮ-

**ಎನ್ನ ಬದ್ಧವಾದ ದುಷ್ಕರ್ಮಗಳ ಕಳಿದೆ**= ಜೀವರ ಸ್ವರೂಪ ದೇಹಕ್ಕೆ ಆವರ್ಕವಾಗಿ ಪ್ರಕೃತ್ಯಾತ್ಮಕವಾದ ಲಿಂಗದೇಹವಿದೆ. ಇದು ಷೋಡಷ ಕಳೆಗಳಿಂದ ಯುಕ್ತವಾಗಿದ್ದು ತ್ರಿಗುಣಾತ್ಮಕವಾಗಿದೆ. ಅನಾದಿ ಕರ್ಮದ ಆಗರ. ತಮೋಗುಣದ ಪ್ರಾಚುರ್ಯದಿಂದ ದುಷ್ಕರ್ಮಗಳ ಅಭಿ ವ್ಯಕ್ತಿ ಕರ್ಮಗಳು ಗುಣಜನ್ಯವಾಗಿವೆ.

ಅಂತಹ ದುಷ್ಕರ್ಮಗಳನ್ನು ಪರಿಹರಿಸಿ, ಪರಿಶುದ್ಧವನ್ನಾಗಿ ಮಾಡುವ ಭಗವದ್ರೂಪವು-ಪ್ರದ್ಯುಮ್ನರೂಪವು, **ದುರ್ಬುದ್ಧಿ**=ದುಷ್ಟ ವಿಷಯ ಗಳ ವಾಸನೆಯಿಂದ ದುರ್ಬುದ್ಧಿ ಹುಟ್ಟುವುದು ಅದರಿಂದ ದುಷ್ಕರ್ಮಗಳ ಆಚರಣೆ, **ದುರ್ವಾಕ್ಯ**=ಕೆಟ್ಟ ಮಾತುಗಳು ಇದು ದುಷ್ಕರ್ಮದ ಫಲ ರೂಪವು, **ಸಾಧು ಸಜ್ಜನರ ಸಂಗ** ನಿನ್ನ ಅನುಗ್ರಹದಿಂದ ಸಾತ್ವಿಕ ಗುಣಯುಕ್ತರಾದ ಸಚ್ಚೇತನರ ಸಹವಾಸವನ್ನು ಹೊಂದಿದೆ.

**ಅನಿರುದ್ಧ-**

1) ಜಗತ್ಸೃಷ್ಟಿಯೇ ಮೊದಲಾದ ತನ್ನ ಚಟುವಟಿಕೆಗಳನ್ನು ನಿರ್ವ ಹಿಸುವಲ್ಲಿ ಯಾರಿಂದಲೂ ತಡೆಯಿಲ್ಲದವನು (ಸೃಷ್ಟ್ಯಾದಿ ಸ್ವಕ್ರಿಯಾನು

ಕೇನಾಪಿ ನಿರುದ್ಧೋ ನಭವತೀತಿ-ಅನಿರುದ್ಧಃ).

2) ಯಾವುದೇ ದೋಷದಿಂದ ಪ್ರತಿಬಂಧಿಸಲ್ಪಡದೇ ಇರುವವನು (ಯೇನ ಕೆನಾಪಿ ದೋಷೇಣ ನಿರುದ್ಧೋ ಪ್ರತಿಬದ್ಧೋ ನಭವತೀತಿ-ಅನಿರುದ್ಧಃ).

3) ನಿರುದ್ಧ ಎಂದರೆ ತಡೆ ಅಥವಾ ಪ್ರತಿಬಂಧಕ ಸಾಮಗ್ರಿ ನಿಷೇಧಾರ್ಥದಲ್ಲಿ ಅನಿರುದ್ಧ-ಎಂದರೆ, ಯಾರಿಂದಲೂ ನಿರೋಧಿಸಲ್ಪಡದೇ ಇರುವವನು. ಸರ್ವತಂತ್ರ ಸ್ವತಂತ್ರನೆಂದರ್ಥ.

4) ಇಂದ್ರಿಯಕ್ಕೆ ಮುಖ್ಯಾಭಿಮಾನಿ.

5) ಅವಾಂತರ ತತ್ತ್ವಾಭಿಮಾನಿ-

6) ರಮಾನಾಮ-

7) ಆಯುಧ ಧಾರಣ ಕ್ರಮ-ಗದಾ-ಶಂಖ-ಪದ್ಮ-ಚಕ್ರ.

8) ಅನ್ನಕೋಶಾಭಿಮಾನಿ.

9) ಸೂಕ್ಷ್ಮ ಸೃಷ್ಟಿಗೆ ಕಾರಣರೂಪವು.

**ಅನುದಿನದಲ್ಲಿ** = ಪ್ರತಿ ದಿನದಲ್ಲೂ (ನಿರಂತರವಾಗಿ), **ನೀ ವಿನಯದಿಂದ ಇದ್ದು** = ನಂದಗೋಕುಲದಲ್ಲಿ ಗೋಪಿಕಾ ಸ್ತ್ರೀಯರ ಮನೆಗಳಲ್ಲಿ ವಿನಯವನ್ನು ಪ್ರಕಟಿಸುತ್ತಾ-ಬಾಲಲೀಲೆಗಳಿಂದ ಅವರನ್ನು ಹರ್ಷಪಡಿಸುತ್ತಾ, **ಸನಕಾದಿ ವಂದ್ಯ** = ಸನಕ-ಸನತ್ಕುಮಾರ-ಸನತ್ಸುಜಾತ-ಸನಂದನರೆಂಬ ಶ್ರೀ ಬ್ರಹ್ಮದೇವರ ಮಾನಸ ಪುತ್ರರಿಂದ ಪೂಜಿತನಾದವನು.

**ಒಂದು ಕ್ಷಣ ಬಿಟ್ಟಿರಲಾರೆ**=ನೀನು ಎನ್ನ ಬಿಂಬಮೂರ್ತಿ ಬಿಂಬ-ಪ್ರತಿಬಿಂಬಗಳ ಸಂಬಂಧ ಅನ್ಯೋನ್ಯ-ನಿತ್ಯ ಮತ್ತು ಅನಾದಿ. ನನ್ನ ಸ್ಥಿತ್ಯತ್ವಕ್ಕೆ ನೀನೇ ಕಾರಣ ನಿನ್ನ ಬಿಂಬ ಕ್ರಿಯಾರೂಪವಾದ ವ್ಯಾಪಾರವಿಲ್ಲದೆ, ನನ್ನ ಕರ್ತೃತ್ವಶಕ್ತಿ ಅಭಿವ್ಯಕ್ತವಾಗಲಾರದು, **ನಿಲ್ಲೋ ಮನದಲ್ಲಿ** =ಎನ್ನ ಮನಮಂದಿರದಲ್ಲಿ ಶಾಶ್ವತವಾಗಿ ನೆಲೆಸು. ಶ್ರೀ ಪರಮಾತ್ಮನು ಸಕಲ ಜೀವರ ಬಿಂಬನಾಗಿ ಹೃದ್ಗುಹಾವಾಸಿಯಾಗಿ ನಿರಂತರವೂ ಇದ್ದೇ ಇದ್ದಾನೆ. ಆದರ ಜ್ಞಾನವನ್ನು ನನಗೆ ತಂದುಕೊಡೆಂದು ದಾಸರಾಯರ ದೀನ ಪ್ರಾರ್ಥನೆ.

**ಪುರುಷೋತ್ತಮನು–**

1) ಪುರುಷರಲ್ಲಿ ಕ್ಷರ ಪುರುಷರೆಂತಲೂ, ಅಕ್ಷರ ಪುರುಷರೆಂತಲೂ ಎರಡು ಪ್ರಕಾರ. ನಿತ್ಯ ಮುಕ್ತರೂ, ನಿರ್ವಿಕಾರರೂ, ಸದಾ ನಾಶರಹಿತರೂ ಆದ ಶ್ರೀ ಲಕ್ಷ್ಮೀದೇವಿಯು "ಅಕ್ಷರ ಪುರುಷಳು". ಚತುರ್ವಿಧ ನಾಶವನ್ನು ಹೊಂದುವ ಬ್ರಹ್ಮಾದಿ ಸಕಲ ಜೀವವರ್ಗ–ಕ್ಷರಪುರುಷರು. ಕ್ಷರಾಕ್ಷರ ಪುರುಷರಿಗಿಂತಲೂ ಅನಂತಾನಂತ ಕೋಟಿ ಗುಣಗಳಿಂದ ಅಧಿಕನು ಶ್ರೀ ಹರಿ ಇದರಿಂದ ಪುರುಷೋತ್ತಮನೆಂಬ ಶಬ್ದವಾಚ್ಯನು.

2) ಪುರುಷರೆನಿಸಿರುವ ಚೇತನರಿಗಿಂತ ಅತ್ಯಂತ ಉತ್ತಮನಾಗಿರುವವನು (ಪುರುಷಾಣಾಂ ಉತ್ತಮಃ–ಪುರುಷೋತ್ತಮಃ).

3) ಪರಿಪೂರ್ಣನಾಗಿರುವವನು ಮತ್ತು ಅತ್ಯಂತ ಉತ್ತಮನು (ದ್ವಾಮಿಮೌಪುರುಷಾ-ಗೀತಾ-ಅಧ್ಯಾಯ 15 ಶ್ಲೋಕ-18).

4) ರೂಪ-ತನ್ಮಾತ್ರ ತತ್ತ್ವಕ್ಕೆ ಮುಖ್ಯ ಅಭಿಮಾನಿ.

5) ವ್ಯಾನನಾಮಕ ವಾಯುವು ಅವಾಂತರ ತತ್ತ್ವಾಭಿಮಾನಿ ದೇವತೇ.

6) ರಹಾಸಾಮು-"ಆನಂದಿನೀ".

7) ಆಯುಧ ಧಾರಣ ಕ್ರಮ-ಪದ್ಮ-ಶಂಖ-ಗದಾ-ಚಕ್ರ.

**ಆರು ಸಾಟಿ** = ಪುರುಷೋತ್ತಮ ಶಬ್ದ ವಾಚ್ಯನಾದ ಶ್ರೀ ಪರಮಾತ್ಮನಿಗೆ ಯಾರು ಸಮರು, ಯಾರು ಅಧಿಕರಿದ್ದಾರೆ ? ಆತನು ಸಮಾಭ್ಯಧಿಕ ಶೂನ್ಯನು, **ಪರಬ್ರಹ್ಮ ಸ್ವರೂಪಿಯು** = ಅವನೇ ಪರಬ್ರಹ್ಮ ಸ್ವರೂಪನು. ಜೀವರೂ ತಾರತಮ್ಯಾನುಸಾರ **ಪೂರ್ಣರೇ** (ಬ್ರಹ್ಮ) ಆದರೆ ಶ್ರೀ ಪರಮಾತ್ಮನು ಪರಿಪೂರ್ಣನು. (ಜೀವರು ಅಪರಿಪೂರ್ಣರು) ಇದರಿಂದ "ಪರಬ್ರಹ್ಮ"ನೆಂಬ ಶಬ್ದ ಪ್ರಯೋಗ ಸಚ್ಚಿದಾನಂದಾತ್ಮ ಸ್ವರೂಪಿಯು, **ನಿನಗಾರೋ ಪೋಟಿ** = ನಿನಗೆ ಹೋಲಿಕೆ ಯಾದವರು ಯಾರು ? ನೀನು ನಿರಪೇಕ್ಷನು. ಜೀವವರ್ಗ ಸಾಪೇಕ್ಷರು.

**ಮಹಿಮೆ ಕೇಳಿದರೆ ಒಂದು ಕೋಟಿ** = ನೀನು ಅನಂತಾನಂತ ಮಹಿಮಾ ಸಂಪನ್ನನು ನಿನ್ನ ಮಹಿಮಾತಿಶಯಗಳು ಅಪಾರ ಹಾಗೂ ಅನಂತಾನಂತ ಅಗಣಿತ ಮತ್ತು ಅಪರಿಮಿತ, **ನಿನ್ನ ಹೃದಯದಿ ಬ್ರಹ್ಮಾಂಡ ಕಂಡ ಕಿರಿಟಿ** = ಕುರುಕ್ಷೇತ್ರದ ಮಹಾ ಸಮರಾಂಗಣದಲ್ಲಿ ಶ್ರೀ ಕೃಷ್ಣನು ಕಿರೀಟ ನಾಮಕನಾದ ಅರ್ಜುನನಿಗೆ ತನ್ನ ವಿಶ್ವ ರೂಪವನ್ನು ತೋರಿಸಿದ ಪ್ರಸಂಗ ವಿಶೇಷ. ಸಮಸ್ತ ಬ್ರಹ್ಮಾಂಡವನ್ನು ಕಂಡು ಮೂಕ ವಿಸ್ಮಿತನಾದ ಕಿರೀಟಿ.

**ಅಧೋಕ್ಷಜ**

1) ಎಂದೆಂದಿಗೂ ಕೆಳಗೆ ಹೋಗದಿರುವವನು-ಅಪಕರ್ಷವನ್ನು ಹೊಂದದಿರುವವನು (ಚಾಮ ಕದಾಚಿದಪಿ ಅಧಃ ನಕ್ಷೀಯತೇ ಕ್ಷಿಯತಿ ಗಚ್ಛತೇತಿ-ಅಧೋಽಕ್ಷಜಃ.

2) ಬಾಹ್ಯೇಂದ್ರಿಯಜನ್ಯ ಜ್ಞಾನಕ್ಕೆ ಗೋಚರಿಸದಿರುವವನು.

3) ಆಕಾಶ ಮತ್ತು ಪೃಥ್ವಿಯ ಮಧ್ಯದಲ್ಲಿ ವಿರಾಡ್ರೂಪದಿಂದ ಅಭಿವ್ಯಕ್ತನಾಗಿರುವವನು (ದ್ಯೌರಕ್ಷಂ ಪೃಥಿವೀ ಚಾಧಃ ತಯೋರ್ಯಸ್ಮಾದ ಜಾಯತ ಮಧ್ಯೇ ವೈರಾಜ ರೂಪೇಣ-ಇತಿ ವಾ ಅಧೋಕ್ಷಜಃ).

4) ರಸ-ಎಂಬ ತನ್ಮಾತ್ರ ತತ್ತ್ವಕ್ಕೆ ಮುಖ್ಯಾಭಿಮಾನಿ.

5) ಅವಾಂತರಾಭಿಮಾನಿ-ಉದಾನನಾಮಕ ವಾಯು.

6) ರಮಾನಾಮ-"ಸುಖಾ".

7) ಆಯುಧ ಧಾರಣ ಕ್ರಮ-ಗದಾ-ಶಂಖ-ಚಕ್ರ-ಪದ್ಮ.

**ಅಸುರ ಸಂಹಾರಿ** = ತಮೋಯೋಗ್ಯರಾದ ದೈತ್ಯರನ್ನು ನಾಶಗೊಳಿಸುವವನು. ದಾನವಾರಿ, **ಕೃಷ್ಣ ಅದ್ಭುತರೂಪ** = ಶ್ರೀ ಕೃಷ್ಣನು ಬಾಲ ರೂಪದಲ್ಲಿದ್ದಾಗಲೇ ತನ್ನ ಸಾಕು ತಾಯಿಯಾದ ಯಶೋದೆಗೆ ತನ್ನ ಪುಟ್ಟ ಬಾಯಿಯಲ್ಲಿ ಇಡೀ ಬ್ರಹ್ಮಾಂಡವನ್ನೇ ತೋರಿಸಿದ ಅದ್ಭುತ ಚರಿತನು. ಹಾಗೆಯೇ ಅರ್ಜುನನಿಗೆ ವಿಶ್ವರೂಪ ಪ್ರದರ್ಶನ ಮಾಡಿಸಿದ್ದು.

**ಶಿಶುಪಾಲನ ವೈರಿ** = ರಾಜ ಸೂಯಯಾಗದ ಪ್ರಸಂಗದಲ್ಲಿ ದುಷ್ಟನಾದ ಶಿಶುಪಾಲನ ಶಿರವನ್ನು ಚಕ್ರದಿಂದ ಛೇದಿಸಿದನು, **ಶೌರಿ** = ಶೂರಸೇನ ಮಹಾ ರಾಜನ ಯದುವಂಶೋದ್ಭವನಾದ ಶ್ರೀ ಕೃಷ್ಣ, **ಅಜಾಮಿಳ ನಾರಗನೆನ್ನ** = ಪರಮ ಪಾಪಿಷ್ಠನಾಗಿದ್ದ ಅಜಾಮಿಳನು ತನ್ನ ಅಂತ್ಯ ಕಾಲದಲ್ಲಿ "ನಾರಗ"-ಎಂದು ತನ್ನ ಪುತ್ರನ ಹೆಸರನ್ನು ಕೂಗಿದ. ಆ ಪ್ರಸಂಗದಲ್ಲಿ ಪಶ್ಚಾತ್ತಾಪದಿಂದ ಬೆಂದುನೊಂದಿದ್ದ ಅವನ ಅಂತರಂಗ ಪುತ್ರನ ನಾಮೋ

ಚ್ಚಾರಣೆಯ ಸೆಪದಿಂದ ಹರಿನಾಮಸ್ಮರಣೆ ಮಾಡಿದ್ದರ ಫಲವಾಗಿ ಸದ್ಗತಿ ಪಡೆದ, **ಮುರಾರಿ**=ಮುರಾ ಎಂಬ ಅಸುರರನ್ನು ಸಂಹರಿಸಿದ ಶ್ರೀ ಕೃಷ್ಣ.

**ನರಸಿಂಹ–**

1) ಭಾಗವತೋತ್ತಮನಾದ ಬಾಲಕ ಪ್ರಹ್ಲಾದನ ಮಾತನ್ನು ಸತ್ಯವಾಗಿಸುವುದಕ್ಕಾಗಿ ಸಭಾ ಮಧ್ಯದಲ್ಲಿದ್ದ ಸ್ತಂಭವನ್ನು ಸೀಳಿಕೊಂಡು ಪ್ರಾದುರ್ಭವಿಸಿದ ಸ್ತಂಭಜರೂಪವು.

2) ಮುಖ ಸಿಂಹರೂಪ ಮತ್ತು ಉಳಿದ ಶರೀರ ಮಾನವ ರೂಪದಿಂದ ಯುಕ್ತವಾದ ಅತ್ಯದ್ಭುತ ರೂಪವು.

3) ನರ-ಅರಾ:–ಎಂದರೆ ದೋಷಗಳು. ನರ-ನಿಷೇದಾರ್ಥದಲ್ಲಿ ದೋಷ ರಹಿತನೆಂದರ್ಥ. ಯಾವ ದೋಷದ ಸಂಪರ್ಕವೂ ಅನಾದ್ಯನಂತ ಕಾಲದಿಂದಲೂ ಲವಲೇಶವೂ ಇಲ್ಲದ ನಿತ್ಯ ಕಲ್ಯಾಣ ಗುಣನಿಧಿಯು. ಸಿಂಹ–ಶಬ್ದವು ಶ್ರೇಷ್ಠತ್ವ ವಾಚಕವು. ಅಂದರೆ ಸರ್ವವಿಧಗಳಲ್ಲೂ ಉತ್ತಮೋತ್ತಮನೆಂದರ್ಥ. ಅಂದರೆ, ನಿರ್ದೋಷನೂ, ಅನಂತಕಲ್ಯಾಣ ಗುಣಗಣ ಪರಿಪೂರ್ಣನೂ ಮತ್ತು ಸರ್ವೋತ್ತಮನೂ ಆದ ಭಗವದ್ವಸ್ತುವೆಂದು ಶಬ್ದಾರ್ಥ ತಾತ್ಪರ್ಯವು.

4) ತತ್ತ್ವಕ್ಕೆ ಮುಖ್ಯಾಭಿಮಾನಿ ದೇವತಾ.

5) ಅವಾಂತರಾಭಿಮಾನಿಯು—

6) ಶ್ರೀ ಲಕ್ಷ್ಮೀದೇವಿಯ ನಾಮ ಸಾಂಕೇತವು.

7) ಆಯುಧ ಧಾರಣಾಕ್ರಮ-ಪದ್ಮ-ಗದಾ-ಶಂಖ-ಚಕ್ರ.

**ರೂಪವ ತಾಳ್ದಿ**=ದುಷ್ಟ ದಾನವಾಗ್ರೇಸರನಾದ ಹಿರಣ್ಯ ಕಶಿಪುವಿನ ಸಂಹಾರಕ್ಕಾಗಿ ಪ್ರಾದುರ್ಭವಿಸಿದ ಅತ್ಯಾಶ್ಚರ್ಯಕರವಾದ ಉಗ್ರರೂಪ, **ಕಂದ ಕರೆಯೆ**=ಪೂಜ್ಯ ಬಾಲಕನಾದ ಪ್ರಹ್ಲಾದನು-ಶ್ರೀ ಹರಿಯು ಸರ್ವತ್ರ ವ್ಯಾಪ್ತನೆಂದು ತಂದೆಗೆ ಉದ್ಘೋಷಿಸುತ್ತಿರಲಾಗಿ, ನಿನ್ನನ್ನು ಭಕ್ತಿ ಭಾವ ದಿಂದ ಪ್ರತ್ಯಕ್ಷವಾಗೆಂದು ಪ್ರಾರ್ಥಿಸಿದ, **ಕಂಭದಿ ಬಂದು**=ಸಭಾ ಮಧ್ಯ ದಲ್ಲಿದ್ದ ಬೃಹತ್ ಸ್ತಂಭವನ್ನು ದಾನವೇಂದ್ರನು ತನ್ನ ವಜ್ರ ಮುಷ್ಟಿಯಿಂದ ಗುದ್ದಲು, ಆ ಸ್ತಂಭವನ್ನು ಸೀಳಿಕೊಂಡು ಡಿಂಗರಿಗನಾದ ಭಕ್ತ ಪ್ರಹ್ಲಾದ ನನ್ನು ಸಲಹಿದ ರೂಪ, **ಕರುಣದಿ ಕಾಯ್ದೆ**=ತರಳ ಪ್ರಹ್ಲಾದ ವರದ ನಾದದ್ದು, **ದುರುಳ ಹಿರಣ್ಯಕನಸೀಳ್ದೆ** = ಶ್ರೀ ಬ್ರಹ್ಮದೇವರ ವರದಿಂದ ಮದೋನ್ಮತ್ತನಾಗಿ, ಲೋಕಕಂಟಕನಾಗಿದ್ದ ಪ್ರಚಂಡ ದೈತ್ಯನಾದ ಹಿರಣ್ಯ ಕಶಿಪುವನ್ನು ತೊಡೆಯ ಮೇಲೆ ಹಾಕಿಕೊಂಡು, ಉದರವನ್ನು ನಖಾಗ್ರ ದಿಂದ ಸೀಳಿ, ಅವನ ಕರುಳ ಮಾಲೆಯನ್ನು ಕಂಠದಲ್ಲಿ ಧರಿಸಿದ ಕಮಲ ದಳಾಯತಾಕ್ಷನು.

**ಅಚ್ಯುತ-**

1) ಇತರ ಜೀವಗಣರಂತೆ, ಚತುರ್ವಿಧವಾದ ನಾಶರಹಿತನು.

2) ಅನಾದ್ಯಂತ ಕಾಲದಿಂದ ಶಶ್ವದೇಕ ಪ್ರಕಾರನಾಗಿ ನಿತ್ಯ ಸ್ವರೂಪಿ ಯಾಗಿ ಶಾಶ್ವತನಾಗಿರುವವನು.

3) ಸ್ವರೂಪದಿಂದಲೂ ಮತ್ತು ಗುಣಗಳಿಂದಲೂ, ಕ್ರಿಯೆಗಳಿಂದಲೂ ಯಾವಾಗಲೂ-ಚ್ಯುತಿ ಇಲ್ಲದಿರುವವನು (ಸ್ವರೂಪತಃ ಗುಣತಃ ಕ್ರಿಯಾತೋ ವಾಸ ಚ್ಯವತ-ಇತಿ ಅಚ್ಯುತಃ ಚ್ಯುಜ್-"ಗತೌ"-ಪರಿಷ್ಕಾರದಿಂದ).

4) ಪರಿಪೂರ್ಣನಾದ ಪ್ರಯುಕ್ತ ತನ್ನ ಮೂಲ ರೂಪದಿಂದಲೇ ಅವ ತರಿಸುವವನು (ಅತ್ ಅ ನಾಮಕಾತ್ ಸ್ವ ಮೂಲ ರೂಪಾದೇವ ಚ್ಯವತೇ ಅವತರತೇತಿ-ಅಚ್ಯುತಃ ಅತ್ ಚ್ಯುತ್ಃ-ಅಚ್ಯುತಃ).

5) ತತ್ತ್ವಕ್ಕೆ ಮುಖ್ಯಾಭಿಮಾನಿಯು.

6) ಅವಾಂತರ ತತ್ತ್ವಾಭಿಮಾನಿ ದೇವತಾ-

7) ಶ್ರೀ ಲಕ್ಷ್ಮೀಸಾಮ-

8) ಆಯುಧ ಧಾರಣ ಕ್ರಮ-ಪದ್ಮ-ಚಕ್ರ-ಶಂಖ-ಗದಾ.

**ನೀನತಿ ಮುದ್ದು** ="ಸಾಕ್ಷಾತ್ ಮನ್ಮಥ ಮನ್ಮಥಃ-" ಎಂಬಂತೆ, ಪರಮ ಸುಂದರ ವಿಗ್ರಹನು ಸಕಲರಿಗೂ ಅಚ್ಚು ಮೆಚ್ಚಿನ ವಸ್ತು, **ಗೋಪಿ ಬಚ್ಚಿಟ್ಟ** = ನಂದ ಗೋಕುಲದಲ್ಲಿ ಶ್ರೀ ಕೃಷ್ಣನು ಪ್ರದರ್ಶಿಸಿದ ಬಾಲಲೀಲೆ ಅಪರಿಮಿತ ಮತ್ತು ಪರಮಾದ್ಭುತ ಗೋಪೀ ದೇವಿಯು ಭಾಂಡದಲ್ಲಿ ಮುಚ್ಚಿಟ್ಟಿದ್ದ ಪಾಲು-ಮೊಸರು-ಬೆಣ್ಣೆಗಳನ್ನು ಕದ್ದು ಮೆದ್ದ ನವನೀತ ಚೋರ ನಿವ ! ಸಕಲ ಜಗತ್ತೂ ಅವನದೇ ಅವನ ವಸ್ತು ಅವನು ಪಡೆದು. ಸರ್ವಸಾರಭೋಕ್ತನಾದ ಸ್ವರಮಣನು ನಿತ್ಯ ತೃಪ್ತನು. ಆ ಪರಾರ್ಥಾಂತರ್ಗತ ಸ್ವರಸರೂಪಗಳಲ್ಲಿ ಸ್ವಕ್ರೀಡೆಯಾಡಿದ ಸ್ವರಮಣನು, **ಮುಟ್ಟಿ ಶಕಟನ** = ಕಂಸಾಸುರನಿಂದ ಪ್ರೇಷಿತನಾಗಿ ಬಂಡಿಯ ರೂಪದಲ್ಲಿ ಬಂದಿದ್ದ ಶಕಟಾಸುರನೆಂಬ ದುರುಳ ದೈತ್ಯನನ್ನು ತನ್ನ ಪುಟ್ಟ ಕಾಲುಗಳಿಂದ ಒದ್ದು, ಜೂರ್ಣೀಕೃತವನ್ನಾಗಿ ಮಾಡಿದ ಅವನ ಅದ್ಭುತ ಬಾಲಲೀಲೆ !, **ಕಾಡು ಕಚ್ಚಿ ನುಂಗಿ** = **ಸುತ್ತಲೂ ಆವರಿಸಿಕೊಂಡು** ಹಬ್ಬುತ್ತಿದ್ದ ಕಾಳ್ಗಿಚ್ಚನ್ನು **ಲೀಲಾ ಜಾಲವಾಗಿ ಪಾನ** ಮಾಡಿದ ಯಜ್ಞ ಪುರುಷನಾದ ಜಗದ್ಭುಕ್ !

**ಜನಾರ್ಧನ-**

1) ಹುಟ್ಟದಿರುವವನು ಮತ್ತು ತನ್ನ ಭಕ್ತರ ಸಂಸಾರ ಬಂಧನವನ್ನು ನಾಶಪಡಿಸುವವನು (ನ ಜಾಯತೇ ಅರ್ದಯತೆ ಚ ಸಂಸಾರಮಿತಿ-ಜನಾರ್ದನಃ).

2) ದುಷ್ಟರನ್ನು (ಜನ) ದಂಡಿಸುವವನು (ಅರ್ದತಿ). (ಜನಾನ್ ದುರ್ಜನಾನ್ ಅರ್ದಯತೆ ಹಿನಸ್ತೀತಿ-ಜನಾರ್ದನಃ "ಅರ್ದ-ಹಿಂಸಾಯಾಮ್").

3) ತತ್ತ್ವಕ್ಕೆ ಮುಖ್ಯಾಭಿಮಾನಿ.

4) ಅವಾಂತರಾಭಿಮಾನಿಯು-

5) ರಮಾ ನಾಮ ಸಾಂಕೇತ-

6) ಆಯುಧ ಧಾರಣ ಕ್ರಮ-ಚಕ್ರ-ಶಂಖ-ಗದಾ-ಪದ್ಮ.

**ಎನ್ನ ಮನದ ಕರ್ಮವ ತೊಲಗಿಸೋ** = ಜನಾರ್ದನ ರೂಪವು-ಸಕಲ ದುಷ್ಟ ಜನರ ನಾಶಕ್ಕೆ ಕಾರಣ ರೂಪವು. ಮನಸ್ಸಿನ ಕಶ್ಮಲಗಳು ದೈತ್ಯರಿಂದ ಪ್ರೇರಿತವಾಗುವುವು. ಮನೋ ಮೈಲಿಗೆಯನ್ನು ಜನಾರ್ದನ ಭಗವದ್ರೂಪದ ಚಿಂತನೆಯನ್ನು ಪರಿಹರಿಸುವುದು. ದುಷ್ಟ ಮನಸ್ಸಿನಿಂದ ದುರ್ವ್ಯಾಪಾರಗಳ ಅಭಿವ್ಯಕ್ತಿ, **ಮುನಿಗಳೆಲ್ಲರು** = ಸಕಲ ಜ್ಞಾನಿಗಳೂ ಏಕ ಪ್ರಕಾರವಾಗಿ ಈ ಸಾಧನ ಶರೀರವೆಂಬ ದೇಹವು ನಿನಗೆ ಸೇರಿದ್ದು — (ತನು ನಿನ್ನದೂ—ಜೀವನ ನಿನ್ನದೂ-ಎಂಬ ಶ್ರೀ ಕನಕದಾಸರ ವಚನದಂತೆ) ಎಂದು ಹೇಳುವರು. ನಿನ್ನ ಕೃಪಾ ಬಲವಿಲ್ಲದೇ, ನನ್ನೀ ಸಾಧನ ಶರೀರ ಗತ ಇಂದ್ರಿಯ ವ್ಯಾಪಾರಗಳೊಂದೂ ಪ್ರವರ್ತಿತವಾಗಲಾರವು-ಎಂಬ ತಾತ್ಪರ್ಯ.

**ಉಪೇಂದ್ರ-**

1) ಇಂದ್ರದೇವರ ತಮ್ಮ (ಉಪ-ಅನುಜ). ಅದಿತಿ ಕಶ್ಯಪರಲ್ಲಿ ಅವತರಿಸಿದ **ಶ್ರೀ ವಾಮನ ರೂಪೀ ಶ್ರೀ ಹರಿಯು** ಪದವಿ ಭ್ರಷ್ಟನಾಗಿದ್ದ ಇಂದ್ರನ ಪದವಿಯನ್ನು ಆಳಿದ-"ಉಪೇಂದ್ರ"-ನಾಮಕ ಮಹಾಪ್ರಭು.

2) "ಉಪ"-ಶಬ್ದಕ್ಕೆ "ಉತ್ತಮ"-ಎಂಬ ಅರ್ಥವನ್ನು ಸಹ ಶ್ರೀ ಮಧ್ವಾಚಾರ್ಯರು ತಿಳಿಸಿರುತ್ತಾರೆ. ಇದರಿಂದ ಇಂದ್ರಾದಿ ಸಮಸ್ತ ದೇವತಾ ವರ್ಗಕ್ಕೂ ಅತ್ಯಂತ ಶ್ರೇಷ್ಠನಾದ, "ಸರ್ವೋತ್ತಮ"-ನೆಂದರ್ಥ. (ಉಪ-ಮೇಲಿನ ಇಂದ್ರ-ಸರ್ವ ಶ್ರೇಷ್ಠನು.

3) ಉತ್ಕೃಷ್ಟನಾಗಿರುವವನು. ತನ್ನ ಸ್ವರೂಪವನ್ನು ಪ್ರತ್ಯಕ್ಷವಾಗಿ ಕಾಣುತ್ತಿರುವವನು.

(ಉಪೇಂದ್ರೋ ವಾಮನಃ ಪ್ರಾಂಶುರ ಮೋಘಃ ಶುಚಿರೂರ್ಜಿತಃ ।
ಅತೀಂದ್ರಃ ಸಂಗ್ರಹಃ ಸರ್ಗೋ ಧೃತಾತ್ಮಾ ನಿಯಮೋ ಯಮಃ)

4) ತತ್ತ್ವಕ್ಕೆ ಮಹಾಭಿಮಾನಿಯು.

5) ಅವಾಂತರಾಭಿಮಾನಿಯು-

6) ರಮಾನಾಮ ಸಾಂಕೇತ-

7) ಆಯುಧ ಧಾರಣ ಕ್ರಮಃ-ಗದಾ-ಚಕ್ರ-ಪದ್ಮ-ಶಂಖ.

**ರೂಪದಿ ಬಂದಿ** = ವಾಮನ ರೂಪದಿಂದ ಬಲಿ ಚಕ್ರವರ್ತಿಯ ಯಾಗ ಶಾಲೆಗೆ ತಪಸ್ವಿಯಾದ ವಟು ವೇಷದಿಂದ ಆಗಮಿಸಿದ ಪ್ರಸಂಗ, **ಅಪ್ರಮೇಯ** ಸಾಕಲ್ಯೇನ ಯಾರಿಂದಲೂ ಅರಿಯಲು ಸಾಧ್ಯವಿಲ್ಲದ ಮಹಿಮನು.

**ಕಾಳಿಂಗನ ಮಡುವ ಧುಮುಕಿದಿ** = ಕಾಳಿಂಗ ಸರ್ಪವು ವಾಸಿಸುತ್ತಿದ್ದ ಯಮುನಾ ನದಿಯ ಆಳವಾದ ಮಡುವಿಗೆ ಶ್ರೀ ಕೃಷ್ಣನು ಧುಮುಕಿದನು. ಕಾಳಿಂಗನಿಗೆ-**ಕಾಲಿಯನೆಂದೂ** ಹೆಸರು. ಕದ್ರೂ-ಕಶ್ಯಪನ ಮಗನು. ರಮಣಕ ದ್ವೀಪದಲ್ಲಿ ವಾಸಿಸುತ್ತಿದ್ದನು. ಗರುಡನಿಗೆ ಆಹಾರವಾಗಿ ಒಪ್ಪದಿರಲು, ಗರುಡನಿಗೂ ಕಾಲಿಯನಿಗೂ ವೈರ ಹಬ್ಬಿತು. ಗರುಡನು ಕಾಲಿಯನನ್ನು ಅಟ್ಟಿಸಿಕೊಂಡು ಹೋದನು.

ಆಗ ಕಾಲಿಯನು ಕಾಳಿಂದಿಯ ಮಡುವನ್ನು ಹೊಕ್ಕನು. ಸೌಭರಿ ಮುನಿಯ ಶಾಪದಿಂದ ಗರುಡನು ಆ ಮಡುವನ್ನು ಸಮೀಪಿಸಲಿಲ್ಲ. ಕಾಲಿಯನ ಮಹಾ ವಿಷ ಜ್ವಾಲೆಯಿಂದ ಆ ಮಡುವಿನ ನೀರೆಲ್ಲವೂ ವಿಷಮಯವಾಗಿದ್ದು. ಆ ನೀರನ್ನು ಕುಡಿದ ದನಕರುಗಳು ಸಾಯತೊಡಗಿರುವು. ಆಗ ಶ್ರೀ ಕೃಷ್ಣನು ಕಾಳಿಂದಿಯ ಮಡುವಿಗೆ ದುಮುಕಿ, ನಾಗನ ಹೆಡೆಯನ್ನು ರಭಸದಿಂದ ತುಳಿಯುತ್ತಾ, ಅದರ ಬಾಲವನ್ನು ಹಿಡಿದುಕೊಂಡನು.

**ನಾಗ ಪತ್ನಿಯರು ಬೇಡೆ**= ಪ್ರಾಣ ಸಂಕಟದಿಂದ ಬಳಲುತ್ತಿದ್ದ ಕಾಲಿಯನನ್ನು ರಕ್ಷಿಸುವಂತೆ, ನಾಗ ಕನ್ಯೆಯರು ಶ್ರೀ ಕೃಷ್ಣನನ್ನು ಪತಿ ಭಿಕ್ಷೆಗಾಗಿ ಪ್ರಾರ್ಥಿಸಿದರು. ಶ್ರೀ ಕೃಷ್ಣನು ಅವರಿಗೆ ಅಭಯವನ್ನಿತ್ತು, ಕಾಲಿಯನನ್ನು ಮಡುವನ್ನು ಬಿಟ್ಟು ಹೋಗುವಂತೆ ಆಜ್ಞಾಪಿಸಿದನು. ಸರ್ಪದ ಹೆಡೆಯ ಮೇಲೆ, ಶ್ರೀ ಕೃಷ್ಣನ ವಜ್ರಾಂಕುಶ ಧ್ವಜ ಚಿನ್ಹಿತವಾದ ಗುರುತನ್ನು ನೋಡಿ, ಗರುಡನಿಂದ ಕಾಲಿಯನಿಗೆ ಭಯವು ತಪ್ಪುವುದೆಂದು ತಿಳಿಸಿ, ಕಾಲಿಯನನ್ನು ಪಾತಾಳಕ್ಕೆ ಕಳುಹಿಸಿ, ಅನುಗ್ರಹಿಸಿದ ಕಥಾ ಪ್ರಸಂಗ ವಿಶೇಷ.

**ಹರೀ**–

1) ಸಜ್ಜನರ ಸಕಲ ಪಾಪಗಳನ್ನು ಪರಿಹರಿಸುವ ಭಗವದ್ರೂಪ.

2) ಸಕಲ ಜೀವರಾಶಿಗಳ ಮೂಲಭೂತ ಬಿಂಬರೂಪ.

3) ತತ್ತ್ವಕ್ಕೆ ಮುಖ್ಯಾಭಿಮಾನಿ.

4) ಅವಾಂತರಾಭಿಮಾನಿ ದೇವತಾ–

5) ಲಕ್ಷ್ಮೀನಾಮ.

6) ಆಯುಧ ಧಾರಣ ಕ್ರಮ–ಚಕ್ರ-ಪದ್ಮ-ಗದಾ-ಶಂಖ.

**ಪಾಪರಾಶಿ** = ಹರಿನಾಮ ಸ್ಮರಣೆಯಂತೆ ಸಜ್ಜನರು ಮಾಡುವ ಸಕಲ ಪಾಪ ಸಮೂಹಗಳ ಪರಿಹಾರ. (ಹತ್ತಿಯ ರಾಶಿಯಲ್ಲಿ ಬೆಂಕಿಯ ಕಿಡಿ ಹೊಕ್ಕಂತೆ), **ಎನ್ನ ಮನದ ಸಂತಾಪ** = ನನ್ನ ಮನಸ್ಸನ್ನು ಕ್ಲೇಶ ಪಡಿಸುತ್ತಿರುವ, ಆಧಿಭೂತ–ಆದಿದೈವ ಮತ್ತು ಆಧ್ಯಾತ್ಮಿಕ ಎಂಬ **ತಾಪತ್ರಯ**ಗಳ ಪರಿಹಾರ–ಶ್ರೀ ಹರಿನಾಮ ಸ್ಮರಣೆಯಿಂದ, **ಸರ್ವರೊಳಗೆ ವಿಶ್ವರೂಪ** =ಸೃಷ್ಟರಾದ ಸರ್ವ ಜೀವರ ವಿಶ್ವ ರೂಪಿಯಾದ ಭಗವದ್ರೂಪವು– "ಶ್ರೀ ಹರಿ",

**ಕೃಷ್ಣ**-

1) ನೀಲಮೇಘ ಶ್ಯಾಮ ವರ್ಣ ರಂಜಿತ ರೂಪ.

2) ಪೂರ್ಣ ಸುಖ ಉಳ್ಳವನು (ಪೂರ್ಣಾನಂದಮಯ) (ಕೃಷಿಃ ಭೂಃ ಸುಖಂ ಯಸ್ಯ ಸಃ-ಕೃಷ್ಣಃ).

3) ಕೃಷ್ಣ-ಎಂಬ ನಾಮದಲ್ಲಿ. ಕೃಷ್ಣ–ಎಂದರೆ ಭೂ-ಪೂರ್ಣ ನೆಂದರ್ಥ. "ಣ"-ಕಾರವು ಸುಖವಾಚಕ. ಪೂರ್ಣ ಸುಖಾತ್ಮನಾಗಿರುವುದರಿಂದಲೇ ಶ್ರೀ ವಿಷ್ಣುವಿಗೆ-"ಕೃಷ್ಣ"ನೆಂತ ನಾಮವಿರುವುದೆಂದು ಸಂಜಯನು ಧೃತರಾಷ್ಟ್ರನಿಗೆ ತಿಳಿಸಿದನು (ಕೃಷಿ ರ್ಭೂವಾಚಕಃ ಶಬ್ದಃ ಣಶ್ಚ ನಿರ್ವೃತಿ ವಾಚಕಃ ವಿಷ್ಣುಸ್ತದ್ಭಾವಯೋಗಾಚ್ಚ ಕೃಷ್ಣೋಭವತ್ **ಶಾಶ್ವತಃ**॥- **ಮಹಾ** ಭಾರತ. ಉದ್ಯೋಗಪರ್ವ. 70-5).

4) ಮುಕ್ತರಿಗೆ ಪೂರ್ಣ ಸುಖದಾಯಕನು.

(ಕೃಷಿಃ ಭೂಃ ಪೂರ್ಣಃ ಣಃ ಸುಖಂ ಮುಕ್ತಾತ್ಮನಾಂ ಯಸ್ಮಾತ್‌ಸಃ-ಕೃಷ್ಣಃ).

5) ಪೃಥಿವೀ ತತ್ತ್ವಕ್ಕೆ (ಕೊನೆಯ ತತ್ತ್ವ-24ನೆಯದು) ಮುಖ್ಯಾಭಿಮಾನಿ.

6) ಶನೈಶ್ಚರ ಮತ್ತು ಭೂದೇವಿ-ಅವಾಂತರಾಭಿಮಾನಿಗಳು.

7) ಶ್ರೀ ಲಕ್ಷ್ಮೀ ನಾಮ.

8) ಆಯುಧ ಧಾರಣ ಕ್ರಮ-ಗದಾ-ಪದ್ಮ-ಚಕ್ರ-ಶಂಖ.

ಸೊಲ್ಲ = ಮಾತನ್ನು. **ನಷ್ಟವಾಯಿತು** = ಕೃಷ್ಣ-ನಾಮೋಚ್ಚಾರಣೆಯಿಂದ ಸಜ್ಜನರಿಗೆ ಸಕಲ ದುರಿತ ಹಾಗೂ ಪಾಪ **ರಾಶಿಗಳ ಪರಿಹಾರ.** ದುರಿತ ಮತ್ತು ಪಾಪಗಳಿಗೆ ಪ್ರೇರಕರಾದ ತಮೋಯೋಗ್ಯ ದೈತ್ಯರನ್ನು ಅಂಧಮನಸ್ಸಿಗೆ ಕಳುಹಿಸುವ ಭಗವದ್ರೂಪವು. "ಶ್ರೀ ಕೃಷ್ಣ ರೂಪವು", **ಮುಟ್ಟಿ ಭಜಿಸಿರೋ** = ಅತ್ಯಂತ ಶ್ರದ್ಧಾ ಭಕ್ತಿಗಳಿಂದ ಈ ಚತುರ್ವಿಂಶತಿ ನಾಮಗಳನ್ನು ಭಕ್ತಿಯಿಂದ ಉಚ್ಚರಿಸುತ್ತಾ, ಭಗವದುಪಾಸನೆಯನ್ನು ಮಾಡಬೇಕೆಂದು ದಾಸಶ್ರೇಷ್ಠ ಶ್ರೀ ಪುರಂದರರ ವಚನ, **ಮತ್ತೆ ಬೇರಿಲ್ಲ** = ಸರ್ವೋತ್ತಮನಾದ ಶ್ರೀ ಹರಿಯನ್ನು ಬಿಟ್ಟರೆ, ಕಾಯುವ ದೇವತೆಗಳು ಬೇರ್ಯಾರೂ ಇಲ್ಲವೆಂದು ತಾತ್ಪರ್ಯ.

❋

೫೪

## ಕೇಶವನಾಮ

(ಕನಕದಾಸರಿಂದ ವಿರಚಿತ)

ರಾಗ– ತಾಳ

ಈಶ ನಿನ್ನ ಚರಣ ಭಜನೆ- ಆಸೆಯಿಂದ ಮಾಡುವೆನು
ದೋಷ ರಾಶಿ ನಾಶ ಮಾಡು ಶ್ರೀಶ-ಕೇಶವ ॥ ॥ಪ॥

ಶರಣು ಹೊಕ್ಕೆನಯ್ಯ-ಎನ್ನ ಮರಣ ಸಮಯದಲ್ಲಿ ನಿನ್ನ
ಸ್ಮರಣೆ ಕರುಣಿಸಯ್ಯ-ನಾರಾಯಣ || ||೧||

ಶೋಧಿಸೆನ್ನ ಭವದ ಕಲುಷ-ಭೋದಿಸಯ್ಯ ಜ್ಞಾನ ಎನಗೆ
ಬಾಧಿಸುವ ಯಮನ ಬಾಧೆ-ಬಿಡಿಸು ಮಾಧವಾ || ||೨||

ಹಿಂದನೇಕ ಯೋನಿಗಳಲಿ-ಬಂದು ಬಂದು ನೊಂದೆ ನಾನು
ಇಂದು ಭವದ ಬಂಧ-ಬಿಡಿಸು ತಂದೆ ಗೋವಿಂದಾ || ||೩||

ಭ್ರಷ್ಟನೆನಿಸಬೇಡ ಕೃಷ್ಣ-ಇಷ್ಟು ಮಾತ್ರ ಬೇಡಿಕೊಂಬೆ
ಶಿಷ್ಟರೊಡನೆ ಇಟ್ಟು-ಕಷ್ಟ ಬಿಡಿಸು ವಿಷ್ಣುವೇ || ||೪||

ಮೊದಲು ನಿನ್ನ ಪಾದ ಪೂಜೆ-ಮುದದಿ ಮಾಡುವೆನಯ್ಯ ನಾನು
ಹೃದಯದೊಳಗೆ ಹುದುಗಿಸಯ್ಯ ಮಧುಸೂದನಾ || ||೫||

ಕವಿದುಕೊಂಡು ಇರುವ ಪಾಪ-ಸವೆದು ಹೋಗುವಂತೆ ಮಾಡಿ
ಜವನ ಬಾಧೆಯನ್ನು ಬಿಡಿಸು-ತಂದೆ ತ್ರಿವಿಕ್ರಮಾ || ||೬||

ಕಾಮಜನಕ ನಿನ್ನ ನಾಮ-ಪ್ರೇಮದಿಂದ ಪಾಡುವಂಥ
ನೇಮವೆನಗೆ ಪಾಲಿಸಯ್ಯ-ಸ್ವಾಮಿ ವಾಮನ || ||೭||

ಮದನಸಯ್ಯ ನಿನ್ನ ಮಹಿಮೆ-ವದನದಲ್ಲಿ ಇರುವಂತೆ
ಹೃದಯದಲ್ಲಿ ಸದನ ಮಾಡು-ಮುದದಿ ಶ್ರೀಧರಾ || ||೮||

ಹುಸಿಯನಾಡಿ ಹೊಟ್ಟೆ ಹೊರೆವ-ವಿಷಯದಲ್ಲಿ ರಸಿಕನೆಂದು
ಹುಸಿಗೆ ನೀ ಹಾಕದಿರು-ಹೃಷೀಕೇಶನೆ || ||೯||

ಅಬ್ಧಿಯೊಳಗೆ ಬಿದ್ದು ನಾನು-ಒದ್ದುಕೊಂಬೆನಯ್ಯ ಭವದಿ
ಗೆದ್ದು ಪೋಪ ಬುದ್ಧಿ ತೋರು-**ಪದ್ಮನಾಭನೇ** || ||೧೦||

ಕಾಮಕ್ರೋಧ ಬಿಡಿಸಿ-ನಿನ್ನ ನಾಮ ಜಿಹ್ವೆಯೊಳಗೆ ನುಡಿಸು
ಶ್ರೀ ಮಹಾನುಭಾವನಾದ-**ದಾಮೋದರಾ** || ||೧೧||

ಪಂಕಜಾಕ್ಷ ನೀನು ಎನ್ನ-ಮಂಕು ಬುದ್ಧಿ ಬಿಡಿಸಿ ನಿನ್ನ
ಕಿಂಕರನ್ನ ಮಾಡಿಕೊಳ್ಳೋ-**ಸಂಕರುಷಣ** || ||೧೨||

ಏಸುಜನ್ಮ ಬಂದರೇನು-ದಾಸನಾಗಲಿಲ್ಲ ನಾನು
ಘಾಸಿ ಮಾಡದಿರು ಇನ್ನು-**ವಾಸುದೇವನೇ** || ||೧೩||

ಬುದ್ಧಿ ಶೂನ್ಯನಾಗಿ ನಾನು-ಕದ್ದ ಕಳ್ಳನಾದೆ ಎನ್ನ
ತಿದ್ದಿ ಹೃದಯ ಶುದ್ಧಮಾಡು-**ಪ್ರದ್ಯುಮ್ನನೇ** || ||೧೪||

ಜನನಿ ಜನಕ ನೀನೆ ಎಂದು-ಎನುವೆನಯ್ಯ ದೀನ ಬಂಧು
ಎನಗೆ ಮುಕ್ತಿ ಪಾಲಿಸಿಂದು-**ಅನಿರುದ್ಧನೇ** || ||೧೫||

ಹರುಷದಿಂದ ನಿನ್ನ ನಾಮ-ಸ್ಮರಿಸುವಂತೆ ಮಾಡು ಪ್ರೇಮ
ಇರಿಸು ನಿನ್ನ ಚರಣದಲ್ಲಿ-**ಪುರುಷೋತ್ತಮಾ** || ||೧೬||

ಸಾಧು ಸಂಗ ಕೊಟ್ಟು ನಿನ್ನ-ಪಾದ ಭಜಕನೆನಿಸು ಎನ್ನ
ಭೇದಮಾಡಿ ನೋಡದಿರು-**ಅಧೋಕ್ಷಜಾ** || ||೧೭||

ಚಾರುಚರಣ ತೋರಿ ಎನಗೆ-ಪಾರುಗಾಣಿಸಯ್ಯ ಕೊನೆಗೆ
ಭಾರ ಹಾಕಿರುವೆ ನಿನಗೇ-**ನಾರಸಿಂಹನೇ** || ||೧೮||

ಸಂಚಿತಾರ್ಥ ಪಾಪಗಳು-ಕಿಂಚಿತಾ ದರಿರದಂತೆ
ಮುಂಚಿತಾಗಿ ಕಳೆಯಬೇಕು-ಸ್ವಾಮಿ ಅಚ್ಯುತ || ||೧೯||

ಜ್ಞಾನಭಕ್ತಿ ಕೊಟ್ಟು ನಿನ್ನ-ಧ್ಯಾನದಲ್ಲಿಟ್ಟು ಎನ್ನ
ಹೀನ ಬುದ್ಧಿ ಬಿಡಿಸೋ ಮುನ್ನ-ಜನಾರ್ದನಾ || ||೨೦||

ಜಪತಪಾನುಷ್ಠಾನ ನೀನು-ಒಪ್ಪುವಂತೆ ಮಾಡಲಿಲ್ಲ
ತಪ್ಪುಕೋಟಿ ಕ್ಷಮಿಸಬೇಕು-ಉಪೇಂದ್ರನೇ || ||೨೧||

ಮೊರೆಯ ಇಡುವೆನಯ್ಯ ನಿನಗೆ-ಸೆರೆಯ ಬಿಡಿಸು ಭವದ ಎನಗೆ
ಇರಿಸು ಭಕ್ತರೊಳು ಪರಮ-ಪುರುಷ-ಶ್ರೀಹರೇ || ||೨೨||

ಪುಟ್ಟಿಸಲೇ ಬೇಡವಿನ್ನು-ಪುಟ್ಟಿಸಿದಕೆ ಪಾಲಿಸಿನ್ನು
ಇಷ್ಟು ಮಾತ್ರ ಬೇಡಿಕೊಂಬೆ-ಶ್ರೀ ಕೃಷ್ಣನೇ || ||೨೩||

ಸತ್ಯವಾದ ನಾಮಗಳನು-ನಿತ್ಯದಲಿ ಪಠಿಸುವವನ
ಅರ್ಥಿಯಿಂ ಸಲಹುವನು-ಕರ್ತೃ ಕೇಶವಾ || ||೨೪||

ಮರೆತು ಬಿಡದೆ ಹರಿಯನಾಮ-ಬರೆದು ಓದಿ ಕೇಳಿದವರಿಗೆ
ಕರೆದುಕೊಡುವ ಮುಕ್ತಿ-ಬಡದಾದಿ ಕೇಶವ || ||೨೫||



### ಶ್ರೀ ಕನಕದಾಸರ ಸಂಕ್ಷಿಪ್ತ ಜೀವನ ಚರಿತ್ರೆ :-

ಶ್ರೀ ಕನಕದಾಸರ ಜೀವಿತ ಕಾಲ-ಕ್ರಿ. ಶ. 1509-1606. ಧಾರವಾಡ ಜಿಲ್ಲೆಯ ಬಂಕಾಪುರ ತಾಲ್ಲೂಕಿನ ಬಾಡ-ಎಂಬ ಗ್ರಾಮವು ದಾಸರ

ಜನ್ಮಸ್ಥಳ. ಇವರ ತಂದೆಯ ಹೆಸರು-ಬೀರಪ್ಪನೆಂದು ಹಾಲುಮತಸ್ಥರ (ಕುರುಬರ) ಮನೆತನಕ್ಕೆ ಸೇರಿದವನು.

ಶ್ರೀನಿವಾಸನ ದಯದಿಂದ ಜನಿಸಿದ ಶಿಶುವಿಗೆ ತಿಮ್ಮಪ್ಪನೆಂದು ನಾಮಕರಣ ಮಾಡಿದನು ಶಿಶುವಿನ ಪುಣ್ಯದೆಶೆಯಿಂದ ಬೀರಪ್ಪನು ಶ್ರೀಮಂತನಾದನು. ತಿಮ್ಮಪ್ಪನು ೧೦ ವರ್ಷದವನಾಗಿದ್ದಾಗ, ಬೀರಪ್ಪನು ಧಣಾಯಕನಾದನು. ಆಗಿನ ಸರ್ಕಾರದ ಗುತ್ತಿಗೆದಾರನಾಗಿದ್ದನು.

ವಿಜಯನಗರದ ಸಾಮ್ರಾಜ್ಯದ ಮಾಂಡಲೀಕ ರಾಜನಂತೆ ಕಾಲಕಾಲಕ್ಕೆ ರಾಜ್ಯ ಕಂದಾಯವನ್ನು ವಸೂಲು ಮಾಡಿ, ಸರ್ಕಾರಕ್ಕೆ ಒಪ್ಪಿಸುವ ಅಧಿಕಾರಿಯಾಗಿದ್ದನು. ಯುದ್ಧ ಪ್ರಸಂಗಗಳಲ್ಲಿಯೂ ಸಹ, ಇವರ ಮಾಂಡಲೀಕರಂತೆ ಸಾಮ್ರಾಜ್ಯಕ್ಕೆ ಸಹಾಯಕನಾಗಿದ್ದನು.

ಆ ಪರಿಸರದಲ್ಲಿ ಶೈವ ಮತದ ಪ್ರಾಬಲ್ಯವು ಹಬ್ಬಿ ಹರಡಿತ್ತು. ಆ ಕಾರಣದಿಂದ, ಕುರುಬ ಜಾತಿಯವರೆಲ್ಲ ವೀರಶೈವ ಮತಾವಲಂಬಿಗಳಾಗಿದ್ದರು. ಕುರುಬರು ತಮ್ಮ ಕುಲದೈವವನ್ನು ಬೀರೇ ದೇವರೆಂದು ಕರೆಯುತ್ತಿದ್ದರು. ಆದರೆ ಬಹು ಸಂಖ್ಯಾಕ ಕುರುಬರು ಶ್ರೀ ತಿರುಪತಿ ವೆಂಕಟೇಶನ ಮಹಾ ಭಕ್ತರೂ ಆಗಿದ್ದರು. ಈ ಸಂಸ್ಕಾರವು ಬೀರಪ್ಪನಲ್ಲಿತ್ತು.

ಈ ಕಾರಣದಿಂದ ಬೀರಪ್ಪನು ಶ್ರೀ ವೈಷ್ಣವ ತ್ರಿಪುಂಡ್ರ ಧಾರಕರಾದ ಬ್ರಾಹ್ಮಣರ ಶಿಷ್ಯನಾಗಿ, ಅವರಿಂದ ದೀಕ್ಷೆ ಪಡೆದಿದ್ದನು. ಮಹಾ ತೇಜಸ್ವಿಯಾಗಿ ಬೆಳೆಸುತ್ತಿದ್ದ ತನ್ನ ಮಗನನ್ನು ಕನಕನೆಂದು ಕರೆಯುತ್ತಿದ್ದನು. ಕನಕನ ತಾಯಿಯ ಹೆಸರು-ಬಚ್ಚಮ್ಮ. ಬಚ್ಚಮ್ಮನು ಕನಕನನ್ನು ತಿರುಮಲ-ತಿಮ್ಮನೆಂದು ಕರೆಯುತ್ತಿದ್ದಳು. ತಿಮ್ಮಪ್ಪನು ಬಾಲ್ಯದಿಂದಲೂ ಪುಷ್ಟನಾಗಿದ್ದು, ಜಟ್ಟಿಯಂತಹ ಶರೀರ ಧಾರ್ಢ್ಯವನ್ನು ಪಡೆದಿದ್ದನು. ತಂದೆಯ ತರುವಾಯ ಕನಕನೇ ಮಾಂಡಲೀಕನಾಗಿ ಧಣಾಯಕನಾದನು.

ಒಮ್ಮೆ ಶ್ರೀ ಹರಿಯು ಕನಕನ ಸ್ವಪ್ನದಲ್ಲಿ ಕಾಣಿಸಿಕೊಂಡು-"ಎಲೋ ಕನಕೇ ನೀನು ನನ್ನ ದಾಸನಾಗು".- ಎಂದು ವಿಧಿಸಿದನು. ಆದರೆ ಕನಕನು ತನ್ನ ಪದವಿ, ಅಧಿಕಾರ, ಲೌಕೀಕ ದರ್ಪಗಳಿಂದ ಶ್ರೀ ಹರಿಯ ವಚನ ಗಳನ್ನು ಗಮನಿಸಲಿಲ್ಲ. ಕೆಲವು ದಿನಗಳ ನಂತರ, ಶ್ರೀ ಕೇಶವನೇ ಕಾಣಿಸಿ ಕೊಂಡು, ಕನಕನನ್ನು ಎಚ್ಚರಿಸಿದನು.

ಕೆಲವು ದಿನಗಳ ನಂತರ, ಕನಕಪ್ಪನಿಗೆ ಯುದ್ಧ ಪ್ರಸಂಗ ಒದಗಿತು. ರಣರಂಗದಲ್ಲಿ ಗಾಯಗೊಂಡು, ನಿಶ್ಚೇಷ್ಟನಾಗಿ ಬಿದ್ದಿದ್ದಾಗ, ಶ್ರೀ ಹರಿ ಕೇಶವನು ಪ್ರತ್ಯಕ್ಷನಾಗಿ,-"ಕನಕ ಈಗಲಾದರೂ ನನ್ನ ದಾಸನಾಗು. ನಿನ್ನ ವಿಪತ್ತು ಪರಿಹಾರವಾಗುವುದು." ಎಂದನು ಕನಕನ ಬಿಂಕ-ದರ್ಪವೆಲ್ಲವೂ ಅಡಗಿಹೋಗಿತ್ತು.

ಮಹಾ ಪ್ರಭುವಿನ ಚರಣಾರವಿಂದಗಳಿಗೆ ಎರಗಿದನು ನವ ಚೈತ್ಯನ್ಯ ದೇಹಾದ್ಯಂತ ಹರಿಯಿತು. ಅಂದಿನಿಂದ ಸಕಲ ಲೌಕೀಕ ಭೋಗ ಭಾಗ್ಯ ಗಳನ್ನು ತ್ಯಜಿಸಿ, ವೈರಾಗ್ಯದಿಂದ ಹರಿಭಕ್ತನಾದನು ಕನಕ ! ಅವನ ಬಾಳಿ ನಲ್ಲಿ ಅದೆಂತಹ ತಿರುವು ! "ಕಿಂ ಅಲಭ್ಯಂ ಭಗವತೇ ಶ್ರೀನಿಕೇತನೇ"-ಎಂಬ ವಚನ ಸತ್ಯವಾಯಿತು ಕನಕನ ಸತ್ಸಾಧನಾ ಪಥದಲ್ಲಿ ಕಾಲಿಗೆ ಗೆಜ್ಜೆ ಕಟ್ಟಿ, ಏಕತಾರಾ ತಂಬೂರಿಯನ್ನು ಧರಿಸಿ, ಹೆಗಲಿನಮೇಲೆ ಕಂಬಳಿಯನ್ನು ಹೊದ್ದು, ಹೆಗಲಿಗೆ ಜೋಳಿಗಿ ಹಾಕಿ, ಹರಿನಾಮ ಸಂಕೀರ್ತನೆಗೈಯುತ್ತಾ ಶ್ರೇಷ್ಠ ಹರಿದಾಸನೆಂದೆನಿಸಿದನು.

ಕರ್ಣಾಟಕದ ರಮಾರಮಣನಾಗಿದ್ದ ಕೃಷ್ಣ ದೇವರಾಯನ ರಾಜಗುರು ಗಳೂ, ಹಿತೈಷಿಗಳೂ ಆಗಿದ್ದ ಶ್ರೀ ವ್ಯಾಸರಾಜ ಗುರುಸಾರ್ವಭೌಮರಿಂದ ದಾಸದೀಕ್ಷಾ ಪನ್ನನಾಗಿ, ತನ್ನ ಕುಲದೈವನಾದ-"ಆದಿಕೇಶವ"ನ ಅಂಕಿತ ನಾಮದಲ್ಲಿ ಸಹಸ್ರಾರು ಕೀರ್ತನೆಗಳನ್ನು ರಚಿಸಿ, ಸಾರಸ್ವತ ಲೋಕಕ್ಕೆ ದಿವ್ಯ ಕೊಡುಗೆ ನೀಡಿದ ಖ್ಯಾತಿತಂದ ಕನಕ ದಾಸರಿವರು.

ಗುರುಗಳ ಆದೇಶದಂತೆ ಹಳ್ಳಿ ಹಳ್ಳಿಗೆ ತೆರಳಿ, ಅಲ್ಲಿ ಗ್ರಾಮನಿವಾಸಿಗಳ ಮೂಢ ನಂಬಿಕೆಗಳನ್ನು ಪರಿಹರಿಸಿ, ಅವರ ಅಂತರಂಗದಲ್ಲಿ ವಿಷ್ಣುಭಕ್ತಿ ಬೀಜವನ್ನು ನಾಟಿ, ಜನತೆಯನ್ನು ವ್ಯಾಪಕವಾಗಿ ಉದ್ಧರಿಸಿದ ಮಹಾಕೀರ್ತಿ ಕನಕದಾಸರಿಗೆ ಸಲ್ಲುವುದು.

"ಕನಕನ ಕೆಣಕಬೇಡ, ಕೆಣಕಿ ತಿಣಕೆ ಕೆಡಬೇಡ"–ಎಂಬ ನಾಣ್ಣುಡಿ ಉಂಟು. ಅವರ **ಮುಂಡಿಗೆಗಳು** ಲೋಕಪ್ರಸಿದ್ಧ ಅನೇಕ ತತ್ವಾರ್ಥ ಪ್ರಮೇಯಗಳಿಂದ ಕೂಡಿದ ರಹಸ್ಯಾರ್ಥಗರ್ಭಿತವಾದ ಸಾಹಿತ್ಯ ಕೃತಿಗಳಿವು. ಸಹಸ್ರಾರು ದೇವರ ನಾಮಗಳಲ್ಲದೇ.

1) ಹರಿಭಕ್ತಸಾರ. 2) ಮೋಹನ ತರಂಗಿಣೀ. 3) ರಾಮಧಾನ್ಯ ಚರಿತೆ ಮತ್ತು 4) ನಳ ಚರಿತ್ರೆ–ಎಂಬ ಸಾಹಿತ್ಯ ಕೃತಿಗಳು ಶ್ರೇಷ್ಠ ಮಟ್ಟದವಾಗಿವೆ. ಕ್ರಿ. ಶ. 1606 ರಲ್ಲಿ ಆದಿ ಕೇಶವನ ಸನ್ನಿಧಿಯಲ್ಲಿಯೇ ಧ್ಯಾನ ತತ್ಪರರಾಗಿದ್ದು, ತಮ್ಮ ಪಾರ್ಥಿವ ಶರೀರವನ್ನು ತೊರೆದು, ಹರಿಪದ ಸೇರಿದ ಹರಿಕಾರರಿವರು.

**ಅರ್ಥವಿವರಣೆ :**

**ಈಶ** ಸಕಲ ಜಗನ್ನಿಯಾಮಕನಾದ **ಶ್ರೀ ಹರಿ,** ಚರಾಚರಾತ್ಮಕವಾದ ಸಮಗ್ರ ಜಗತ್ತು ಈಶಾಧೀನ, **ಕೇಶವ**–ಎಂಬ ಪದವೇ–ಕಂ-ಬ್ರಹ್ಮ, ಈಶ-ರುದ್ರ. ಇವರಿಗೆ ವ–ಶ್ರೇಷ್ಠ-ನಿಯಾಮಕನೆಂದರ್ಥ, **ಆಸೆಯಿಂದ ಮಾಡುವೇನು** = ಭಗವಂತನ ಧ್ಯಾನೋಪಾಸನಾದಿಗಳನ್ನು ಅತ್ಯಂತ ಶ್ರದ್ಧಾ ಭಕ್ತಿಗಳಿಂದ ಮಾಡಬೇಕು. ಆಸೆ-ಎಂದರೆ. ಭಕ್ತಿಭಾವವೆಂದರ್ಥ, **ದೋಷ ರಾಶಿ ನಾಶಮಾಡು** = ನನ್ನಲ್ಲಿರುವ ಪಾಪ ಸಮೂಹಗಳನ್ನು ನಿನ್ನ ಕೃಪಾ ಕಟಾಕ್ಷ ವೀಕ್ಷಣದಿಂದ ಪರಿಹರಿಸಿ ಪವಿತ್ರೀಗೊಳಿಸೆಂದು ಪ್ರಾರ್ಥಿಸುತ್ತಾರೆ, **ಶ್ರೀಶ** = ಶ್ರೀ ಲಕ್ಷ್ಮೀದೇವಿಗೆ ನಿಯಾಮಕನಾದ ಜಗತ್ಪ್ರಭು-ಲಕ್ಷ್ಮೀಪತಿ.

**ಶರಣು ಹೊಕ್ಕೆನಯ್ಯ** = ನನ್ನ ಸರ್ವಸ್ವವನ್ನೂ ನಿನಗೆ ಅರ್ಪಿಸಿದ್ದೇನೆ. ನೀನು ಶರಣಾಗತ ವತ್ಸಲನು, **ಮರಣ ಸಮಯದಲ್ಲಿ** = ನನ್ನ ಅಂತ್ಯ ಕಾಲದಲ್ಲಿ ನಿಮ್ಮ ನಾಮಸ್ಮರಣೆಯನ್ನು ಕರುಣಿಸು. (ಅಂತ್ಯಕಾಲೇ ವಿಶೇಷತಃ–**ದ್ವಾದಶಸ್ತೋತ್ರ-ಅಧ್ಯಾಯ-೧**).

**ಭವದ ಕಲುಷ** = ಸಂಸಾರಾವಸ್ಥೆಯಲ್ಲಿ ಬಂದೊದಗುವ ದೋಷ **ಪೂರಿತವಾದ** ಅನೇಕ ದುರಿತ **ರಾಶಿಗಳನ್ನು** ಪರಿಹರಿಸಿ. ನನ್ನನ್ನು ಶುದ್ಧನನ್ನಾಗಿಸು (**ಶೋಧಿಸು**), **ಜ್ಞಾನ ಎನಗೆ** = ನನಗೆ ಭಗವತ್ಸಂಬಂಧವಾದ ಸಮೀಚೀನ ಜ್ಞಾನವನ್ನು ಕರುಣಿಸು, **ಬಾಧಿಸುವ ಯಮನ ಬಾಧೆ** = ಯಮ **ಲೋಕದಲ್ಲಿ** ಅನುಭವಿಸುವ ನರಕಾದ್ಯನರ್ಥಗಳನ್ನು **ತಪ್ಪಿಸು**.

**ಹಿಂದೆ ಅನೇಕ ಯೋನಿಗಳಲಿ** ನಾನು ಹುಟ್ಟದ ಜನ್ಮಗಳಿಲ್ಲ. 84 ಲಕ್ಷ ಯೋನಿಗಳಲ್ಲಿ ಜನ್ಮ **ತಾಳಿ**, ಬಂದಿದ್ದೇನೆ, **ನೊಂದೆ ನಾನು** = ಪ್ರತಿ ಜನ್ಮದಲ್ಲಿಯೂ ಕರ್ಮ **ಸಂಬಂಧವಾದ** ನಾನಾ ಯಾತನೆಗಳಿಂದ ಬಳಲಿ ಬೆಂಡಾಗಿದ್ದೇನೆ, **ಇಂದು ಭವದ ಬಂಧ** = ಈ ಅಲಭ್ಯವಾದ **ಮಾನವ ಜನ್ಮ**ದಲ್ಲಿ ನನ್ನ **ಸಂಸಾರ** ಬಂಧನ **ರೂಪವಾದ** ಕರ್ಮ ಬಂಧನವನ್ನು ಬಿಡಿಸು.

**ತಂದೆ** ಹೇ ಜಗಜ್ಜನಕನಾದ (ಜಗಜ್ಜನ್ಮಾದಿ ಕರ್ತನಾದ) ಹೇ ಗೋವಿಂದನಾಮಕ ಶ್ರೀ ಹರಿಯೇ, **ಭ್ರಷ್ಠನೆನಿಸಬೇಡ** = ಮಾನವ ಜನ್ಮದಲ್ಲಿ ಹುಟ್ಟಿದ್ದಕ್ಕೆ ನನ್ನ **ಬಾಳನ್ನೇ** ಸಾರ್ಥಕಗೊಳಿಸು ಈ ಅತ್ಯಮೂಲ್ಯ ಜನ್ಮವನ್ನು **ವ್ಯರ್ಥವಾಗಿ** ಕಳೆಯುವಂತೆ ಮನಸ್ಸು ಕೊಡಬೇಡ, **ಶಿಷ್ಟರೊಡನೆ** = ಜನ್ಮದ ಸಾಫಲ್ಯಕ್ಕೆ ಉತ್ತಮವಾದ ಸುಜ್ಞಾನಿಗಳ ಸಂಗ ಸುಖವನ್ನು ನೀಡು. ಇಷ್ಟನ್ನು ಮಾತ್ರ ನಿನ್ನಲ್ಲಿ ಪ್ರಾರ್ಥಿಸಿಕೊಳ್ಳುತ್ತಿದ್ದೇನೆ.

**ಪಾದಪೂಜೆ** = ಸಕಲಾಭೀಷ್ಟ ಪ್ರದವಾದ ನಿನ್ನ ಚರಣಾರವಿಂದಗಳ ಸೇವೆಯನ್ನು **ನನಗೆ ಕರುಣಿಸು** (ಅಪಾರ ವಹೌಳಿ ಪರ್ಯಂತ ಸೇವಾ), **ಮುದದಿ** = ಅತ್ಯಂತ ಹರ್ಷದಿಂದ, **ಹುದುಗಿಸಯ್ಯ** = ಎನ್ನ ಹೃತ್ಕಮಲ

ವೆಂಬ ಪೀಠದಲ್ಲಿ ಸನ್ನಿಹಿತನಾಗು ಶರೀರವೇ ದೇವ ಮಂದಿರವು ಹೃತ್ಪದ್ಮವೇ ಶ್ರೀಶನ ಗರ್ಭ ಗುಡಿ.

**ಕವಿದುಕೊಂಡು ಇರುವ** = ನನ್ನನ್ನು ಗಾಢವಾಗಿ ಮುಸುಕಿಕೊಂಡಿರುವ ಪಾಪ ರಾಶಿಯನ್ನು ಕ್ರಮವಾಗಿ, ಹಂತ ಹಂತಗಳಲ್ಲಿ ಪರಿಹರಿಸಿ, **ಜವನ ಬಾಧೆಯನ್ನು** = ಪಾಪ ಕರ್ಮಗಳ ಫಲರೂಪವಾದ ನರಕಾದ್ಯನರ್ಥಗಳನ್ನು ಬಿಡಿಸು.

**ಕಾಮ ಜನಕ** = ಮನ್ಮಥನ ತಂದೆಯಾದ ಶ್ರೀ ಹರಿ. ಮನ್ಮಥ ಮತ್ತು ಚಂದ್ರ–ಇವರಿಬ್ಬರೂ ವಿರಾಟ ಪುರುಷ ಶ್ರೀ ಪರಮಾತ್ಮನ ಮನಸ್ಸಿನಿಂದ ಸಂಜಾತರು, **ಪ್ರೇಮದಿಂದ ಪಾಡುವಂಥ** = ಸಕಲ ದುರಿತ ನಿವಾರಣಾ ರೂಪವಾದ ನಿನ್ನ ದಿವ್ಯ ಮಂಗಳ ನಾಮವನ್ನು ಅತ್ಯಂತ ಭಕ್ತಿ ಭಾವದಿಂದ ಹಾಡಿ ಹೊಗಳುವಂಥ, **ನೇಮವೆನಗೆ ಪಾಲಿಸಯ್ಯ** = ವಿಧಿ ಪೂರ್ವಕವಾದ ನಿಯಮವನ್ನು ನನಗೆ ಅನುಗ್ರಹಿಸು ಅವನ ಅನುಗ್ರಹ ವಿಲ್ಲದೇ, ಭಗವತ್ಪ್ರಸಾದವು ಅಲಭ್ಯ.

**ಮದನನಯ್ಯ** = ಮದನ-ಮನ್ಮಥ. ಅಂದರೆ ಮನ್ಮಥ ಪಿತನಾದ ಶ್ರೀ ಹರಿ, **ವದನದಲ್ಲಿ ಇರುವಂತೆ** = ಬಾಯಿಯಲ್ಲಿ ಸದಾ ನುಡಿಯುವಂತೆ, **ಹೃದಯದಲ್ಲಿ ಸದನ ಮಾಡು** = ಎನ್ನ ಹೃತ್ಕಮಲವೆಂಬ ಸಿಂಹಾಸನದಲ್ಲಿ ನೀನು ಸ್ಥಾಪಿತನಾಗು, **ಮುದದ** = ನೀನಾಗಿ ಎನಗೆ ಒಲಿದು ಲಕ್ಷ್ಮೀ ಸಮೇತನಾಗಿ ಆವಾಸಮಾಡು (ಶ್ರೀಧರ).

**ಹುಸಿಯನಾಡಿ** = ಸುಳ್ಳು ವಂಚನಾದಿಗಳಿಂದ ಹೊಟ್ಟೆ ಪಾಡಿಗಾಗಿ ಜೀವನ, **ವಿಷಯದಲ್ಲಿ ರಸಿಕನೆಂದು** = ವಿಷಯಾದಿ ಭೋಗಗಳಲ್ಲಿ ತಲ್ಲೀನ ಮನಸ್ಕನಾಗಿದ್ದೇನೆ, **ಹುಸಿಗೆ ನೀ ಹಾಕದಿರು** = ಹೀಗೆಂದು ನನ್ನನ್ನು ತಿರಸ್ಕರಿಸದೆ ವಿಷಯಾಪೇಕ್ಷೆಗಳಿಂದ ದೂರವಿರಿಸಿ ಎನ್ನನ್ನು ಸಂರಕ್ಷಿಸು, **ಹೃಷೀಕೇಶನೆ** = ಇಂದ್ರಿಯಗಳಿಗೆ ನಿಯಾಮಕನಾದ ಭಗವದ್ರೂಪ. ನನ್ನ ಇಂದ್ರಿಯಗಳು ಸದಾ ವಿಷಯಾಸಕ್ತವಾಗಿವೆ. ಹೇ ಹೃಷೀಕೇಶ ನಾಮಕನೇ,

ವಿಷಯಾಭಿಲಾಷೆಗಳನ್ನು ಬಿಡಿಸಿ, ನನ್ನ ಸಕಲೇಂದ್ರಿಯಗಳನ್ನೂ ನಿನ್ನತ್ತ ತಿರುಗಿಸು.

**ಅಬ್ಧಿಯೊಳಗೆ** = ಸಂಸಾರವೆಂಬ ಮಹಾ ದುಸ್ತರವಾದ ಸಾಗರದಲ್ಲಿ ನಾನು ಮುಳುಗಿದ್ದೇನೆ, **ಒದ್ದು ಕೊಂಡೆನಯ್ಯ** = ಸಂಸಾರದ ಕ್ಲೇಶಗಳಿಂದ ನೊಂದು, ಬಳಲಿ, ತೊಳಲಾಡುತ್ತಿದ್ದೇನೆ, **ಗೆದ್ದು ಪೋಪ** = ಈ ಭವ ಸಾಗರವನ್ನು ದಾಟಿ, ಉದ್ಧಾರವಾಗುವ ಸತ್ವದವನ್ನು ನೀನು ಎನಗೆ ತೋರು–ಹೇ ಪದ್ಮನಾಭ. ಪದ್ಮನಾಭರೂಪ ಜಗತ್ಕಾರಣ ರೂಪವು ಸಮುದ್ರಶಾಯೀ ಇದರಿಂದ ಸಮುದ್ರದ ಸಾದೃಶ್ಯ.

**ನಿನ್ನ ನಾಮ ಜಿಹ್ವೆಯೊಳಗೆ ನುಡಿಸು** = ಕಾಮ ಕ್ರೋಧಾದಿ ಅರಿಷಡ್ವರ್ಗಗಳಿಂದ ಗ್ರಸ್ತನಾಗಿದ್ದೇನೆ. ಇದರಿಂದ ನಿನ್ನ ನಾಮಸ್ಮರಣೆ ಎನಗೆ ಒದಗುತ್ತಿಲ್ಲ ಅಪರಿಮಿತ ಮಹಿಮಾಸಂಪನ್ನನಾದ ನಿನ್ನ ನಾಮಾವಳಿಗಳನ್ನು ಎನ್ನ ನಾಲಿಗೆಯಿಂದ ನುಡಿಸು.

**ಶ್ರೀ ಮಹಾನುಭಾವನಾದ** = ಅಪರಿಮಿತ ಮಹಿಮಾ ಸಂಪನ್ನನಾದ ದಾಮೋದರ ನಾಮಕ ಶ್ರೀ ಹರಿ ಯಶೋದಾದೇವಿಯು ಶ್ರೀ ಕೃಷ್ಣನನ್ನು ಒರಳಿಗೆ ಕಟ್ಟಿ ಹಾಕಿದ ಪ್ರಸಂಗದಲ್ಲಿ ತೋರಿಸಿದ ಅಘಟನಾಘಟನ ವ್ಯಾಪಾರ ವಿಶೇಷಗಳು.

**ಪಂಕಜಾಕ್ಷ** = ಕಮಲ ಪುಷ್ಪದ ದಳಗಳಂತೆ ವಿಸ್ತಾರವಾದ ನೇತ್ರಗಳುಳ್ಳವನು (ಪಂಕಜ-ಕೆಸರಿನಲ್ಲಿ ಹುಟ್ಟಿ ಅರಳುವ ಕಮಲಪುಷ್ಪ), **ಮಂಕು ಬುದ್ಧಿ ಬಿಡಿಸಿ** = ನನ್ನ ಮನಸ್ಸನ್ನು ಕವಿದುಕೊಂಡಿರುವ ಅಜ್ಞಾನವನ್ನು ಪರಿಹರಿಸಿ, **ಸಂಕರುಷಣ** = ಸಂಕರ್ಷಣರೂಪ ಶ್ರೀ ಭಗವಂತನ ಲಯಕಾರಕ ರೂಪ. ಅಜ್ಞಾನ ಪರಿಹಾರ, ತದ್ವಾರಾ, ಜ್ಞಾನಪ್ರಾಪ್ತಿಯನ್ನುಂಟು ಮಾಡುವ ರೂಪ. ಮನೋ ನಿಯಾಮಕರಾದ ಶ್ರೀ ಮಹರುದ್ರ ದೇವರ ಉಪಾಸನಾ ದೈವ-ಸಂಕರ್ಷಣ.

**ಘಾಸಿ ಮಾಡದಿರಿನ್ನು** = ನನ್ನ ಕರ್ಮಾನುಭವ ಮಾಡಲಿಕ್ಕಾಗಿ, ಅನೇಕ ಜನ್ಮಗಳಲ್ಲಿ ಜನಿಸಿ ಬಂದೆ. ಆದರೂ ನಿನ್ನ ದಾಸನಾಗಲಿಲ್ಲ. ಇನ್ನು ನೀನು ನನ್ನನ್ನು ಉದಾಸೀನ ಮಾಡಬೇಡ. ಸರ್ವತ್ರ ವ್ಯಾಪ್ತನಾದ, ಸರ್ವ ಭೂತ ಸಂಸ್ಥಿತನಾದ, **ದೇವಾಸುದೇವ** ನನ್ನನ್ನು ದಾಸನನ್ನಾಗಿ ಪರಿಗ್ರಹಿಸಿ, ಅನುಗ್ರಹಿಸು.

**ಬುದ್ಧಿ ಶೂನ್ಯನಾಗಿ** = ಅಜ್ಞಾನಾವೃತನಾಗಿ, **ಕದ್ದ ಕಳ್ಳನಾದೆ ನಾನು** = ಅಹಂ ಮಮಕಾರಗಳಿಂದ ಗ್ರಸ್ತನಾಗಿ, ನಿನ್ನ ಕರ್ತೃತ್ವವನ್ನು ಮರೆತು, ಭ್ರಷ್ಟನಾದೆ, **ತಿದ್ದಿ ಹೃದಯ** = ಎನ್ನ ಮನಸ್ಸಿನ ಅಂಕುಡೊಂಕುಗಳನ್ನು ತಿದ್ದಿ, ಮನಸ್ಸಿನ ಪರಿಷ್ಕಾರ ಕೊಟ್ಟು, ಪವಿತ್ರಾತ್ಮನನ್ನಾಗಿಸು ಎಲೈ ಅನಂತಕೋಟಿ ಸೂರ್ಯ ಪ್ರಕಾಶನಾದ-**ಪ್ರದ್ಯುಮ್ನನೇ.**

**ದೀನಬಂಧು** = ದೀನ ರೂಪರಾಗಿ ಶರಣಾಗತರಾಗಿ ಬಂದಿರುವವರ ಪಾಲಿಗೆ ನೀನು ಪರಮಾಪ್ತ ಬಂಧು. ಸೂಕ್ಷ್ಮ ಸೃಷ್ಟಿಗೆ ಕಾರಣನಾದ, ಹೇ ಶಾಂತೀರಮಣ-**ಅನಿರುದ್ಧನೇ** ಎನಗೆ ಮುಕ್ತಿಯು ನಿತ್ಯ ಸುಖವನ್ನು ಅನುಗ್ರಹಿಸು. ನೀನೇ ನನ್ನ ಪಾಲಿನ ಜನನೀ-ಜನಕ, **ಪ್ರೇಮ ಇರಿಸು** = ಹೇ **ಪುರುಷೋತ್ತಮಾ,** ನೀನು ಸರ್ವ ವಿಧಗಳಲ್ಲಿಯೂ ಶ್ರೇಷ್ಠನು ಕ್ಷರಾಕ್ಷರ ಪುರುಷ ಪೂಜಿತ ಪಾದನು. ಪ್ರೇಮ ಪ್ರವಾಹ ರೂಪವಾದ ದೃಢರೂಪದ ಭಕ್ತಿಯನ್ನು ನೀಡಿ, ನಿನ್ನ ಚರಣಾರವಿಂದಗಳನ್ನು ಅನವರತ ಸ್ಮರಿಸುತ್ತಿರುವ ಮನಸ್ಸನ್ನು ದಯಪಾಲಿಸು.

**ಸಾಧು-ಸಂಗ ಕೊಟ್ಟು** = ನಿನ್ನ ಏಕಾಂತ ಭಕ್ತರಾದ ಮಂಗಳಾತ್ಮಕರ ಸಂಗ ಸುಖವನ್ನು ಕರುಣಿಸು ತದ್ವಾರಾ ನಿನ್ನ ನಿರಂತರ ಭಜನೆ ನಡೆಯುವಂತೆ ಮಾಡು. ಲೋಕೋದ್ಧಾರಕನಾದ ಅಧೋಕ್ಷಜನೇ, ನಿನ್ನ ವಾತ್ಸಲ್ಯ ಅನವರತ ನನ್ನ ಮೇಲಿರಲಿ.

**ಭೇದಮಾಡಿ ನೋಡದಿರು** = ನಿನ್ನ ವನೆಂದು ಕರುಣಿಸು. ನಿನ್ನ ದಾಸರ ಪರಂಪರೆಯಲ್ಲಿ ಬಿದ್ದಿರುವನು ನಾನೆಂದು ಪರಿಗಣಿಸು, **ಪಾರು**

**ಗಾಣಿಸಯ್ಯ ಕೊನೆಗೆ** = ಕರ್ಮ ಬಂಧವನ್ನು ಬಿಡಿಸಿ, ಭವಸಾಗರದಿಂದ ನನ್ನನ್ನು ಉತ್ತರಿಸು, "ನಾರಸಿಂಹ"-ಭಗವದ್ರೂಪವು ಸಕಲ ದುರಿತ ಪರಿಹಾಸಕರೂಪ. ಬಂಧನ ರೂಪದಲ್ಲಿರುವ ಕರ್ಮ ಸಂಬಂಧವನ್ನು ಬಿಡಿಸುವವನು. ಲಯಕರ್ತನಾದ ನಾರಸಿಂಹನು.

**ಸಂಚಿತಾರ್ಥ ಪಾಪಗಳು** ಪೂರ್ವ ಜನ್ಮಗಳಲ್ಲಿ ಸಂಚಯವಾಗಿ ಅನುಭೋಗಕ್ಕೆ ಬಾರದಿರುವ ಕರ್ಮಗಳ ರಾಶಿ. ಇಂತಹ ಸಂಚಿತ ಕರ್ಮಗಳಿಂದ ಜನ್ಯವಾದ ಪಾಪ ರಾಶಿಗಳನ್ನು ಆಮೂಲಾಗ್ರವಾಗಿ ಪರಿಹರಿಸು. ನೀನು ಶಾಶ್ವತ ಸ್ವರೂಪೀ (ಅಚ್ಯುತ), **ಒಪ್ಪುವಂತೆ ಮಾಡಲಿಲ್ಲ** = ಜಪ, ತಪ, ಧ್ಯಾನಾದಿ ಕರ್ಮಗಳನ್ನು ನಿನ್ನ ಮನಸ್ಸಿಗೆ ಒಪ್ಪುವಂತೆ ಮಾಡಲಿಲ್ಲ. ಸಕಲ ಕರ್ಮವೂ ವಿಷ್ಣು ಪ್ರೀತ್ಯರ್ಥವಾಗಿರಬೇಕು, **ಎನಗೆ ಭವದ ಸೆರೆಯ ಬಿಡಿಸು** = ಉಪಾಧಿ ರೂಪದಲ್ಲಿರುವ ಈ ಸಂಸಾರದ ಬಂಧನವನ್ನು ಪರಿಹರಿಸಿ, ತದ್ವಾರಾ ಕರ್ಮ ವಿಮೋಚನೆಗೈದು, ಸ್ವರೂಪಾನಂದವನ್ನು ಕರುಣಿಸೆಂದು ಶ್ರೀ ಹರಿಯಲ್ಲಿ ಪ್ರಾರ್ಥಿಸುತ್ತಾರೆ ಭಕ್ತಾಗ್ರೇಸರಾದ ಶ್ರೀ ಕನಕದಾಸರು.

**ಇರಿಸು ಭಕ್ತರೊಳು** = ಇದಕ್ಕೆ ಸಹಾಯಕವಾದ ಸಾಧನವೆಂದರೆ, ಶ್ರೀ ಹರಿಭಕ್ತರ ಸಂಗ ಸುಖ ಅವರ ಸಹವಾಸ ಸುಖವನ್ನು ಕರುಣಿಸು, **ಪುಟ್ಟಿಸಿದಕೆ ಪಾಲಿಸಿನ್ನು** = ನನ್ನನ್ನು ಅಸ್ಪೃಶ್ಯ ರಾಶಿಯಿಂದ ಹೊರತೆಗೆದು ಸ್ಪೃಶ್ಯ ರಾಶಿಯಲ್ಲಿ ತಂದೆ ನಿನ್ನಿಂದ ಸೃಷ್ಟನಾದ ನನ್ನ ಉದ್ಧಾರ ನಿನ್ನ ಅಧೀನ ಹೇ ಕೃಷ್ಣ ! **ಸತ್ಯವಾದ ನಾಮಗಳನು** = ಸತ್ಯ ಸಂಕಲ್ಪನಾದ ಪರಮೇಶ್ವರನ ಈ ಚತುರ್ವಿಂಶತಿ ಭಗವದ್ರೂಪಗಳ ನಾಮಾವಳಿಯನ್ನು, **ನಿತ್ಯದಲಿ ಪಠಿಸುವವರ** = ಪ್ರತಿ ನಿತ್ಯ ಭಕ್ತಿ ಪೂರ್ವಕವಾಗಿ ಪಾರಾಯಣ ಮಾಡುವವರ, **ಅರ್ಥಿಯಿಂ ಸಲಹುವನು** = ಅಭೀಷ್ಟಗಳನ್ನು ಸಲ್ಲಿಸಿ, ಸಂರಕ್ಷಿಸುವನು.

**ಕರ್ತೃ ಕೇಶವಾ**=ಸಕಲ ಕರ್ಮಗಳಿಗೂ ಮುಖ್ಯ ಪ್ರೇರಕನಾದ (ಕರ್ತೃವಾದ) ಕೇಶವನು (ಸಂಪುಟಾಕಾರವಾಗಿ) ಸಲಹುವನು. ಈ ನಾಮಗಳ ಪದನದ ಫಲ-ನಿತ್ಯಾನಂದರೂಪವಾದ ಮುಕ್ತಿ.



೫೫

(ಅಂಕಿತ-ಖಾದ್ರಿ ಪುರೀಶ ನಾರಸಿಂಹ)

ರಾಗ-ರೇಗುಪ್ತಿ ಆದಿತಾಳ

ದಯಮಾಡೋ ಶ್ರೀ ಕೃಷ್ಣ-ದಯಮಾಡೋ || ||ಪ||

ದಯಮಾಡೋ ಜಯ ವಿಜಯ ಪ್ರಿಯ
ದಯಮಾಡೋ ಸನ್ಮುನಿ ಮೃದು ಹೃದಯ || ||ಅ||

ಶ್ರೀ ಶನೀ ಕ್ಷೀರಾಂಬು ರಾಶಿ
ವಾಶಿಯಾಗಿರಲಾಗಿ ವಾ-
ಗೀಶಾದ್ಯರು ಬಹು ಕ್ಲೇಶವನು ಸುರಲ-
ಧೀಶ ಲಾಲಿಸಿದೆ-ಕೇಶವಮೂರ್ತಿ || ||೧||

ಧಾರುಣಿ ಭಾರವ ಕಳೆವ
ಕಾರಣ ದೇವಕಿಯ ಕು-
ಮಾರ ಯದುಕುಲೋದ್ಧಾರನಾಗಿ ಯವ-
ತಾರವ ಧರಿಸಿದ ನಾರಾಯಣನೆ || ||೨||

ಸಾಧು ವಸುದೇವ ದೇವ-
ಕೀ ಧೈರ್ಯದೊಳಿರುವಂತೆ

ಬೋಧಿಸಿ ನಿಜ ರೂಪಾಧಿಕಾಶರಿಗೆ
ಸಾಧಿಸಿ ತೋರಿದ **ಮಾಧವರಾಯ** ॥ ॥೩॥

ಕಂದನಾಗಿ ವಸುದೇವ
ನಿಂದ ಯಮುನೆಯ ದಾಟಿ
ಬಂದು ಗೋಕುಲದಿ ನಿಂದು ಯಶೋದಾ-
ನಂದನನಾದ ಮುಕುಂದ **ಗೋವಿಂದ** ॥ ॥೪॥

ವೃಷ್ಣೇರು ತೊಟ್ಟಿಲೊಳಿಟ್ಟು
ಕೃಷ್ಣ ಜೋ ಯೆಂದು ಪಾಡಿದರು
ಜಿಷ್ಣು ವಿಸುತ ವರ್ಧಿಷ್ಣು ಗರಿಷ್ಣು ಸ-
ಹಿಷ್ಣು ಸದಾ ಪ್ರಭಾ ವಿಷ್ಣು **ವಿಷ್ಣುವೆ** ॥ ॥೫॥

ವಧುವಾಗಿ ಪೂತನಿ ಬಂದು
ಅಧಿಕ ವಿಷದ ಮೊಲೆಯ್ಯನೂಡೆ
ವಿಧವನರಿಸಿದವಳ ವಧಿಸಿ ಶಕಟಸುರ
ನಿಧನವಗೊಳಿಸಿದ **ಮಧುಸೂದನನೆ** ॥ ॥೬॥

ವಕ್ರಿಪ ತೃಣಾವರ್ತನ
ವಿಕ್ರಮ ಗೆಲಿದು ನೀ ಬಾ-
ಲಕ್ರೀಡೆಯೊಳು ತಕ್ರದಧಿಘೃತ
ವಾಕ್ರಮಿಸಿದೆಯೋ **ತ್ರಿವಿಕ್ರಮದೇವ** ॥ ॥೭॥

ಸೋಮಸ ಪಣ್ಣೆಂದು ಪಿಡಿದು
ನೀ ಮಣ್ಣು ಮೆದ್ದು ತಾಯಿಗೆ
ಪ್ರೇಮದಿ ತ್ರಿಭುವ ಧಾಮವ ಬಾಯೊಳು
ಕಾಮಿಸಿ ತೋರಿದ **ವಾಮನಮೂರ್ತಿ** ॥ ॥೮॥

ದುರುಳತನವ ಕಂಡು ನಿನ್ನ-
ನರಸಿ ಒರಳಿಗೆ ಬಂಧಿಸೆ
ಒರಳಲಿ ಮತ್ತಿಯ ಮರನ ಕೆಡಹಿ ಗಾಂ-
ಧರುವರ ಶಾಪವ ಪರಿದ ಶ್ರೀಧರನೆ ॥ ॥೯॥

ಭಾಸುರ ಬೃಂದಾವನ
ನೀ ಸೇರಿ ವತ್ಸಬಕನ ಅ-
ಘಾಸುರ ಮೊದಲಾದಾಸುರ ಕೋಟಿಯ
ನಾಶಗೈದ ಹೃಷೀಕೇಶ ರಮೇಶ ॥ ॥೧೦॥

ಪದ್ಮಾಕ್ಷ ಗೋಪ ಗೋರೂಪ
ಪದ್ಮಜಗಾಗಿ ನೀ ಧರಿಸಿ
ಸದ್ಮರ ವರಹೃತ್ಪದ್ಮವನೊಲಿಸಿದೆ
ಪದ್ಮಭವ ಸ್ತುತ ಪದ್ಮನಾಭನೆ ॥ ॥೧೧॥

ತರಿದುಧೇನಕನ ಕಾಳಿ
ಉರಗನ ಗರ್ವ ಬಿಡಿಸಿ
ಉರಿಯನುಂಗಿ ಬಲದಿಂದ ಪ್ರಲಂಬಾ-
ಸುರನನು ಕೊಲಿಸಿದ ವರದಾಮೋದರ ॥ ॥೧೨॥

ತರುಣೇರ ವಸ್ತ್ರಗಳಪ-
ಹರಿಸಿ ಯಜ್ಞಾನ್ನವನುಂಡು
ಗಿರಿಯನೆತ್ತಿ ಸುತ ವರುಣಾಲಯದೊಳ-
ಗಿರಲು ತಂದ ಸಂಕರುಷಣ ಶೌರೇ ॥ ॥೧೩॥

ದಾಸರಾದ ಗೋಪರಿಗೆ
ಭಾಸುರ ವೈಕುಂಠವ ತೋರಿ

ರಾಸ ಕ್ರೀಡಾಯಾಸದ ಸತಿಯರ
ಲೇಸಿನೆ ಸಲಹಿದ **ವಾಸುದೇವನೆ** ॥ ॥೧೪॥

ವಿದ್ಯಾಧರನಿಗೆ ಮೋಕ್ಷ
ಹೃದ್ಯದಿಂದಲಿತ್ತು ನೀನಾ
ಭೇದ್ಯ ವೃಷಾಸುರವಧ್ಯ ಕೇಶಿಯರ
ವಧ್ಯರ ಮಾಡಿದ **ಪ್ರದ್ಯುಮ್ನನೆ ನೀ** ॥ ॥೧೫॥

ಧನುವಿನ ಹಬ್ಬಕೆ ಮಧುರೆ
ಗಿನಿತು ಬರುತಲ ಕ್ರೂರನಿಗೆ
ಘನ ವಿಶ್ವಾತ್ಮಕ ಚಿನುಮಯ ರೂಪವ
ವನಧಿಯೊಳ್ ತೋರಿದ **ಅನಿರುದ್ಧನೆ ನೀ** ॥ ॥೧೬॥

ವರೆಸಿ ರಜಕನ ಕುಬ್ಜೆಯನಂದ
ವರಿಸಿ ಬಿಲ್ಲು ಮುರಿದು ಮತ್ತೆ
ಕರಿಯ ಗೆಲಿದು ಮಲ್ಲರ ಮರ್ದಿಸಿ ಸಂ-
ಹರಿಸಿದೆ ಕಂಸನ **ಪುರುಷೋತ್ತಮನೆ** ॥ ॥೧೭॥

ರಕ್ಷಿಸಿ ಉಗ್ರಸೇನನ
ಪೇಕ್ಷೆಯಿಂ ತಂದೆ ತಾಯ್ಗಳತ-
ತ್ ಕ್ಷಣ ಬಂಧ ವಿಮೋಕ್ಷದ ಮಾಡಿದ
ಪಕ್ಷಿವಾಹನ**ಾಧೋಕ್ಷಜ ರಂಗ** ॥ ॥೧೮॥

ಗುರುವಾದ ಸಾಂದೀಪರಲ್ಲಿ
ವರವಿದ್ಯಾಭ್ಯಾಸವ ಮಾಡಿ
ಜರೆಯ ಮಗನ ಸಂಗರದಿ ಶೃಗಾಲನ
ಪರಿಭವಗೊಳಿಸಿದೆ **ನರಸಿಂಹನೆ ನೀ** ॥ ॥೧೯॥

ಅತುಲ ಮುಚುಕುಂದನಿಂದ
ಹತವಗೊಳಿಸಿರೆ ಕಾಲಯವನನ
ಮಥಿಸಿ ನೃಪರ ಸಂತತಿಯ ರುಕ್ಮಿಣಿಗೆ
ಪತಿಯಾದೆಲೆ ಅಚ್ಯುತ ಪರಮೇಶ ॥ ॥೨೦॥

ಮರ್ಧಿಸಿ ಘಂಟಾಕರ್ಣನ
ಮರ್ಧಿಸಿ ಪೌಂಡ್ರಕಾಖ್ಯನ
ಸಾಧ್ಯ ಸತ್ಯಭಾಮಾದ್ಯರನಾಳಿದ
ಹೃದ್ಯಮೂರ್ತಿ ಜನಾರ್ದನ ದೇವ ॥ ॥೨೧॥

ಮುರ ನರಕರ ಸಂಹರಿ-
ಸೆರಡೆಂಟು ಸಾವಿರ ಸ್ತ್ರೀ-
ಯರ ಪರಿಣಯಗೈದುರುತೋಷದೊಳು
ಸುರ ಕುಸುಮವನಪಹರಿಸಿ ಸುಪೇಂದ್ರ ॥ ॥೨೨॥

ಸುರಮುನಿಗೆ ವಿಶ್ವರೂಪವ
ನೆರೆದೋರಿ ದಂತವಕ್ತ್ರ
ಸುರ ಶಿಶುಪಾಲರ ತರಿದು ಬಾಣನನು
ಕರಗಳನುರೆ ಸಂಹರಿಸಿದ ಹರಿಯು ॥ ॥೨೩॥

ಹರಗಾಗಿ ಸ್ತ್ರೀಯಾಗಿ ಭಸ್ಮಾ-
ಸುರನ ಗೆಲಿದು ಭೃಗುವಿಗೊಲಿದು
ನರನಿಗೆ ಸಾರಥಿ ಹರುಷದೊಳಾಗಿಯು
ತುರಗವ ನಡೆಸಿದ ಸುರವರ ಕೃಷ್ಣ ॥ ॥೨೪॥

ಏನೆಂದು ಬಣ್ಣಿಪೆ ನಿನ್ನ
ವಾಸುಕೀಶನಿಗ ಭೇದ್ಯ

**ವಾಸವನುತ ವರ ವಾಸುದೇವ ಶ್ರೀನಿ-**
**ವಾಸ ಖಾದ್ರಿಪುರೀಶ ನೃಸಿಂಹನೆ ॥** ॥೨೫॥



**ಕೀರ್ತನ ಸಾಹಿತ್ಯದ ಅರ್ಥವಿವರಣೆ :-**

**ಪ್ರಸಂಗ :-**ಭಕ್ತೋತ್ತಮನಾದ ಸುದಾಮನು ದ್ವಾರಾವತಿಗೆ ಬಂದು, ಶ್ರೀ ಕೃಷ್ಣನ ಅರಮನೆಯನ್ನು ಪ್ರವೇಶಿಸಿ, ಯದುಕುಲ ಶೇಖರನಿಂದ ನಾನಾ ರೀತಿಗಳಲ್ಲಿ ಉಪಚರಿಸಲ್ಪಟ್ಟ ಶ್ರೀ ಹರಿಯ ಅಂತಃಕರಣಪೂರಿತವಾದ ವಾತ್ಸಲ್ಯಾತಿಶಯವನ್ನು ಮನಸಾರೆ ಅನುಭವಿಸಿದ ಕುಚೇಲನು ನಮ್ರ ಭಾವದಿಂದ ಶ್ರೀ ಹರಿಗೆ ಸಾಷ್ಟಾಂಗಪೂರ್ವಕ ನಮನಗೈದು, ಶ್ರೀ ಹರಿಯ ಕೇಶವಾದಿ ಕೃಷ್ಣ ಪರ್ಯಂತ ಚತುರ್ವಿಂಶತಿ ಸಂಖ್ಯಾಕವಾದ ನಾಮಸ್ತುತಿಗೈಯ್ಯಲು ಆರಂಭಿಸಿದನು.

**ದಯ ಮಾಡೋ** = ಹೇ ಕೃಷ್ಣ ! ನೀನು ಪರಮ ಕೃಪಾಳು. ನಿನ್ನ ಕೃಪಾಕಟಾಕ್ಷ ವೀಕ್ಷಣದಿಂದ ನನ್ನನ್ನು ಅನುಗ್ರಹಿಸು, **ಜಯ ವಿಜಯ ಪ್ರಿಯ** = ವೈಕುಂಠದ ದ್ವಾರಪಾಲಕರು, ಶ್ರೀ ವಿಷ್ಣು ಪಾರ್ಷದ ದರ ಪ್ರಿಯನು ಶ್ರೀ ಹರಿಯು, **ಸನ್ಮುನಿ ಮೃದು ಹೃದಯ** = ಸಮೀಚೀನವಾದ ಜ್ಞಾನವುಳ್ಳ ಯೋಗಿಗಳ ಹೃದಯಪೀಠದಲ್ಲಿ **ಅಂತಸ್ಥಿತನಾಗಿರುವ** ಬಿಂಬಮೂರ್ತಿಯೇ (**ಸನ್ಮುನಿ ಹೃದಯ ಮಾನಸ ಮಂದಿರನು**).

**ಶ್ರೀಶ**=ಶ್ರೀನಾಮಕಳಾದ ಲಕ್ಷ್ಮೀದೇವಿಗೆ ನಿಯಾಮಕನಾದ ಶ್ರೀ ಹರಿ, **ನೀ ಕ್ಷೀರಾಂಬುರಾಶಿ**=ನೀನು ಕ್ಷೀರಸಮುದ್ರದಲ್ಲಿ. (ಅಂಬುರಾಶಿ = ಜಲಧಿ-ಸಮುದ್ರ), **ವಾಶಿಯಾಗಿರಲಾಗಿ**=ವಾಸವಾಗಿರುವ ಸಮಯದಲ್ಲಿ-ಶೇಷ ಶಯನನಾಗಿ ಕ್ಷೀರ ಸಾಗರದಲ್ಲಿ ಪವಡಿಸಿರಲಾಗಿ, **ವಾಗೀಶಾ**

**ದ್ಯರು**=ಬ್ರಹ್ಮಾದಿ ದೇವತೆಗಳು (ವಾಕ್-ವಾಗಾಭಿಮಾನಿ ಶ್ರೀ ಸರಸ್ವತೀ, ವಾಗೀಶ–ಸರಸ್ವತೀ ಪತಿ ಶ್ರೀ ಬ್ರಹ್ಮದೇವರು) ಇಂದ್ರಾದಿ ಸಕಲ ದೇವತಾ ವರ್ಗ ಚತುರ್ಮುಖ ಬ್ರಹ್ಮದೇವರ ನೇತೃತ್ವದಲ್ಲಿ ನಿನ್ನೆಡೆಗೆ ಬಂದರು.

**ಬಹು ಕ್ಲೇಶವನು** ದೇವತೆಗಳಿಗೆ ದೈತ್ಯರಿಂದ ಒದಗಿದ ದುಃಖ ವನ್ನು, **ಉಸುರಲು**=ನಿನಗೆ ಬಿನ್ನವಿಸಿಕೊಳ್ಳಲು, **ಅದ ಈಶ ಲಾಲಿ ಸದೆ**=ಆದರ ಮೊರೆಯನ್ನು ನೀ ಕಿವಿಗೊಟ್ಟು ಕೇಳಿದೆ, **ಕೇಶವಮೂರ್ತಿ** =ಬ್ರಹ್ಮ ರುದ್ರಾದಿಗಳಿಂದ ವಂದ್ಯನಾದ **ಕೇಶವನಾಮಕ** ಶ್ರೀ ಕೃಷ್ಣನೇ ! (ಶ್ರೀ ಕೃಷ್ಣನಿಗೇ ಸರ್ವ ನಾಮಗಳ ಸಂಬೋಧನೆ).

**ಧಾರುಣಿ ಭಾರವ**= ಭೂ ಭಾರವನ್ನು ದೈತ್ಯರು ಹುಟ್ಟಿ ಭೂ ಭಾರ ವಾದಾಗ "ಯದಾ ಯದಾಹಿ ಧರ್ಮಸ್ಯ ಗ್ಲಾನಿರ್ಭವತಿ ಭಾರತ । ಧರ್ಮ ಸಂಸ್ಥಾಪನಾರ್ಥಾಯ ಸಂಭವಾಮಿ ಯುಗೇ ಯುಗೇ।-ಎಂಬ ಗೀತಾ ವಚನ ದಂತೆ, ಶ್ರೀ ಹರಿಯ ಅವತಾರಕ್ಕೆ ಕಾರಣ, **ಕಳೆವ ಕಾರಣ**=ಭೂ ಭಾರ ವನ್ನು ಕಳಿಯಲೋಸುಗ, **ದೇವಕಿಯ ಕುಮಾರ**= ವಸುದೇವ ದೇವಕಿ ಯರಲ್ಲಿ ಪುತ್ರತ್ವೇನ ಅವತಾರ ಮಾಡಿದೆ.

**ನಾರಾಯಣನೇ**= ಮೂಲ ರೂಪಿಯಾದ ಶ್ರೀಮನ್ನಾರಾಯಣನೇ (ಕ್ಷೀರಸಮುದ್ರ ನಿವಾಸಿ) ಶ್ರೀ ಕೃಷ್ಣನಾಗಿ ಭೂ ಭಾರಹರಣಾರ್ಥವಾಗಿ ಅವತರಿಸಿದನು.

**ಸಾಧು ವಸುದೇವ ದೇವಕೀ**=ಜನಿಸುತ್ತಲೇ, ವಸುದೇವನಿಗೆ ತನ್ನ ನೈಜ ರೂಪವನ್ನು ಪ್ರಕಟಿಸಿದನು. ವಸುದೇವ ದೇವಕಿಯರಿಗೆ ಅಭಯ ಪ್ರದವಾದ ಅಪಾರ ಗುಣಸಂಪನ್ನನು, **ವಸುದೇವನು**=ಯದು ವಂಶದ ಶೂರರಾಜನ ಪುತ್ರ. ಕುಂತಿಯ ಸಹೋದರ. ಈತನ ಜನನ ಕಾಲದಲ್ಲಿ ದೇವತಾವರ್ಗ ಆನಕ (ತಮಟೆ) ಮತ್ತು ದುಂಧುಬಿ (ನಗಾರಿ)ಗಳನ್ನು ಬಾರಿಸಿದ ಕಾರಣದಿಂದ, ವಸುದೇವನಿಗೆ–ಆನಕ ದುಂಧುಭಿ ಎಂದೂ ಹೆಸರು. ವಸುದೇವನಿಗೆ 18 ಮಂದಿ ಪತ್ನಿಯರಿದ್ದರು.

ಅವರ ಪೈಕಿ ದೇವಕಿಯಲ್ಲಿ ಶ್ರೀ ಕೃಷ್ಣನೂ ಮತ್ತು ರೋಹಿಣಿಯಲ್ಲಿ ಬಲರಾಮನೂ ಪುತ್ರತ್ವೇನ ಅವತರಿಸಿದರು.

**ದೇವಕಿ**–ವಸುದೇವನ ಪತ್ನಿಯರಲ್ಲಿ ಒಬ್ಬಳು. ದೇವಕ ಈಕೆಯ ತಂದೆ ಸ್ವಾಯಂಭುವ ಮನ್ವಂತರದಲ್ಲಿ ಪೃಶ್ನಿ ಎಂಬ ಹೆಸರಿನ ಪರಮ ಪತಿ ವ್ರತೆ ಆಗ ಸುತಪನೆಂಬ ಬ್ರಹ್ಮನ ಪತ್ನಿಯಾಗಿದ್ದಳು. ಶ್ರೀ ವಿಷ್ಣುವನ್ನು ತನ್ನ ಘೋರ ತಪಸ್ಸಿನಿಂದ ಮೆಚ್ಚಿಸಿ, ಅವನೇ ಮಗನಾಗಿ ಜನಿಸಬೇಕೆಂದು ವರವನ್ನು ಬೇಡಿದ್ದಳು. ಅಂತೆಯೇ ವರಪ್ರದನಾದ ವಿಷ್ಣುವೇ ಶ್ರೀ ಕೃಷ್ಣ ನಾಮಕನಾಗಿ ದೇವಕಿಯ ಅಷ್ಟಮಗರ್ಭದಲ್ಲಿ ಅವತರಿಸಿದನು.

**ನಿಜರೂಪ ಅಧಿಕಾರಿಗೆ ಸಾಧಿಸಿ ತೋರಿದ**=ಶ್ರೀ ಕೃಷ್ಣನ ಜನನ ಸಮಯದಲ್ಲಿ ದೇವಕಿಗೆ ಎಚ್ಚರವಿರದಂತೆ ಮಾಡಿ, ಅಧಿಕಾರಿಯಾದ ವಸು ದೇವನಿಗೆ ತನ್ನ ಮೂಲ ರೂಪವನ್ನು ತೋರಿಸಿದನು. ರಾಮಾವತಾರದಲ್ಲಿ ಕೌಸಲ್ಯೆಗೆ ತನ್ನ ದರ್ಶನ ಭಾಗ್ಯವನಿತ್ತನು. ದಶರಥನಿಗೆ ಪ್ರಾಪ್ತಿಯಾಗಲಿಲ್ಲ. ಶ್ರೀ ಕೃಷ್ಣಾವತಾರದಲ್ಲಿ ವಿಲೋಮವಾಯಿತು, **ಮಾಧವರಾಯ**=ರಮಾ ರಮಣನಾದ ಶ್ರೀ ಕೃಷ್ಣಾವತಾರದ ಮಹಿಮೆ !

**ಕಂದನಾಗಿ** ಪುಟ್ಟ ಶಿಶುರೂಪದಲ್ಲಿ, **ಯಮುನೆಯ ದಾಟಿ**= ಭೋರ್ಗರೆಯುತ್ತಿದ್ದ ಯಮುನಾ ನದಿಯು ವಸುದೇವನಿಗೆ ದಾಟಲು ಮಾರ್ಗ ಮಾಡಿ ಕೊಟ್ಟಳು. ಬುಟ್ಟಿಯಲ್ಲಿ ಶಿಶುವನ್ನು ಹೊತ್ತುಕೊಂಡು ಯಮುನೆಯನ್ನು ದಾಟಿ ನಂದ ಗೋಕುಲವನ್ನು ಸೇರಿದ ವಸುದೇವ. **ಯಶೋದಾನಂದನನಾದ**=ನಂದ **ಗೋಕುಲದಲ್ಲಿ ಬೆಳೆದು** ನಂದನ ಕಂದ ನಾಗಿ, ಯಶೋದೆಯ ಸಾಕು ಪುತ್ರನಾಗಿ ವಿರಾಜಿಸಿದ ಪ್ರಸಂಗ.

**ಯಶೋದಾ**–ನಂದ ಗೋಪನ ಪತ್ನಿ ಯಶೋದೆಯೇ ಬಕುಳಾಮಾತೆ ಯಾಗಿ ಅವತರಿಸಿ, ಶ್ರೀನಿವಾಸನ ಕಲ್ಯಾಣ ಮಹೋತ್ಸವನ್ನು ಮಾಡಿ, ಸಂತೋಷಪಟ್ಟ ಪುಣ್ಯ ಚೇತನ, **ಮುಕುಂದ**=ಮುಕ್ತಿ ಪ್ರದವಾದ ಶ್ರೀ ಹರಿ (ಮುಕುಂದದಾಗತೀತಿ-ಮುಕುಂದ; ಮುಕುಂ-ಎಂದರೆ ಸ್ವರೂಪಾ

ಸಂದಾವಿರ್ಭಾವ ರೂಪವಾದ ಮುಕ್ತಿ), **ಗೋವಿಂದ**=ವೇದ ಪ್ರತಿ ಪಾದ್ಯನು.

**ವೃಷ್ಣೀರು**=ಯದು ವಂಶದಲ್ಲಿ ಜಾತರಾದ ಗೋಕುಲ ನಿವಾಸಿಗಳು, **ಕೃಷ್ಣ ಜೋ ಯೆಂದು**=ಶಿಶುವಾದ ಶ್ರೀ ಕೃಷ್ಣನನ್ನು ಸ್ವರ್ಣಮಯ ತೊಟ್ಟಿಲಿನಲ್ಲಿ ಹಾಕಿ, ಜೋಗುಳ ಪಾಡುತ್ತಿದ್ದಾರೆ, **ಜಿಷ್ಣು ವಿನುತ**= ಜಿಷ್ಣು ನಾಮಕನಾದ ಅರ್ಜುನನಿಂದ ನಮ್ಯನಾದ ಶ್ರೀ ಕೃಷ್ಣನು. (ಸಕಲ ಶತ್ರುಗಳನ್ನು ಜಯಿಸಿದ್ದವನಾದ್ದರಿಂದ, ಪರಾಕ್ರಮಿ ಅರ್ಜುನನಿಗೆ– "ಜಿಷ್ಣು"-ಎಂತ ನಾಮ), **ವರ್ಧಿಷ್ಣು**=ಶಶ್ವದೇಕ ಪ್ರಕಾರನಾಗಿ ನಿತ್ಯ ಶಾಶ್ವತ ರೂಪನಾದ, **ಗರಿಷ್ಣು**=ರಮಾ ಬ್ರಹ್ಮಾದಿ ದೇವತಾವರ್ಗದಿಂದ ಸರ್ವೋತ್ತಮನಾದ, **ಸಹಿಷ್ಣು**= ಪರಮ ಶಾಂತ ಸ್ವರೂಪನಾದ, **ಸದಾ ಪ್ರಭವಿಷ್ಣು** =ಅನಾದ್ಯನಂತ ಕಾಲದಿಂದಲೂ ಸರ್ವ ಜೀವರಿಗೆ ನಿಯಾಮಕ ನಾದ, **ವಿಷ್ಣುವೇ**=ವಿಷ್ಣು ನಾಮಕನೇ, ವೃಷಲ್-ವ್ಯಾಪ್ತೌ-ಎಂಬ ಧಾತು ಪರಿಷ್ಕಾರದಿಂದ–ಸರ್ವತ್ರ ವ್ಯಾಪ್ತನೂ, ಪೂರ್ಣನೂ ಆದ ಶ್ರೀ ಪರಮಾತ್ಮನಿಗೆ-"ವಿಷ್ಣು"-ಎಂದು ಹೆಸರು.

**ವಧುವಾಗಿ**=ಸುಂದರ ಕನ್ಯಾವೇಷದಲ್ಲಿ, **ಪೂತನಿ ಬಂದು**=ಕಂಸ ನಿಂದ ಪ್ರೇರಿತಳಾಗಿ-"ಪೂತನೀ"-ಎಂಬ ರಕ್ಕಸಿಯು ನಂದ ಗೋಕುಲಕ್ಕೆ ಆಗಮಿಸಿದ್ದಾಳೆ. ಪೂತನಿಯಲ್ಲಿ ಜೀವದ್ವಯಾವೇಶ, ಊರ್ವಶೀ ಎಂಬ ಅಪ್ಸರ ಸ್ತ್ರೀಯು ರಕ್ಕಸಿಯೊಡನೆ ಏಕ ದೇಹದಲ್ಲಿ ಇದ್ದಳು, **ಅಧಿಕ ವಿಷದ ನೊಲೆಯುನೂಡೆ**=ಉತ್ತಮ ಅಲಂಕಾರ ಉಡಿಗೆಗಳಿಂದ, ಮೋಹಕ ರೂಪ ವನ್ನು ತಾಳಿ, ಪೂತನಿಯು ನಂದ ಗೋಕುಲಕ್ಕೆ ಬಂದು, ಯಾರೂ ಇಲ್ಲದ ಸಮಯ ಸಾಧಿಸಿ, ತೊಟ್ಟಿಲಿನಲ್ಲಿ ಮಲಗಿದ್ದ ಶಿಶುವನ್ನು ಎತ್ತಿ ಕೊಂಡು, ವಿಷ ಪೂರಿತವಾದ ತನ್ನ ಸ್ತನ್ಯಗಳಿಂದ ಹಾಲನ್ನು ಉಣಿಸಲು ಪ್ರಯತ್ನಿಸಿದಳು.

ಆಗ ಲೀಲಾಮಾನುಷ ವಿಗ್ರಹನಾದ ಶ್ರೀ ಕೃಷ್ಣನು ಅವಳ ಸ್ತನ್ಯ ಪಾನ ಮಾಡುವ ನೆಪದಲ್ಲಿ ಆ ರಕ್ಕಸಿಯ ಪ್ರಾಣವನ್ನೇ ಹೀರಿದನು, **ಶಕಟಾ**

**ಸುರ ನಿಧನಗೊಳಿಸಿದ** = ಶಕಟಾಸುರನೆಂಬ ರಕ್ಕಸನು ಬಂಡಿಯ ರೂಪದಲ್ಲಿ ಬಂದಾಗ, ಶಿಶುರೂಪದಲ್ಲಿದ್ದ ಶ್ರೀ ಕೃಷ್ಣನು ತನ್ನ ಪುಟ್ಟ ಕಾಲುಗಳಿಂದ ಬಂಡಿಯನ್ನು ಝಾಡಿಸಿ ಒದ್ದು, ಕೊಂದ ಪ್ರಸಂಗ ವಿಶೇಷ !, **ಮಧು ಸೂದನನೆ** = ಮಧುನಾಮಕ ದೈತ್ಯನನ್ನು ಸಂಹರಿಸಿದ ಶ್ರೀ ಹರಿ.

**ವಕ್ರಿಪ ತೃಣಾವರ್ತನೆ** = ತೃಣಾವರ್ತನೆಂಬ ದೈತ್ಯನು ಸುಂಟರ ಗಾಳಿಯ ರೂಪದಲ್ಲಿ ಕೃಷ್ಣನನ್ನು ಮೇಲಕ್ಕೆ ಹಾರಿಸಿದಾಗ, ಕೃಷ್ಣನು ಭಾರವಾಗಿ, ಆ ರಕ್ಕಸನನ್ನು ಕೊಂದು ಎಸೆದನು. ಅಲೆ ಅಲೆಯಾಗಿ ಸುಂಟರ ಗಾಳಿಯ ರೂಪದಿಂದ ಬಂದ ಅಸುರರನ್ನು **ವಕ್ರಿಪ**–ಎಂದಿದ್ದಾನೆ ಕವಿ ವರ್ಯನು, **ವಿಕ್ರಮಗೆಲಿದು** ದೈತ್ಯನ ವಿಕ್ರಮನನ್ನು ಪರಾಭವಗೊಳಿಸಿದ ಪರಾತ್ಪರ ಶ್ರೀ ಕೃಷ್ಣನು !, **ಬಾಲಕ್ರೀಡೆಯೊಳು** = ನಂದ ಗೋಕುಲದಲ್ಲಿ ನಾನಾ ವಿಧವಾದ ಬಾಲ ಲೀಲೆಗಳನ್ನು ಪ್ರದರ್ಶಿಸಿದ ಬಾಲ ಗೋಪಾಲನು !

**ತಕ್ರ ದಧಿ ಘೃತ** = ಬೆಣ್ಣೆ-ಮೊಸರು-ತುಪ್ಪ ಇತ್ಯಾದಿ ವಸ್ತುಗಳನ್ನು, **ಆಕ್ರಮಿಸಿದೆಯೋ** = ಕದ್ದು ಮೆದ್ದೆಯೋ, (ಚೆಲ್ಲಾಡಿ ಹಾಳು ಮಾಡಿದೆ), **ತ್ರಿವಿಕ್ರಮ ದೇವ** = ಮೂಲೋಕಗಳನ್ನು ಗೆದ್ದ ವಿರಾಟ್ ಮೂರುತಿ.

**ಸೋಮನ** = ಶಿಶುವಾಗಿದ್ದಾಗ, ಶ್ರೀ ಕೃಷ್ಣನು ಆಕಾಶದಲ್ಲಿ ಬೆಳ ಗುತ್ತಿದ್ದ ಚಂದ್ರನನ್ನು, **ಪಣ್ಣೆಂದು ಪಿಡಿದು** = ಹಣ್ಣು ಎಂಬುದಾಗಿ ಭ್ರಮೆ ತೋರಿಸಿ, ಹಠ ಹಿಡಿದ ಪ್ರಸಂಗ, **ನೀ ಮಣ್ಣ ಮೆದ್ದು** = ಮಣ್ಣನ್ನು ತಿಂದ ಬಾಲಕ ಶ್ರೀ ಕೃಷ್ಣನನ್ನು ಬಲರಾಮನು ಕೈ ಹಿಡಿದೆಳೆದು ಕೊಂಡು ತಾಯಿ ಯಶೋದೆಯ ಬಳಿ ತಂದಾಗ, **ತಾಯಿಗೆ ಪ್ರೇಮದಿ ತ್ರಿಭುವನ ಧಾಮವ ಬಾಯೊಳು** = ಯಶೋದೆಯು ಬಾಯಿ ತೆರೆ ಎಂದಾಗ, ತೆರೆದ ತನ್ನ ಪುಟ್ಟ ಬಾಯಿಯಲ್ಲಿ ತ್ರಿಭುವನಾತ್ಮಕವಾದ ಸಮಗ್ರ ಬ್ರಹ್ಮಾಂಡ ವನ್ನು ತೋರಿಸಿದ ಅದ್ಭುತ ಪ್ರಸಂಗ ವಿಶೇಷ, **ಕಾಮಿನಿ ತೋರಿದ** = ಅಪೇಕ್ಷಿಸಿದ ತಾಯಿ ಯಶೋದೆಗೆ ಪ್ರದರ್ಶಿಸಿದನು, **ವಾಮನಮೂರ್ತಿ** = ವಟು ವೇಷ ಧಾರಿಯಾದ ಜಗನ್ಮಂಗಳಮೂರ್ತಿ ಉಪೇಂದ್ರನು.

**ದುರುವಳನ ಕಂಡು** = ನಿನ್ನ ಮಿತಿ ಮೀರಿದ ಚೇಷ್ಟೆಗಳನ್ನು ಸಹಿಸದೆ, **ನಿನ್ನನರಸಿ** = ನಿನ್ನನ್ನು ಹುಡುಕಿಕೊಂಡು ಬಂದು, **ಒರಳಿಗೆ ಬಂಧಿಸಿ** = ನಿನ್ನನ್ನು ದೊಡ್ಡ ಒರಳಿಗೆ ಕಟ್ಟಿ ಹಾಕಿದಳು, **ಒರಳಲ್ಲಿ ಮತ್ತಿಯ ಮರನ ಕೆಡಹಿ** = ಆ ದೊಡ್ಡ ಒರಳನ್ನೇ ಲೀಲಾ ಜಾಲವಾಗಿ ಎಳೆದುಕೊಂಡು ಬರುತ್ತಿದ್ದಾಗ, ಮಧ್ಯದಲ್ಲಿ ಸಿಕ್ಕಿದ ಹೆಮ್ಮರಗಳನ್ನು ಕೆಡವಿದೆ, **ಗಾಂಧರುವರ ಶಾಪವ ಪರಿದ** = ಶಾಪಗ್ರಸ್ತರಾಗಿದ್ದ ನಳ ಕೂಟರ ಮತ್ತು ಮಣಿಗ್ರೀವರೆಂಬ ಗಂಧರ್ವರಿಗೆ ಶಾಪವಿಮೋಚನೆಗೈದು, ತದ್ವಾರಾ ಅವರವರ ನಿಜ ರೂಪವನ್ನು ಕರುಣಿಸಿದ, **ಶ್ರೀಧರನೆ** = ಶ್ರೀ ಲಕ್ಷ್ಮೀದೇವಿಯನ್ನು ತನ್ನ ವಕ್ಷಸ್ಥಲದಲ್ಲಿ ಧರಿಸಿದ, ಶ್ರೀ ರಮಾರಮಣನೇ !

**ಭಾಸುರ ಬೃಂದಾವನ** = ನಯನ ಮನೋಹರವಾದ ಬೃಂದಾವನವನ್ನು (ಗೋಕುಲದ ಸಮೀಪದಲ್ಲಿದ್ದ ರಮಣೀಯ ತಾಣ), **ನೀ ಸೇರಿ** = ಗೋ ಗೋಪಾಲಕರೊಡಗೂಡಿ ನೀನು ಸೇರಿ, **ವತ್ಸಾಟಿಕನ** = ನಿನ್ನನ್ನು ಸಂಹರಿಸಲೋಸುಗ ಕರುವಿನ ರೂಪದಲ್ಲಿ ಬಂದ ವತ್ಸಾಸುರನನ್ನು ಮತ್ತು ಕೊಕ್ಕರಿಯ ರೂಪದಲ್ಲಿ ಬಂದ ಬಕಾಸುರನನ್ನು ಸಂಹರಿಸಿದೆ, **ಅಘಾಸುರ** = ಅಘಾಸುರನೆಂಬ ಪ್ರಬಲ ಪರಾಕ್ರಮಿಶಾಲಿ ದೈತ್ಯನನ್ನು, **ಮೊದಲಾದ ಅಸುರ ಕೋಟಿಯ** = ಇವರೇ ಮುಂತಾದ ಸಮಸ್ತ ದೈತ್ಯ ವರ್ಗವನ್ನು, **ನಾಶಗೈದ** = ಲೀಲಾಜಾಲವಾಗಿ ಯಮಪುರಿಗೆ ಅಟ್ಟಿದ, **ಹೃಷೀಕೇಶ** = ಇಂದ್ರಿಯಾಧಿಪತಿಯಾದ, **ರಮೇಶ** = ಶ್ರೀ ಲಕ್ಷ್ಮೀಪತಿಯೇ !

**ಪದ್ಮಾಕ್ಷ** = ಕಮಲದ ದಳಗಳಂತೆ ವಿಸ್ತಾರವಾದ ನೇತ್ರವುಳ್ಳ ಹೇ ಶ್ರೀ ಕೃಷ್ಣ !, **ಗೋಪ ಗೋ ರೂಪ** = ಗೋ-ಎಂದರೆ ವೇದಗಳು. ವೇದ ಪ್ರತಿಪಾದ್ಯನಾದ ಓಂಕಾರ ಸ್ವರೂಪನು. ವೇದಗಮ್ಯನೆಂದರ್ಥ, **ಪದ್ಮಜಗಾಗಿ** = ಬ್ರಹ್ಮದೇವರಿಗಾಗಿ–ಪದ್ಮ-ಪದ್ಮನಾಭರೂಪೀ ಶ್ರೀ ಹರಿಯ ನಾಭೀ ಕಮಲದಲ್ಲಿ, ಜ–ಸಂಜಾತರಾದ, ಶ್ರೀ ಬ್ರಹ್ಮದೇವರು-ಪದ್ಮಜರು, **ನೀ ಧರಿಸಿ** = ಬ್ರಹ್ಮಾದಿ ದೇವತಾವರ್ಗದಿಂದ ಸಂಸ್ತುತ್ಯವಾಗಿ ನೀನು ಧರ್ಮಸಂಸ್ಥಾಪನೆಗಾಗಿ ಅವತರಿಸಿದೆ.

**ಪದ್ಮಜ** = ದಹರಾಕಾಶನತ, (ಹೃದಯಾಕಾಶದಲ್ಲಿರುವ), **ವರ ಹೃತ್ಪದ್ಮವನೊಲಿಸಿದೆ** = ಹೃತ್ಪದ್ಮದಲ್ಲಿ ವಿದ್ಯಮಾನನಾಗಿರುವ ಬಿಂಬ ಮೂರ್ತಿಯೇ !, **ಪದ್ಮಭವಸ್ತುತ** = ಶ್ರೀ ಬ್ರಹ್ಮದೇವರಿಂದ ಸ್ತುತ್ಯನಾದವ, **ಪದ್ಮನಾಭನ** = ತನ್ನ ನಾಭೀ ಕಮಲದಲ್ಲಿ ಬ್ರಹ್ಮಾಂಡದ ಉತ್ಪತ್ತಿಗೆ ಕಾರಣವಾದ ಕಮಲವನ್ನು ಸ್ವೇಚ್ಛೆಯಿಂದ ಸೃಷ್ಟಿಸಿದ ಪದ್ಮನಾಭ ನಾಮಕ ಶ್ರೀ ಹರಿಯೇ !.

**ತರಿದು ಧೇನುಸುರನ** = ಖರ ರೂಪದಲ್ಲಿ ಬಂದ ಧೇನುಕಾಸುರನನ್ನು ಬಲರಾಮನ ಮೂಲಕ ಸಂಹರಿಸಿದ ಶ್ರೀ ಕೃಷ್ಣ, **ಕಾಳಿ ಉರಗನ** = ಯಮುನಾ ನದಿಯ ಮಡುವಿನಲ್ಲಿ ವಾಸಿಸುತ್ತಿದ್ದ ಕ್ರೂರ ಕಾಳಿಂಗನೆಂಬ ಸರ್ಪನ, **ಗರ್ವಬಿಡಿಸಿ** = ಅವನ ಹೆಡೆಯ ಮೇಲೆ ನರ್ತನಗೈದು ಕಾಳಿಂಗನ ಮದವನ್ನು ಭಂಗಿಸಿ, **ಉರಿಯ ನುಂಗಿ** = ಸುತ್ತಲೂ ಆವರಿಸಿ ಬರುತ್ತಿದ್ದ ಕಾಳ್ಗಿಚ್ಚನ್ನು ಲೀಲಾ ಜಾಲವಾಗಿ ನುಂಗಿ, **ಬಲದಿಂದ** = ನಿನ್ನ ಅತಿಶಯವಾದ ಪರಾಕ್ರಮದಿಂದ, **ಪ್ರಲಂಬಾಸುರನನು** = ನಂದಗೋಕುಲದ ಮೇಲೆ ಧಾಳಿಗೈದ ಪ್ರಬಲನಾದ ಪ್ರಲಂಭನೆಂಬ ದೈತ್ಯನನ್ನು ಸಂಹರಿಸಿದ, **ವರ ದಾಮೋದರ** = ಸರ್ವೋತ್ಕೃಷ್ಟನಾದ ದಾಮೋದರ ನಾಮಕನಾದ ಶ್ರೀ ಕೃಷ್ಣನೇ ! (ಉದರಕ್ಕೆ ಹಗ್ಗವನ್ನು ಯಶೋದೆಯಿಂದ ಬಿಗಿಸಿಕೊಂಡ— ದಾಮೋದರನು) (ದಾಮ-ಹಗ್ಗ. ಉದರ-ಸೊಂಟ ಪ್ರದೇಶ).

**ತರುಣೇರ** = ಯಮುನಾ ನದಿಯಲ್ಲಿ ಸ್ನಾನ ಮಾಡುತ್ತಿದ್ದ ಗೋಪಿಕಾ ಸ್ತ್ರೀಯರ, **ವಸ್ತ್ರಗಳನು ಅಪಹರಿಸಿ** = ಉಟ್ಟ ಬಟ್ಟೆಗಳನ್ನು ಅಪಹರಿಸಿ, ಮರದ ಮೇಲೇರಿ ಕುಳಿತು. ಅವರನ್ನು ಕೀಟಲೆ ಮಾಡಿದ ತುಂಟ ಕೃಷ್ಣ, **ಯಜ್ಞಾನ್ನವನು ಉಂಡು** = ಋಷಿ ಪತ್ನಿಯರು ನೀಡಿದ ಅನ್ನವನ್ನು ಸ್ವೀಕರಿಸಿ, **ಗಿರಿಯನೆತ್ತಿ** = ಗೋವರ್ಧನ ಗಿರಿಯನ್ನು ತನ್ನ ಕೈಯ್ಯಿನ ಕಿರು ಬೆರಳಿನಿಂದ ನಿರಾಯಾಸವಾಗಿ ಎತ್ತಿ, ಸಕಲ ಗೋ ಗೋಪಾಲಕರನ್ನು ಭಯಂಕರ ಮಳೆಯಿಂದ ಸಂರಕ್ಷಿಸಿದ ಶ್ರೀ ಕೃಷ್ಣನೇ, **ಸುತವರುಣಾಲಯ ರೊಳು** ಶ್ರೀ ಕೃಷ್ಣನ ವಿದ್ಯಾ ಗುರುಗಳು ಸಾಂದೀಪಿನೀ ಅವರ ಪುತ್ರನನ್ನು

ದೈತ್ಯನೊಬ್ಬನು ಅಪಹರಿಸಿ, ಸಮುದ್ರ ಗರ್ಭದಲ್ಲಿ ಬಂಧಿಸಿಟ್ಟಿದ್ದನು. (ಸುತ-ಗುರುಪುತ್ರ ವರುಣಾಲಯ-ಸಮುದ್ರ.)

**ಇರಲು ತಂದ** = ಗುರು ಪತ್ನಿಯರ **ಪ್ರಾರ್ಥನೆಯಂತೆ** ಶ್ರೀ ಕೃಷ್ಣನು **ಸಮುದ್ರ** ಗರ್ಭವನ್ನು ಹೊಕ್ಕು. ದೈತ್ಯನನ್ನು ಸಂಹರಿಸಿ, ಗುರು ಪುತ್ರನನ್ನು ತಂದು ಗುರು ದಂಪತಿಗಳಿಗೆ ಒಪ್ಪಿಸಿದ ಕಥಾ ಪ್ರಸಂಗ. ಅದೇ ಶ್ರೀ ಕೃಷ್ಣನು ಗುರುಗಳಿಗೆ ನೀಡಿದ **ಗುರುಕಾಣಿಕೆ, ಸಂಕರುಷಣ** = ಲಯಕಾರಕ ರೂಪ. ಮಹಾಪ್ರಳಯ ಕಾಲದಲ್ಲಿ ಸೃಷ್ಟವಾದ ಜಗತ್ತನ್ನು ಲಯಗೊಳಿಸಿ, ಜಗತ್ಸೃಷ್ಟಿಗೆ ಉಪಾದಾನ ಕಾರಣವಾದತತ್ತ್ವಗಳನ್ನು ಸೂಕ್ಷ್ಮ ಪ್ರಕೃತಿಯ ಮೂಲ ರೂಪಗಳಲ್ಲಿ ಸಾಮ್ಯಗೊಳಿಸುವ ಭಗವದ್ರೂಪವು, **ಶೌರೇ** = ಶೂರಸೇನ ಮಹಾರಾಜನ ವಂಶದಲ್ಲಿ ಸಂಜಾತನಾದ ಶ್ರೀ ಕೃಷ್ಣ.

**ದಾಸರಾದ ಗೋಪರಿಗೆ** = ತನ್ನ ನಲ್ಮೆಯ ಭೃತ್ಯರಾದ **ಗೋಪ** ಸ್ತ್ರೀಯರಿಗೆ, **ಭಾಸುರ ವೈಕುಂಠವ ತೋರಿ** ಆನಂದಮಯವಾದ ತನ್ನ ಸ್ವಸ್ಥಾನದ ದರ್ಶನ ಮಾಡಿಸಿ, **ರಾಸಕ್ರೀಡಾಯುಸರ** = ವರ್ತುಳಾಕಾರ ವಾಗಿ ನಿಂತುಕೊಂಡು ತಾಳ ಹಾಕುತ್ತಾ, ಗತಿಯಿಂದ ನರ್ತಿಸುವ ಕ್ರೀಡಾ ವಿಶೇಷಕ್ಕೆ-"ರಾಸಕ್ರೀಡೆ"-ಎನ್ನುವರು. ಶ್ರೀ ಕೃಷ್ಣನು ಕೇಂದ್ರದಲ್ಲಿದ್ದು ಸುತ್ತಲೂ ಸುಂದರ ಯುವತಿಯರಾದ ಗೋಪ ಸ್ತ್ರೀಯರು ದಿವ್ಯಾಲಂಕಾರ ಭೂಷಿತೆಯರಾಗಿ, ಸುತ್ತು ಗಟ್ಟಿ ಶ್ರೀ ಕೃಷ್ಣನೊಡನೆ ರಮಿಸುತ್ತಿದ್ದ ಮೋದಮಯ ಕ್ರೀಡೆ. ಅದರಲ್ಲಿ ಆಯಾಸಗೊಂಡಿದ್ದ ಗೋಪ ಸ್ತ್ರೀಯರನ್ನು ತನ್ನ ಅಂಗಸಂಗದಿಂದ ಪರಿಹರಿಸಿ, ಮೋಹ ಪ್ರದನಾದ ಮಾರಮಣನು.

**ಲೇಸನಿ ಸಲಹಿದ** = ಅವರನ್ನೆಲ್ಲಾ ಚೆನ್ನಾಗಿ ಸಂರಕ್ಷಿಸಿದ, **ವಾಸು ದೇವನ** = ವಸುದೇವನ ಪುತ್ರನಾದ ಶ್ರೀ ಕೃಷ್ಣನೇ ! ಸರ್ವತ್ರ ವ್ಯಾಪ್ತ ವಾಗಿರುವ ಭಗವದ್ರೂಪ ಮೋಕ್ಷ ಪ್ರದತ್ವ ರೂಪವು.

**ವಿದ್ಯಾಧರನಿಗೆ** = ದೇವತೆಗಳಿಂದ ಜನ್ಮ ಪಡೆದ ದೇವತಾವರ್ಗಕ್ಕೆ- "ವಿದ್ಯಾಧರ"-ರೆಂದು ಹೆಸರು. ಅಂತಹ ಒಬ್ಬ ವಿದ್ಯಾಧರನು ಶ್ರೀ ಕೃಷ್ಣ

ನಿಗೆ ಶರಣಾಗತನಾಗಿ ಬರಲು, ಅವನನ್ನು ಪವಿತ್ರೀಕರಿಸಿ, ಮುಕ್ತಿಯನ್ನು ಕರುಣಿಸಿದ ಕರುಣಾಮೂರ್ತಿ, **ಹೃದ್ಯದಿಂದಲಿ ಇತ್ತು** = ಪ್ರೇಮ ಪೂರ್ವಕವಾಗಿ ನೀಡಿ, **ನೀನು ಅಭೇಧ್ಯ ವೃಷಾಸುರನ** = ಕಂಸಾಸುರನಿಂದ ಪ್ರೇರಿತನಾಗಿ ಬಂದ ಅಸಮ ಪರಾಕ್ರಮಿಶಾಲಿ–ವೃಷಾಸುರನೆಂಬ ದೈತ್ಯ ನನ್ನು ಲೀಲಾಜಾಲವಾಗಿ ಸಂಹರಿಸಿದ ಶ್ರೀ ಕೃಷ್ಣ. ಅರಿಷ್ಟನೆಂಬ ಹೆಸರಿನ ದೈತ್ಯನೇ ವೃಷಭ ರೂಪ ತಾಳಿ ಗೋಕುಲಕ್ಕೆ ನುಗ್ಗಿ ಬಂದನು. ಅವನೇ ವೃಷಾಸುರನು.

**ಅವಧ್ಯ ಕೇಶಿಯುರ** = ವರ ಬಲದಿಂದ ಅವಧ್ಯನಾಗಿದ್ದ ಕೇಶೀ ಎಂಬ ಅಸುರನನ್ನು ಶ್ರೀ ಕೃಷ್ಣನು ಸಂಹರಿಸಿದ ಪ್ರಸಂಗ. ಕಂಸಾಸುರನಿಂದ ಆಜ್ಞಪ್ತನಾಗಿ, ಕೇಶೀ ದೈತ್ಯನು ಗೋಕುಲಕ್ಕೆ ಆಗಮಿಸಿ, ಗೊರಸಿನಿಂದ ನೆಲವನ್ನು ಕೆದರುತ್ತಾ, ಧೂಳನ್ನೆಬ್ಬಿಸಿ, ತನ್ನ ಹೇಷಾರವದಿಂದ ಭಯಂಕರ ವಾಗಿ ಪ್ರದರ್ಶಿಸಿ ಕೊಂಡನು. ಕೇಶಿಯು ದೈತ್ಯಾಕಾರದ ಕುದುರೆಯ ರೂಪ ತಾಳಿ ಬಂದಿದ್ದನು.

ಅಧೋಕ್ಷಜನು ತನ್ನೆಡೆಗೆ ಆರ್ಭಟಿಸಿಕೊಂಡು ಧಾವಿಸುತ್ತಿರುವ ಅಶ್ವಾ ಕಾರದ ದೈತ್ಯನ ಬಾಯಿಯಲ್ಲಿ ತನ್ನ ಕೈಯನ್ನು ತುರುಕಿ, ಬೆಳೆಸಿದನು. ದೈತ್ಯನ ಹಲ್ಲುಗಳೆಲ್ಲವೂ ಉದುರಿದವು. ಉಸಿರುಕಟ್ಟಿ ದಾನವನು ಕೆಳ ಗುರುಳಿದನು, **ಪ್ರದ್ಯುಮ್ನನೆ** = ಅನಂತಕೋಟಿ ಸೂರ್ಯ ಪ್ರಕಾಶ ಮಾನನಾದ ಶ್ರೀ ಕೃಷ್ಣನು ಶ್ರೀ ಪ್ರದ್ಯುಮ್ನರೂಪವು ಸೃಷ್ಟಿ ಮತ್ತು ಪಾಲನಾ ಕಾರ್ಯವನ್ನೆಸಗುವ ಭಗವದ್ರೂಪವೇ ಪ್ರದ್ಯುಮ್ನ.

**ಧನುವಿನ ಹಬ್ಬಕೆ** = ಪ್ರತಿ ವರ್ಷವೂ ಕಂಸನು ಸಂಪ್ರದಾಯದಂತೆ ಆಚರಿಸುತ್ತಿದ್ದ ಬಿಲ್ಲಿನ ಹಬ್ಬ, **ಮಧುರೆಗೆ ಇನಿತು ಚಿರವಲ ಕ್ರೂರನಿಗೆ** = ಬಿಲ್ಲು ಹಬ್ಬದ ನೆಪದಲ್ಲಿ ಶ್ರೀ ರಾಮಕೃಷ್ಣರನ್ನು ಮಧುರೆಗೆ ಆಹ್ವಾನಿಸು ವಂತೆ ಕಂಸನು ಅಕ್ರೂರನನ್ನು ಗೋಕುಲಕ್ಕೆ ಕಳುಹಿಸಿದನು.

**ಅಕ್ರೂರನು** = ಯದುವಂಶ ಸಂಜಾತನು. ಶ್ವಫಲ್ಕನೆಂಬ ಯಾದವನ ಪುತ್ರನು. ಅಕ್ರೂರನ ತಾಯಿ–ಗಾಂದಿನಿ. ಕಂಸನ ಅಷ್ಟ ಮಂತ್ರಿಗಳಲ್ಲಿ ಒಬ್ಬನು. ಆಹುಕನ ಪುತ್ರಿಯಾದ ಭುತನುವನ್ನು ಲಗ್ನವಾಗಿದ್ದನು. ಅಕ್ರೂರನಿಗೆ-ಬಭ್ರುವೆಂದು ನಾಮಾಂತರ ಉಂಟು, **ಘನ ವಿಶ್ವಾತ್ಮಕ ಚಿನುಮಯ ರೂಪವ ವನಧಿಯೋಳ್ ತೋರಿದ** = ಗೋಕುಲಕ್ಕೆ ಆಗಮಿಸಿದ ಅಕ್ರೂರನು ರಥದಿಂದ ಇಳಿದು, ಯಮುನಾ ನದಿಯ ದಡದಲ್ಲಿದ್ದ ಮರಳಿನ ಮೇಲೆ ಧ್ವಜ ವಜ್ರಾಂಕುಶ ಚಿನ್ಹಿತವಾದ ಶ್ರೀ ಕೃಷ್ಣನ ಪಾದದ ಗುರುತುಗಳನ್ನು ನೋಡಿ, ಹರ್ಷೋದ್ರೇಕದಿಂದ ಮರಳಿನಲ್ಲಿ ಹೊರಳಾಡಿದ.

ಶ್ರೀ ಕೃಷ್ಣನ ಪಾದಧೂಳಿಯಿಂದ ಪವಿತ್ರೀಕೃತವಾದ ಆ ಸೈಕತ ರಾಶಿಯನ್ನು ಭಕ್ತಿಯಿಂದ ತಲೆಯ ಮೇಲೆ ಸುರಿವಿಕೊಂಡ ಸೈಕತಾಭಿಷಿಕ್ತನಾದ ಅಕ್ರೂರನ ಭಕ್ತಿಗೆ ಮೆಚ್ಚಿ, ಶ್ರೀ ಕೃಷ್ಣನು ತನ್ನ ವಿಶ್ವ ರೂಪವನ್ನು ಯಮುನಾ ನದಿಯ ಹರಿಯುವ ನೀರಿನಲ್ಲಿ ತೋರಿಸಿದನು, **ಅನಿರುದ್ಧನೆನೀ** = ಶಾಂತೀ ಪತಿಯಾದ ಶ್ರೀ ಅನಿರುದ್ಧ ರೂಪವು ಸೂಕ್ಷ್ಮ ಸೃಷ್ಟಿಗೆ ಕಾರಣರೂಪವು.

**ವರೆಸಿ ರಜಕನ** = ಮಧುರಾ ಪಟ್ಟಣದ ರಾಜ ಬೀದಿಗಳಲ್ಲಿ ಶ್ರೀ ರಾಮ ಕೃಷ್ಣರು ಬರುತ್ತಿರುವಾಗ, ಒಗೆದ ಬಟ್ಟೆಗಳನ್ನು ಮಡಿ ಮಾಡಿ ಮೂಟೆಗಳನ್ನು ಹೊತ್ತುಕೊಂಡು ಬರುತ್ತಿದ್ದ ಅಗಸನೊಬ್ಬನು (ರಜಕ) ಇದಿರಾದನು. ಆ ಉತ್ತಮ ವಸನಗಳನ್ನು ತಮಗೆ ಕೊಡಬೇಕೆಂದು ಪೂರ್ಣೈಶ್ವರ್ಯನಾದ ಲಕ್ಷ್ಮೀಪತಿಯು ರಜಕವನ್ನು ಬೇಡಿದನು.

**ಕುಬ್ಜೆಯ ನಂದವರಿಸಿ** = ಕಂಸನ ದಾಸಿಯು ಕುಬ್ಜ. ಅಷ್ಟಾವಕ್ರವಾಗಿದ್ದ ದೇಹ ಶಾಪಗ್ರಸ್ತಳಾಗಿದ್ದ ಅಪ್ಸರಸ್ತ್ರೀ. ಪರಿಮಳಯುಕ್ತವಾದ ಗಂಧವನ್ನು ಸುವರ್ಣ ಪಾತ್ರೆಯಲ್ಲಿ ಕಂಸನಿಗಾಗಿ ಒಯ್ಯುತ್ತಿದ್ದಳು. ಮಾರ್ಗ ಮಧ್ಯದಲ್ಲಿ ಜಗನ್ಮೋಹಕನಾದ ಶ್ರೀ ಕೃಷ್ಣನಿಗೆ ಗಂಧವನ್ನು ನೀಡಿದಳು. ಅವಳ ಭಕ್ತಿಗೆ ಮೆಚ್ಚಿ ಪರಮ ಸಂತುಷ್ಟನಾದ ಶ್ರೀ ಕೃಷ್ಣನು ತನ್ನ ಕಾಲಿ

ನಿಂದ ಅವಳ ಕಾಲನ್ನು ಮೆಟ್ಟಿ ನಿಂತು, ತನ್ನ ಅಂಗೈಯ್ಯನ್ನು ಅವಳ ಗಲ್ಲಕ್ಕೆ ಒತ್ತಿ, ಅವಳ ದೇಹವನ್ನು ಮೇಲಕ್ಕೆತ್ತಿದ್ದ. ತಕ್ಷಣ ಅವಳ ದೇಹಗತ ವಕ್ರತೆಯೆಲ್ಲಾ ಮಾಯವಾಗಿ, ಸುಂದರ ಸ್ತ್ರೀಯಾಗಿ ಕಂಗೊಳಿಸಿದಳು. ಕಂಸವಧೆಯ ನಂತರ ಅವಳ ಮನೆಗೆ ಹೋಗಿ, ಅವಳಿಗೆ ತನ್ನ ಅಂಗಸಂಗ ಸುಖವನ್ನಿತ್ತು ಸಂತುಷ್ಟಿ ಪಡಿಸಿದ ಪ್ರಸಂಗ ವಿಶೇಷ.

**ಬಿಲ್ಲು ಮುರಿದು** _ ಕಂಸಾಸುರನ ಅರಮನೆಯ ವಿಶಾಲವಾದ ಹಜಾರ ದಲ್ಲಿಟ್ಟಿದ್ದ ಬಿಲ್ಲನ್ನು ಲೀಲಾಜಾಲವಾಗಿ ಎತ್ತಿ, ಮುರಿದು ಬಿಸಾಡಿದ ದಿಟ್ಟ ತನದ ಪ್ರದರ್ಶನ. ಬಾಲಕನಾಗಿರುವಾಗಲೇ ರಾಮಾವತಾರದಲ್ಲಿಯೂ ಸಹ ಶಿವಧನುಸ್ಸನ್ನು ಭಂಗಿಸಿ, ಸೀತೆಯನ್ನು ವಿವಾಹವಾದ ಪ್ರಸಂಗ, **ಮತ್ತು ಕರಿಯುಗೆಲಿದು** = ಮದೋನ್ಮತ್ತವಾಗಿದ್ದ. ಬಹು ಬಲಿಷ್ಠವಾಗಿದ್ದ ಕುವ ಲಯಾ ಪೀಡವೆಂಬ ಮದ್ದಾನೆಯನ್ನು ಸಂಹರಿಸಿದನು, **ಮಲ್ಲರ ಮರ್ಧಿಸಿ** =ತನ್ನೊಡನೆ ಮಲ್ಲ ಯುದ್ಧಕ್ಕೆ ನಿಂತ ಚಾಣೂರ ಮತ್ತು ಮುಷ್ಟಿಕರೆಂಬ ಜಗದ್ವಿಖ್ಯಾತ ಮಲ್ಲರನ್ನು ಲೀಲಾಜಾಲವಾಗಿ ಸೋಲಿಸಿ, **ಮಣ್ಣು ಮುಕ್ಕಿ**ಸಿದನು.

**ಸಲಹರಿಸಿದ ಕಂಸನ** = ತನ್ನ ಸೋದರ ಮಾವನಾದ ಕಂಸಾಸುರನನ್ನು ಸಿಂಹದ ಮರಿಯು ಆನೆಯ ಕುಂಭ ಸ್ಥಳಕ್ಕೆ ಎಗರುವಂತೆ ಹಾರಿ, ಅವನ ಮುಂಗೂದಲನ್ನು ಹಿಡಿದು ಎಳೆದು, ಸಿಂಹಾಸನದಿಂದ ಕೆಳಗೆ ಕೆಡವಿ, ಎದೆಯ ಮೇಲೆ ಕೂತು, ಮುಷ್ಟಿ ಪ್ರಹಾರದಿಂದ ಸಂಹರಿಸಿದ ವಿಶೇಷ ಪ್ರಸಂಗ, **ಪುರುಷೋತ್ತಮನ** = ಕ್ಷರಾಕ್ಷರ ಪುರುಷರಿಗೂ ಅತ್ಯಂತ ಉತ್ತ ಮೋತ್ತಮನಾದ ಸರ್ವೇಶನು.

**ರಕ್ಷಿಸಿ ಉಗ್ರಸೇನನ** = ಉಗ್ರಸೇನನು ಚಂದ್ರವಂಶದ ಅರಸು. ಕಂಸನ ತಂದೆ ಯದುವಂಶದ ಆಹುಕನ ಪುತ್ರ. ದೇವಕಿ ಇವನ ಸಹೋದರ ಕಂಸನು ಬಲಾತ್ಕಾರದಿಂದ ತಂದೆಯನ್ನು ಬಂಧಿಸಿ ಕಾರಾಗೃಹದಲ್ಲಿರಿಸಿದ್ದನು,

ಶ್ರೀ ಕೃಷ್ಣನು ಕಂಸನನ್ನು ಕೊಂದು, ಉಗ್ರಸೇನನನ್ನು ಸೆರೆಯಿಂದ ಬಿಡಿಸಿ, ಆತನಿಗೆ ಯದುವಂಶದ ಪಟ್ಟಕಟ್ಟಿದ.

**ತಂದೆ ತಾಯ್ಗಳ** - ತನ್ನ ತಂದೆ-ವಸುದೇವ. ತಾಯಿ-ದೇವಕಿ. ಇಬ್ಬರನ್ನು ಕಂಸಾಸುರನು ಸೆರೆಯಲ್ಲಿರಿಸಿದ್ದ ಅವರಿಗೆ ಬಂಧ ವಿಮೋಚನೆಗೈಸಿ, ಉದ್ಧರಿಸಿದ ಗರುಡ ಗಮನನಾದ ಗಜ ವರದನು.

**ಸಾಂದೀಪರಲ್ಲಿ** = ಅವಂತೀ ಪಟ್ಟಣದಲ್ಲಿ ವಾಸವಾಗಿದ್ದ ವಿಪ್ರೋತ್ತಮ ಅವರಲ್ಲಿ ಬಲರಾಮ, ಶ್ರೀ ಕೃಷ್ಣರು ವಿದ್ಯಾಭ್ಯಾಸ ಮಾಡಿದರು ಸುದಾಮನು ಆ ಗುರುಕುಲದಲ್ಲಿ ಶ್ರೀ ಕೃಷ್ಣನ ಸಹಪಾಠಿಯಾಗಿದ್ದ ಬಾಲ್ಯ ಸ್ನೇಹಿತ, **ಜರೆಯ ಮಗನ** - ಜರಾ ಎಂಬ ರಾಕ್ಷಸಿಯಿಂದ ಎರಡು ಹೋಳಾಗಿದ್ದ ಜರಾಸಂಧನು ಒಂದಾಗಿ ಕೂಡಿ, ಭೀಮಸೇನನಿಂದ ಶ್ರೀ ಕೃಷ್ಣನ ಆದೇಶದಂತೆ ಸಂಹರಿಸಲ್ಪಟ್ಟನು. ಜರಾಸಂಧ ವಧಾ ಪ್ರಸಂಗ, **ಸಂಗರದಿ ಶೃಗಾಲನ** = ಮಾಗಧನ ವದಾ ನಂತರ, ಗೋಮಂತ ಪರ್ವತದ ತಪ್ಪಲಲ್ಲಿದ್ದ ಕರವೀರ ಪುರವನ್ನು ಆಳುತ್ತಿದ್ದ, **ಶೃಗಾಲ ವಾಸುದೇವನೆಂಬ** = ದುರ್ಮಾರ್ಗಿಯನ್ನು ಶ್ರೀ ರಾಮಕೃಷ್ಣರು ಎದುರಿಸಿದರು. ಸಿಟ್ಟಿನಿಂದ ಮೇಲೇರಿ ಬರುತ್ತಿದ್ದ ಶೃಗಾಲನನ್ನು ಸಿಂಹ ವಿಕ್ರಮನಾದ ಶ್ರೀ ಕೃಷ್ಣನು ಚಕ್ರದಿಂದ ಸಂಹರಿಸಿದನು.

**ನರಸಿಂಹನೆ ನೀ** = ಕಂಭವನ್ನು ಸೀಳಿಕೊಂಡು ಬಂದ ನೃಹರಿ ರೂಪೀ ಶ್ರೀ ಹರಿಯು ದುರುಳ ಹಿರಣ್ಯ ಕಶಿಪುವಿನ ಉದರವನ್ನು ಸೀಳಿ, ಬಾಲ ಪ್ರಹ್ಲಾದನನ್ನು ಸಂರಕ್ಷಿಸಿದಂತೆ, ಶೃಗಾಲ ವಾಸುದೇವನನ್ನು ಚಕ್ರಾಯುಧ ದಿಂದ ಸೀಳಿ, ಲೋಕಪೀಡಕನಾಗಿದ್ದ ಮಹಾ ಪಾಪಿಯನ್ನು ಸಂಹರಿಸಿದನು ಶ್ರೀ ನರಸಿಂಹಾಭಿನ್ನ ಶ್ರೀ ಕೃಷ್ಣನು !.

**ಅಮಲ ಮುಚುಕುಂಡಲಿನಿಂದ** = **ಮುಚುಕುಂದನು**-ಸೂರ್ಯವಂಶದ ಮಾಂಧಾತರಾಜನ ಮಗ. ಅಂಬರೀಷ ಮತ್ತು ಪುರುಕುತ್ಸರು ಇವನಸಹೋದರರು ಸೌಭರಿ ಮುನಿಯ 50 ಮಂದಿ ಪತ್ನಿಯರು ಮುಚುಕುಂದನ ಸಹೋದರಿಯರು. ಕಾಲಯವನನೆಂಬ ಮಹಾದೈತ್ಯನನ್ನು ಮುಚು ಕುಂದನು

ಸಂಹರಿಸಿದನು. ವಿಷ್ಣುಭಕ್ತನು. ಶ್ರೀ ಕೃಷ್ಣನಿಗೆ ಅತ್ಯಂತ ಪ್ರೀತಿಯ ಭಕ್ತನು.

**ಕಾಲಯುವನನ = ಕಾಲಯುವನನು** ಯಾದವರ ಪುರೋಹಿತನಾದ ಗರ್ಗ ಮಹರ್ಷಿಯ ಪುತ್ರನು. ಒಮ್ಮೆ ಯಾದವರು ಗರ್ಗ ಮುನಿಯನ್ನು ಪರಿಹಾಸ ಮಾಡಿದರು. ಆಗ ಗರ್ಗಮುನಿಗೆ ಕ್ರೋಧ ಬಂದು, ಯಾದವರನ್ನು ಧ್ವಂಸ ಮಾಡತಕ್ಕ ಮಗನು ಹುಟ್ಟಬೇಕೆಂದು ಶಿವನನ್ನು ಕುರಿತು ತಪಸ್ಸು ಮಾಡಿದನು. ಗರ್ಗನು ಒಬ್ಬ ಅಪ್ಸರಸ್ತ್ರೀಯಿಂದ ಒಬ್ಬ ಪುತ್ರನನ್ನು ಪಡೆದನು. ಅವನೇ ಕಾಲಯುವನನು ಶಿವನ ವರಬಲದಿಂದ ಜನಿಸಿದ್ದ ಕಾಲಯುವನನು ಮಹಾಬಲ ಸಂಪನ್ನನಾಗಿದ್ದನು. ಯಾದವರನ್ನು ಪೀಡಿಸ ತೊಡಗಿದನು. ದ್ವಾರಕೆಯ ಮೇಲೆ ದಂಡೆತ್ತಿ ಹೋಗಿ, ಯಾದವರನ್ನು ತಲ್ಲಣ ಗೊಳಿಸಿದನು.

ಒಮ್ಮೆ ಶ್ರೀ ಕೃಷ್ಣನು ಕಾಲಯುವನನಿಗೆ ಸೋತವನಂತೆ ನಟಿಸಿ ಓಡಿ ಹೋಗಿ ಒಂದು ಗುಹೆಯಲ್ಲಿ ಅವಿತುಕೊಂಡನು. ಕಾಲಯುವನನು ಶ್ರೀ ಕೃಷ್ಣನನ್ನು ಹಿಂಬಾಲಿಸಿ, ಗುಹೆಯನ್ನು ಹೊಕ್ಕನು. ಆ ಗುಹೆಯಲ್ಲಿ ಮುಚುಕುಂದನೆಂಬ ವಿಷ್ಣುಭಕ್ತನು ಮಲಗಿದ್ದನು. ಕಾಲಯುವನನು ಮುಚುಕುಂದನನ್ನು ಶ್ರೀ ಕೃಷ್ಣನೆಂದೇ ಭಾವಿಸಿ, ಎಡಗಾಲಿನಿಂದ ಒದ್ದನು. ನಿದ್ರಾಭಂಗದಿಂದ ಮುಚುಕುಂದನು ಎಚ್ಚೆತ್ತನು ಕೋಪಗೊಂಡ ಮುಚುಕುಂದನು ಕ್ರೂರ ದೃಷ್ಟಿಯಿಂದ ಕಾಲಯುವನನ್ನು ನೋಡಿದನು. ಅವನ ದೃಷ್ಟಿ ಪಾತದಿಂದ ಕಾಲಯುವನನು ಸುಟ್ಟು ಬೂದಿಯಾದನು.

**ರುಕ್ಮಿಣಿಗೆ ಪತಿಯಾದೆಲೆ** = ಭೀಷ್ಮಕ ರಾಜನ ಪುತ್ರಿ ಶ್ರೀ ರುಕ್ಮಿಣೀ ದೇವಿಯನ್ನು ವಿವಾಹವಾದ ಪ್ರಸಂಗ ವಿಶೇಷ, **ಅಚ್ಯುತ** = ಚತುರ್ವಿಧ ನಾಶರಹಿತವಾದ ನಿತ್ಯ ಶಾಶ್ವತಮೂರ್ತಿ ಶ್ರೀ ಕೃಷ್ಣ. ಶಿಶುಪಾಲ, ರುಕ್ಮಿಣೀ ಜರಾಸಂಧರು ಒಟ್ಟಿಗೇ ಮೇಲೇರಿ ಬಂದರೂ, ಶ್ರೀ ಕೃಷ್ಣನನ್ನು ಎದುರಿಸಲಾರದೇ ಹಿಮ್ಮೆಟ್ಟಿದರು, **ಪರಮೇಶ** ಸರ್ವೋತ್ತಮ ಮತ್ತು ಸಕಲ ಜಗತ್ತಿಗೂ ನಿಯಾಮಕ.

**ವರ್ಧಿಸಿ ಘಂಟಾಕರ್ಣನ** = ಘಂಟಾ ಕರ್ಣನೆಂಬ ದುಷ್ಟನನ್ನು ಸಂಗರದಲ್ಲಿ ಸಂಹರಿಸಿ ಲೋಕ ಭಾರವನ್ನಿಳುಹಿದನು ಶ್ರೀ ಕೃಷ್ಣ !, **ಮರ್ಧಿಸಿ ಪುಂಡ್ರಕಾಖ್ಯನ** ಪೌಂಡ್ರಕನೆಂಬುವನು ಕಾಶೀನಗರದ ಅರಸನು. ಹಿಂದೆ ಕಾಶೀರಾಜನು ತನ್ನ ಪುತ್ರಿಯಾದ-**ಸುತನು**–ಎಂಬುವಳನ್ನು ವಸುದೇವನಿಗಿತ್ತು ವಿವಾಹ ಮಾಡಿದನು.

ಸುತನುವಿನಲ್ಲಿ ವಸುದೇವನಿಂದ **ಪೌಂಡ್ರಕನೆಂಬ** ಬಲವೀರ್ಯತೇಜೋ ವೀರ್ಯಯುತನಾದ ಪುತ್ರನು ಜನಿಸಿದನು ಇದರಿಂದ ಪೌಂಡ್ರಕನು ಶ್ರೀ ಕೃಷ್ಣನಿಗೆ ಮಾವೆಯಲ್ಲಿ ಸಹೋದರನಾಗಬೇಕು. ವಸುದೇವಸುತನಾದ್ದರಿಂದ, ಪೌಂಡ್ರಕನನ್ನು ಪೌಂಡ್ರಕ ವಾಸುದೇವನೆಂದೇ ಕರೆಯುತ್ತಿದ್ದರು. ವಸುದೇವನು ಪೌಂಡ್ರಕನಿಗೆ ರಾಜ್ಯವನ್ನಿತ್ತು, ಮಧುರೆಗೆ ಬಂದು, ಅಲ್ಲಿ ಕಂಸನ ತಂಗಿ ದೇವಕಿಯನ್ನು ವಿವಾಹವಾದನು.

ನಂತರ ಕಂಸನು ದೇವಕೀ ವಸುದೇವರನ್ನು ಸೆರೆಯಲ್ಲಿರಿಸಿದನು. ಈ ಕಾರಣದಿಂದಾಗಿ ವಸುದೇವನು ಕಾಶೀನಗರಕ್ಕೆ ಹೋಗಲಾಗಲಿಲ್ಲ. ಪೌಂಡ್ರಕನು ಮಧುರೆಗೆ ಬಂದು, ತನ್ನ ತಮ್ಮಂದಿರನ್ನು ಕಾಣದೇ, ತಾಯಿಯ ಸವತಿಯ ಮಕ್ಕಳಾದ ಯಾದವರಲ್ಲಿ ವಿನಾಕಾರಣ ದ್ವೇಷ ಮಾಡಲಾರಂಭಿಸಿದನು. ಇದರಿಂದಲೇ ಶ್ರೀ ಕೃಷ್ಣನ ಪ್ರಾಬಲ್ಯವನ್ನು ಕಂಡು ಅರಿದ ಪೌಂಡ್ರಕನು ತಾನೇ ನಿಜವಾದ ವಾಸುದೇವನೆಂದೂ ತಾನೇ ವೇದ ಪ್ರತಿಪಾದ್ಯನಾದ ಪರಬ್ರಹ್ಮನೆಂದೂ ಮೆರೆಯುತ್ತಿದ್ದನು. ಮೂರ್ಖರಾದ ಅವನ ಆಪ್ತರು ಹೊಗಳಿ ಅಟ್ಟಕ್ಕೇರಿಸಿದರು.

ಮದೋನ್ಮತ್ತನಾದ ಪೌಂಡ್ರಕ ವಾಸುದೇವನು ತಾನು ಒಂದು ಗೂಂಟೆಯನ್ನೇ ಗರುಡನನ್ನಾಗಿ ಮಾಡಿಕೊಂಡು, ಕೃತಕ ಶಂಖ ಚಕ್ರಾಯುಧಗಳನ್ನು ಧರಿಸಿ ಬೆರಣಿಯ ಕೆಂಡದಿಂದ ತನ್ನ ಎದೆಯನ್ನು ಸುಟ್ಟುಕೊಂಡು, ಶ್ರೀ ವತ್ಸ ಚಿಹ್ನೆಯೆಂದು ಪ್ರದರ್ಶಿಸುತ್ತಾ, ಕೌಸ್ತುಭ ಮಕರ ಕುಂಡಲ ವನಮಾಲಾ ಪೀತಾಂಬರಗಳನ್ನು ಕೃತಕವಾಗಿ ತೊಟ್ಟು, ಕೃಷ್ಣ

ನನ್ನು ಯುದ್ಧದಲ್ಲಿ ಎದುರಿಸಿ ನಿಂತನು. ಆಗ ಚಕ್ರಪಾಣಿಯಾದ ಶ್ರೀ ಕೃಷ್ಣನು ತನ್ನ ಚಕ್ರದಿಂದ ಪೌಂಡ್ರಕನ ಶಿರವನ್ನು ಕತ್ತರಿಸಿ ಅದನ್ನು ಕಾಶೀ ನಗರ ಮಹಾ ದ್ವಾರದ ಮುಂದೆ ಬೀಳುವಂತೆ ಮಾಡಿದನು.

**ಸತ್ಯಭಾಮಾ ದ್ಯರನಾಳಿದ** = ಸತ್ರಾಜಿತನ ಪುತ್ರಿಯಾದ ಸತ್ಯಭಾಮಾ ದೇವಿಯನ್ನು ವಿವಾಹವಾದನು, **ಹೃದ್ಮಮೂರ್ತಿ** = ಜೀವರ ಹೃತ್ಪದ್ಮದಲ್ಲಿ ಆವಾಸವಾಗಿರುವ ಮೂಲೇಶನಾಮಕ ಬಿಂಬಮೂರ್ತಿ ಶ್ರೀ ಹರಿ.

**ಮುರನರಕರ ಮುರನೆಂಬುವನು** = ಪರಾಕ್ರಮಶಾಲಿಯಾದ ದೈತ್ಯ ಅವನ ನಗರವು ಅಭೇದ್ಯವಾದ ಕೋಟೆ ಕೊತ್ತಲುಗಳಿಂದ ಸುರಕ್ಷಿತವಾಗಿತ್ತು. ದೇವೇಂದ್ರನಿಂದ ಪ್ರಾರ್ಥ್ಯಮಾನನಾಗಿ ಶ್ರೀ ಕೃಷ್ಣನು ಮುರಾಸುರನ ಕೋಟೆ ಯನ್ನು ಮುತ್ತಿದನು. ಗಿರಿದುರ್ಗವನ್ನು ಗಡಿಯಿಂದ ಮುರಿದನು ಶಸ್ತ್ರ ದುರ್ಗವನ್ನು ಬಾಣಗಳಿಂದ ತುಂಡರಿಸಿದನು.

ಮುರಪಾಶವನ್ನು ಚಕ್ರದಿಂದ ಭೇದಿಸಿದನು ಭೀಕರವಾಗಿ ಶಂಖ ಧ್ವನಿ ಗೈದನು. ಆಗ ಪಂಚ ಶಿರಸ್ಕನಾದ ಮುರಾಸುರನು ಪ್ರಳಯಕಾಲದ ರುದ್ರನಂತೆ ಆರ್ಭಟಿಸುತ್ತಾ ಶೂಲವನ್ನೆತ್ತಿ ಗರುಡನನ್ನು ಪ್ರಹರಿಸಿದನು ಮುರಾಸುರನು ಎಸೆದ ಸಕಲ ಅಸ್ತ್ರಗಳನ್ನು ಶ್ರೀ ಕೃಷ್ಣನು ಲೀಲಾಜಾಲವಾಗಿ ಕತ್ತರಿಸಿ ಕೆಡವಿದನು. ಚಕ್ರ ಪ್ರಯೋಗದಿಂದ ಆ ದುಷ್ಟ ದೈತ್ಯನ ಶಿರವನ್ನು ಕತ್ತರಿಸಿದನು. ಮುರಾಸುರನು ನೀರಿನಲ್ಲಿ ಬಿದ್ದು ಮೃತನಾದನು.

**ನರಕಾಸುರನು** = ಪ್ರಾಗ್ಜ್ಯೋತಿಷಪುರದ ಅರಸನು. ಜರಾಸಂಧನ ಪರಮಮಿತ್ರ ಜರಾಸಂಧನು ಅನೇಕ ರಾಜಕುಮಾರರನ್ನು ಬಂಧಿಸಿ, ಸೆರೆ ಯಲ್ಲಿಟ್ಟಿದ್ದನು. ಒಂದು ದಿನ, ಅವರನ್ನೆಲ್ಲಾ ನರ ಮೇಧ ಮಾಡಿ ಸಂಹ ರಿಸಬೇಕೆಂದು ಯೋಚನೆ ಮಾಡಿದ್ದ ಪರಮ ದುರುಳನವನು. ನರಕಾಸು ರನು 16,100 ಮಂದಿ ಕನ್ಯೆಯರನ್ನು ಬಂಧನದಲ್ಲಿಟ್ಟು ಅವರ ಕನ್ಯತ್ವವನ್ನು ಸೂರೆಗೊಳ್ಳಬೇಕೆಂದು ಹವಣಿಸಿದ್ದನು.

ರಾಜಕುಮಾರರ ಹಾಗೂ ಕನ್ಯೆಯರ ಪ್ರಾರ್ಥನೆಯನ್ನು ಆಲಿಸಿ, ಪರಮ ದಯಾಳುವಾದ ಶ್ರೀ ಕೃಷ್ಣನು ಭೀಮಸೇನನ ದ್ವಾರಾ ಜರಾಸಂಧನನ್ನು ಸಂಹರಿಸಿ, ರಾಜ ಪುತ್ರರನ್ನು ಬಿಡುಗಡೆ ಮಾಡಿದನು. ತಾನೇ ನರಕಾಸುರನನ್ನು ಹನನಗೈದು, ಸೆರೆಯಲ್ಲಿದ್ದ 16,100 ಮಂದಿ ಕನ್ಯಾಮಣಿಗಳನ್ನು ಲೋಕಾಪವಾದ ಬಾರದಂತೆ ತಾನೇ ವಿವಾಹ ಮಾಡಿಕೊಂಡನು.

**ದಂತ ವಕ್ರ**=ವೃದ್ಧ ಶರ್ಮನ ಪುತ್ರ. ವಸುದೇವನ ಸೋದರಿಯರಲ್ಲಿ ಒಬ್ಬಳಾದ ಶ್ರುತ ದೇವಿಯಲ್ಲಿ ಜನಿಸಿದವ. ಶಿಶುಪಾಲ, ಸಾಲ್ವ, ಪೌಂಡ್ರಕ ವಾಸುದೇವ-ಇವರಿಗೆ ಆಪ್ತಮಿತ್ರ. ರಾಜಸೂಯ ಯಾಗದಲ್ಲಿ ಶ್ರೀ ಕೃಷ್ಣನನ್ನು ನಾನಾ ಪರಿ ನಿಂದಿಸಿದ ಶಿಶುಪಾಲನು ಶ್ರೀ ಕೃಷ್ಣನ ಚಕ್ರಾಯುಧದಿಂದ ಹತನಾದ ನಂತರ, ಸಾಲ್ವನೂ ಮತ್ತು ದಂತವಕ್ರನೂ ದ್ವಾರಕೆಯ ಮೇಲೆ ದಂಡೆತ್ತಿ ಬಂದರು.

ಶ್ರೀ ಕೃಷ್ಣನು ತನ್ನ ಕೌಮೋದಕೀ-ಎಂಬ ಗದೆಯಿಂದ ದಂತವಕ್ರನ ಪಕ್ಷಕ್ಕೆ ಪೆಟ್ಟು ಹಾಕಲು, ರಕ್ತಕಾರಿ ದಂತವಕ್ರನು ಸತ್ತನು. **ಶಿಶುಪಾಲ**=ಚೇದೀ ರಾಜನು. ಶ್ರೀ ಕೃಷ್ಣನ ಬದ್ಧವೈರಿ ಜೀವದ್ವಯಾವೇಶವಿತ್ತು. ರಾಜಸೂಯ ಯಾಗದಲ್ಲಿ ಭೀಷ್ಮ, ಧರ್ಮಾದಿಗಳನ್ನು ಅವಹೇಳನ ಮಾಡಿದ ಶ್ರೀ ಕೃಷ್ಣನಿಗೆ ಸಲ್ಲಿಸಿದ ಅಗ್ರ ಪೂಜೆಯನ್ನು ಉಗ್ರವಾಗಿ ಪ್ರತಿಭಟಿಸಿದ ಕೊನೆಗೆ ಶ್ರೀ ಕೃಷ್ಣನ ಚಕ್ರಕ್ಕೆ ಆಹುತಿಯಾದ.

ಅವನಲ್ಲಿದ್ದ ಅಸುರನು ತಮೋ ಲೋಕವನ್ನು ಸೇರಿದನು. ವಿಷ್ಣು ಪಾರ್ಷದನಾದ ಜಯನು ಶ್ರೀ ಕೃಷ್ಣನ ಪಾದವನ್ನು ಸೇರಿದ, **ಬಾಣವನು**=ಬಲಿಚಕ್ರವರ್ತಿಯ ಪುತ್ರ. ಅವನ ಸಾಸಿರ ತೋಳುಗಳನ್ನು ಶ್ರೀ ಕೃಷ್ಣನು ಕತ್ತರಿಸಿದ.

**ಹರಗಾಗಿ ಸ್ತ್ರೀಯಾಗಿ**=ಶ್ರೀ ರುದ್ರದೇವರ ಪ್ರಾರ್ಥನೆಯಂತೆ ಸುಂದರ ಮೋಹಿನೀ ರೂಪವನ್ನು ತಾಳಿ, ಭಸ್ಮಾಸುರನನ್ನು ಮೋಹಿಸಿ,

ಅವನ ಕೈಗಳನ್ನೇ ಅವನ ಶಿರದ ಮೇಲಿಡುವಂತೆ ಮಾಡಿ, ಸಂಹರಿಸಿದ ಪ್ರಸಂಗ, **ಭೃಗುವಿಗೆ ಒಲಿದು** = ಜರಾನಾಮಕ ಭೃಗುವಿಗೆ ಒಲಿದು ಅವನು ಪ್ರಯೋಗಿಸಿದ ಬಾಣದಿಂದಲೇ ದೇಹ ಪರಿತ್ಯಾಗ ಮಾಡಿದವನಂತೆ ವಿಡಂಬನೆ ತೋರಿದನು, **ನರಗೆ ಸಾರಥಿ** = ರಣರಂಗದಲ್ಲಿ ಪಾರ್ಥನಿಗೆ ಸಾರಥಿಯಾಗಿ, ರಥದ ಕುದುರೆಗಳನ್ನು ನಡೆಸಿ, ಅರ್ಜುನನಿಗೆ ಗೀತೋಪದೇಶಗೈದು, ಅವನಿಗೆ ವಿಜಯವನ್ನು ದೊರಕಿಸಿಕೊಟ್ಟ ವಿಜಯಸಾರಥಿ ವೀರ !.

**ವಾಸುಕೀಶನಿಗೆ** = ವಾಸುಕಿಯ ಪ್ರಭುವಾದ ಆದಿಶೇಷನೂ ನಿನ್ನನ್ನು ಬಣ್ಣಿಸಲು ಅಸಾಧ್ಯ, **ವಾಸವನುತ** = ಇಂದ್ರನಿಂದ ಸಂಸ್ತುತ್ಯಮಾನನಾದ, **ವರ ವಾಸುದೇವ** = ಸರ್ವೋತ್ತಮನಾದ ಶ್ರೀ ವಾಸುದೇವನಾಮಕನೇ, **ಖಾದ್ರಿ ಪುರೀಶ ನೃಸಿಂಹನೇ** = ಖಾದ್ರಿ ಪುರಿಯ ಶ್ರೀ ನರಸಿಂಹ ದೇವರಿಗೆ ಅರ್ಪಿಸಿದ್ದಾನೆ ವರಕವಿ ತಿಪ್ಪಣಾರ್ಯ.



**೫೬**

**(ಅಂಕಿತ–ಶ್ರೀ ಕೃಷ್ಣ-ವ್ಯಾಸರಾಜರ ಕೃತಿ)**

**ರಾಗ–ನಾಟಿ** **ಅಟ್ಟತಾಳ**

ಶರಣು ಶರಣು ॥ ॥ಪ॥

ಶರಣು ಮತ್ಸ್ಯ ಕೂರ್ಮ ವರಾಹ
ನರಹರಿ ವಾಮನ ಭಾರ್ಗವಾ
ಶರಣು ರಾಘವ ಕೃಷ್ಣ ಬೌದ್ಧ
ಶರಣು ಕಲ್ಕಿ ರೂಪಗೇ ॥ ॥೧॥

ಬಿಡೆ ನಾ ನಿನ್ನ ಕೇಶವ-ನಾರಾಯಣ ಮಾಧವಾ
ಅಂಬುಜಾಕ್ಷ ಗೋವಿಂದ ವಿಷ್ಣು-ಸಂಭ್ರಮದಿ ಮಧುಸೂದನಾ ॥ ॥೨॥

ಕರುಣದಲಿ ರಕ್ಷಿಸು ತ್ರಿವಿಕ್ರಮ-ಕಲಿತ ವಾಮನ ಶ್ರೀಧರಾ
ಪರಮಪಾವನ ಹೃಷೀಕೇಶ-ಪದ್ಮನಾಭ ದಾಮೋದರಾ ॥ ॥೩॥

ವಾಸವಾರ್ಚಿತ ಸಂಕರ್ಷಣ–ವಾಸುದೇವ ಪ್ರದ್ಯುಮ್ನನೆ
ಶ್ರೀಶ ಅನಿರುದ್ಧ ಪುರುಷೋತ್ತಮ-ನೀ ಸಲಹುವುದು ಅಧೋಕ್ಷಜಾ ॥ ॥೪॥

ಕೃತಿಗೆ ಗೋಚರ ನಾರಸಿಂಹನೇ–ಅಚ್ಯುತ ಜನಾರ್ದನ
ಉಪೇಂದ್ರನೇ-ಚತುರ್ವಿಂಶತಿ ನಾಮದಲಿ ಚತುರ ಹರಿ
ಶ್ರೀ ಕೃಷ್ಣನೇ ॥ ॥೫॥

**ಅರ್ಥವಿವರಣೆ :**

1) ಶ್ರೀ ಕೃಷ್ಣಾಂಕಿತದಲ್ಲಿ ಕೀರ್ತನ ಸಾಹಿತ್ಯವನ್ನು ರಚಿಸಿದ ಶ್ರೀ ವ್ಯಾಸರಾಜ ಗುರುಸಾರ್ವಭೌಮರ ಸುಂದರ ಕೃತಿ ಇದು. ಈ ಕೃತಿಯಲ್ಲಿ ಶ್ರೀ ಪರಮಾತ್ಮನ ಕೇಶವಾದಿ ಹರಿ ಪರ್ಯಂತ-ಚತುರ್ವಿಂಶತಿ ಭಗವದ್ರೂಪ ಗಳನ್ನು ದಶಾವತಾರ ಸ್ತುತಿಯಿಂದ ಆರಂಭಿಸಿ ಸ್ತುತಿಸಿರುತ್ತಾರೆ.

**ಭಾರ್ಗವಾ**＝ಭೃಗು ಕುಲೋತ್ಪನ್ನನಾದ ಪರಶುರಾಮ (ಜಮದಗ್ನಿ –ರೇಣುಕಾದೇವಿಯರ ಪುತ್ರ-ಭಾರ್ಗವರಾಮ), **ಅಂಬುಜಾಕ್ಷ**＝ಕಮಲ ಪುಷ್ಪದ ದಳದಂತೆ ವಿಸ್ತಾರವಾದ ಸುಂದರ ನೇತ್ರವುಳ್ಳ, **ಕಲಿತ**＝ಸರ್ವಜ್ಞ ನಾದ (ಕಲ್ಯಾರಿ ಅಸುರರ ಸಂಹಾರಿ), **ವಾಸವಾರ್ಚಿತ**＝ಇಂದ್ರನಿಂದ ಪೂಜ್ಯನಾದವ (ಉಪೇಂದ್ರನಾಮಕ ಪರಮಾತ್ಮ), **ಕೃತಿಗೆ ಗೋಚರ**＝ ಭಕ್ತರ ಸತ್ಸಾಧನೆಗೆ ವಿಷಯನಾದ ಒಂದೊರ್ಥ. ಕೃತಿ-ಎಂದರೆ ಬಾಲಕ ಪ್ರಹ್ಲಾದ ರಾಜರ ಸ್ತುತಿ. ಅವರ ಸ್ತುತಿಗೆ ಮೆಚ್ಚಿ ಪ್ರಹ್ಲಾದರ ವಾಕ್ಯ ವನ್ನು ಸತ್ಯವಾಗಿಸಲು ಕಂಭದಿಂದ ಗೋಚರನಾದ ಶ್ರೀ ನರಸಿಂಹರೂಪ,

**ಚತುರ**=ನಿಪುಣ ಚತುರ್ವಿಂಶತಿ ತತ್ತ್ವಗಳಿಗೆ ಮುಖ್ಯ ನಿಯಾಮಕನಾದ ಸೃಷ್ಟಿ ಕಾರ್ಯದಲ್ಲಿ ನೈಪುಣ್ಯ ಸಂಪನ್ನನಾದ ಮೂಲ ಕಾರಣನಾದ ಶ್ರೀ ಪರಮಾತ್ಮ. ಇಲ್ಲಿ 24ನೆಯ ನಾಮ ಶ್ರೀ ಕೃಷ್ಣ ಇದೇ ಶ್ರೀ ವ್ಯಾಸರಾಜ ಗುರುಸಾರ್ವಭೌಮರ ಅಂಕಿತ. ಇವೆರಡರ ಸಮಂಜಸವಾದ ಹೊಂದಾಣಿಕೆ ಎಷ್ಟು ಔಚಿತ್ಯ ಪೂರ್ಣವಾಗಿದೆ !.



## ೫೭

## ಚತುರ್ವಿಂಶತಿನಾಮ–ಉದಯರಾಗ

### (ಪುರಂದರವಿಠ್ಠಲಾಂಕಿತ)

**ರಾಗ–ಭೂಪಾಳಿ** **ಆದಿತಾಳ**

**ಕೇಶವ** ಮೂರುತಿ ಏಳೇಳ್ಳೈ–ನಾರಾಯಣ ನೀನು ಏಳ್ಳೈ
ಮಾಧವ ಮೂರುತಿ ಏಳೇಳ್ಳೈ–ಗೋವಿಂದಾ ಬೆಳಗಾಯಿತು
ಏಳಯ್ಯಾ ॥ ॥೧॥

ವಿಷ್ಣು ಮೂರುತಿ ಏಳೇಳ್ಳೈ-ಮಧುಸೂದನ ನೀನು ಏಳ್ಳೈ
ತ್ರಿವಿಕ್ರಮ ಮೂರುತಿ ಏಳೇಳ್ಳೈ-ವಾಮನ ಬೆಳಗಾಯಿತು
ನೀನೇಳಯ್ಯ ॥ ॥೨॥

ಶ್ರೀಧರ ಮೂರುತಿ ಏಳೇಳ್ಳೈ–ಹೃಷೀಕೇಶ ನೀನು ಏಳ್ಳೈ
ಪದ್ಮನಾಭ ಮೂರುತಿ ಏಳೇಳ್ಳೈ-ದಾಮೋದರಾ-ಬೆಳಗಾಯಿತು ಏಳೋ ॥
॥೩॥

ಸಂಕರ್ಷಣ ಮೂರುತಿ ಏಳೇಳೈ-ವಾಸುದೇವಾ ನೀನು ಏಳೈ
ಪ್ರದ್ಯುಮ್ನ ಮೂರುತಿ ಏಳೇಳೈ-ಅನಿರುದ್ಧನೇ ಬೆಳಗಾಯಿತೇಳೊ ||
||೪||

ಪುರುಷೋತ್ತಮ ಮೂರುತಿ ಏಳೇಳೈ-ಅಧೋಕ್ಷಜನೇ ನೀನೇಳು
ನರಸಿಂಹ ಮೂರುತಿ ಏಳೇಳೈ-ಅಚ್ಯುತಾ-ನೀನೇಳು ಬೆಳಗಾಯಿತು || ||೫||

ಜನಾರ್ದನ ಮೂರುತಿ ಏಳೇಳೈ-ಉಪೇಂದ್ರನೇ-ಏಳೋ
ಶ್ರೀ ಹರಿ ಮೂರುತಿ ಏಳೇಳೈ-ಶ್ರೀ ಕೃಷ್ಣಾ ಬೆಳಗಾಯಿತೇಳೋ ||
||೬||

ಬೆಟ್ಟದ ವೆಂಕಟ ನೀನೇಳೈ-ಬೇಲೂರು ಚೆನ್ನಿಗ ನೀನೇಳೈ
ನಾಗಮಂಗಲದ ನರಸಿಂಹ ನೀನೇಳೈ-ಪುರಂದರವಿಠ್ಠಲ ನೀನೇಳೋ || ||೭||



**ಅರ್ಥವಿವರಣೆ :**

ದಾಸಶ್ರೇಷ್ಠ ಪುರಂದರ ಸುಂದರ ಸಾಹಿತ್ಯ ಕೃತಿ ಇದು, ಕರ್ನಾಟಕದ ಮಂಡ್ಯದ ಜಿಲ್ಲೆಯಲ್ಲಿರುವ **ನಾಗಮಂಗಲ**-ಎಂಬ ಕ್ಷೇತ್ರಕ್ಕೆ ಸಂಚಾರತ್ವೇನ ಆಗಮಿಸಿದ್ದಾರೆ-ಪುರಂದರ ದಾಸವರ್ಯರು. ಅಲ್ಲಿ ಸುಂದರ ಮಂಗಳ ವಿಗ್ರಹವಾದ ಶ್ರೀ ನರಸಿಂಹದೇವರ ದೇವಸ್ಥಾನವಿದೆ. ನಾಗಮಂಗಲವು ಉತ್ತಮ ಶಿಲ್ಪಿಗಳ ತವರೂರು ಎಂದು ಪ್ರಸಿದ್ಧಿಯಾಗಿದೆ.

ಲೋಹಗಳನ್ನು ಕರಗಿಸಿ, ಅತ್ಯುತ್ತಮವಾದ ಲೋಹ ಪ್ರತಿಮೆಗಳನ್ನು ತಯಾರಿಸುವ ಶಿಲ್ಪಿಗಳ ಸತ್ಪರಂಪರೆಯವರು ಈಗಲೂ ಇಲ್ಲಿದ್ದಾರೆ. ದಾಸ ರಾಯರು ಶ್ರೀ ನರಸಿಂಹದೇವರ ಮಂಗಳ ಮೂರ್ತಿಯನ್ನು ಬೆಳಗಿನ ಝಾವದಲ್ಲಿ ದರ್ಶನ ಮಾಡಿದ್ದಾರೆ. ಪ್ರತ್ಯಕ್ಷರೂಪದಲ್ಲಿ ತನ್ನ ಸಂದರ್ಶನ ಭಾಗ್ಯವನ್ನು ಕರುಣಿಸಿದ್ದಾನೆ-ಆ ಸರ್ವೋತ್ತಮ ದೇವತಾ ! ಉಷಃ ಕಾಲದ

ಶಾಂತ ವಾತಾವರಣದಲ್ಲಿ ಶ್ರೀ ದಾಸರಾಯರ ವದನಾರವಿಂದದಿಂದ ಮೂಡಿ ಬಂದ ಉದಯರಾಗದ ರೂಪುದಲ್ಲಿರುವ ಸಾಹಿತ್ಯ ಕೀರ್ತನವಿದು.

ಇದರಲ್ಲಿ ಶ್ರೀ ಲಕ್ಷ್ಮೀನರಸಿಂಹ ಸ್ವಾಮಿಯನ್ನು ಕೇಶವಾದಿ ಹರಿ ಪರ್ಯಂತ. ಚತುರ್ವಿಂಶತಿ ನಾಮ ರೂಪಗಳನ್ನು ವರ್ಣಿಸಿ ಕೊಂಡಾಡಿದ್ದಾರೆ.

**ಬೆಟ್ಟದ ವೆಂಕಟ**= ಸಪ್ತಗಿರಿ ನಿವಾಸಿಯಾದ ಶ್ರೀನಿವಾಸ, **ಬೇಲೂರು ಚೆನ್ನಿಗ**=ವೇಲಾಪುರದ ಚೆನ್ನಕೇಶವಮೂರ್ತಿ, **ನಾಗಮಂಗಲದ ನರಸಿಂಹ** = ನಾಗಮಂಗಲ ಕ್ಷೇತ್ರಸ್ಥವಾದ ಶ್ರೀ ನರಸಿಂಹಮೂರ್ತಿ. ಈ ಭಗವದ್ರೂಪಗಳು ಅಭೇಧ. ಶ್ರೀ ಹರಿಯ ಅವತಾರ-ರೂಪ-ಕ್ರಿಯಾದಿಗಳಲ್ಲಿ ಯಾವ ಭೇದವೂ ಇಲ್ಲ. ಸ್ವಗತ ಬೇಧ ವಿವರ್ಜಿತನೆಂಬ ತತ್ತ್ವವನ್ನು ಈ ಸುಂದರ ಉದಯರಾಗದ ಕೃತಿಯಲ್ಲಿ ಎತ್ತಿ ತೋರಿಸಿದ್ದಾರೆ. ಜ್ಞಾನಿವರೇಣ್ಯರಾದ ದಾಸರಾಯರು.



೫೮

**ಕೀರ್ತನೆ-೩೯**

**(ವೆಂಕಟವಿಠ್ಠಲಾಂಕಿತ)**

**ರಾಗ–ಕಾನಡ** **ಆದಿತಾಳ**

ಅರಿಯಲೋ ಹರಿಪಾದ ಸರಸಾ
ಹರಿಯನ್ನು ಸ್ಮರಿಸಲೋ ಮನಸಾ ॥ ॥ಪ॥

ಗುರುಗಳ ಅಡಿಪಿಡಿ ಭಕುತಿಯ ಮಡಿಪಿಡಿ
ಕರಗಳ ಜೋಡಿಸಿ ಎರಗುತೀ ಮನದೀ
ಪರಿಪರಿ ಭಕ್ತಿಯ ಭರದಿಂದ ಕುಣಿಯುತ
ಕರೆದರೆ ಬರುವ ಮುರವೈರಿಯ ನೀನು || ||೧||

ತರಳ ಧ್ರುವಗೆ ಒಲಿದಾ
ದುರುಳ ರಾವಣನ್ನ ತರಿದಾ
ತರಳೆ ದ್ರೌಪದೀ ಮಾನ ಅಕ್ಷಯಗೊಳಿಸಿದಾ
ಗಿರಿಧರ ಬೆರಳ ಕೊಳಲ ಶ್ರೀ ಕೃಷ್ಣನ್ನಾ || ||೩||

ಕರುಣಾಕರ ಶ್ರೀ ರಮಣಾ
ಮರಣ ಸಮಯದಾಭರಣಾ
ದೊರೆರೊಡೆ ಅವ್ಯಾಹತ ದಿವ್ಯಸ್ಮರಣಾ
ಖರೆ ದೊರಕುವುದೋ ಚರಣ ವೆಂಕಟವಿಠ್ಠಲಾ || ||೩||

**ಅರ್ಥವಿವರಣೆ :**

ಪ್ರಸಕ್ತ ಕೀರ್ತನ ಸಾಹಿತ್ಯದ ಕರ್ತೃಗಳು–ಶ್ರೀ ಗುರು ಗೋವಿಂದ ವಿಠ್ಠಲ ದಾಸವರ್ಯರ ಶಿಷ್ಯರು. ಅವರಿಂದ "ವೆಂಕಟಾದ್ರಿವಿಠ್ಠಲ" ಎಂಬ ಅಂಕಿತೋಪದೇಶವನ್ನು ಪಡೆದು ಅನೇಕ ಕೀರ್ತನೆಗಳನ್ನು ರಚಿಸಿರುತ್ತಾರೆ. ಶ್ರೀಯುತರ ಜನ್ಮನಾಮ-ಹೆಚ್–ನಾರಾಯಣಸ್ವಾಮಿ 1917 ರಲ್ಲಿ ಶಿವ ಮೊಗ್ಗೆಯಲ್ಲಿ ಜನನ. ತಂದೆ ಸುಬ್ಬರಾವ್ ತಾಯಿ ಶ್ರೀಮತಿ ರುಕ್ಮಿಣೀ ಬಾಯಿ ವಿವಾಹವಾದನಂತರಬಡತನದಬೇಗೆಯನ್ನುಸಹಿಸಲಾರದೇತಿರುಪತೀ ಕ್ಷೇತ್ರಕ್ಕೆ ಹೋಗಿ ಅಲ್ಲಿ 40 ದಿನಗಳವರೆಗೆ ತಿಮ್ಮಪ್ಪನಿಗೆ ಗಂಧಲೇಪನ ಮಾಡಲು, ದೇವಸ್ಥಾನದಲ್ಲಿ ಗಂಧ ತೇಯುವ ಸೇವೆಯನ್ನು ಭಕ್ತಾದಿದರ ಗಳಿಂದ ಮಾಡಿದರು. ಶ್ರೀನಿವಾಸನ ಅನುಗ್ರಹವಾಯಿತು. ಗುರುಗಳಿಂದ ಅಂಕಿತೋಪದೇಶವನ್ನು ಪಡೆದು. ದಾಸದೀಕ್ಷಾ ದುರಂಧರರಾಗಿ ಯಾಯೀ ವಾರ ಮಾಡುತ್ತಾ ಹರಿಸೇವೆಯಲ್ಲಿ ತೊಡಗಿದ ಭಕ್ತಾಗ್ರೇಸರರು.

**ಅರಿಯೊಲೋ** = ಜೀವನಿಗೆ ಸಂಬೋಧನೆ ಜ್ಞಾನಾನುಸಂಧಾನ ಕ್ರಮದಿಂದ ತಿಳಿದುಕೋ, **ಹರಿಪಾದ ಸರಸಾ** = ಶ್ರೀ ಹರಿಯ ಪಾದ ಪದ್ಮಗಳು (ಸರಸಾ–ಸರಸಿಜ–ಕಮಲಪುಷ್ಪ), **ಮನಸಾ** = ಮನಸ್ಸಿನಿಂದ, ಶ್ರೀ ಹರಿಯ ವಿಷಯಗಳನ್ನು ಧ್ಯಾನಕ್ಕೆ ವಿಷಯವನ್ನಾಗಿ ಮಾಡಿ, ಶ್ರೀ ಭಗವಂತನ ಪಾದ ಪದ್ಮಗಳನ್ನು ಮನೋ ಮಂದಿರದಲ್ಲಿ ನಿಲ್ಲಿಸಿಕೊಂಡು, ಚರಣ ಧ್ಯಾನ ಮಾಡಬೇಕು. ಸಾಮಾನ್ಯಾಧಿಕಾರಿಗಳ ಚಿಂತನೆ-ಪಾದ ಸ್ಮರಣೆ ಮಾತ್ರ.

**ಗುರುಗಳ ಅಡಿಪಿಡಿ** = ಗುರುಗಳ ಅನುಗ್ರಹವಿಲ್ಲದೇ ಹರಿ ಪ್ರಸಾದವು ದೊರೆಯದು. (ಮುಕುಂದ ಭಕ್ತ್ಯೈ ಗುರು ಭಕ್ತಿ ಜಾಯ್ಯೈ:-ಮಧ್ವ ವಿಜಯ), **ಭಕುತಿಯ ಮಡಿಪಿಡಿ** = ಮಡಿ–ಎಂದರೆ ಚಿತ್ತನೈರ್ಮಲ್ಯವು. ಈ ಮಾನಸಿಕ ಶುದ್ಧಿಯು ನಿಷ್ಕಾಮವಾದ ಭಕ್ತಿಯಿಂದ ಮಾತ್ರ ದೊರೆಯುವುದು, **ಕರಗಳ ಜೋಡಿಸಿ** = ಶ್ರೀಶನ ಮುಂದೆ ಕರಗಳನ್ನು ಜೋಡಿಸುವ ಮುಗಿಯುವ ವಿಧಾನವು ದಾಸಸಾಂಕೇತ ಭಾವವು. ಶ್ರೀಶನು ಬಿಂಬ, ಜೀವರು ಆವನ ಪ್ರತಿಬಿಂಬಭೂತರು.

ಕೃತ ಪುಟಾಂಜಲಿಯು ಇದರ ಸಾಂಕೇತ, **ಎರಗುತೇ ಮನದಿ** = ನಮ್ಮ ಸರ್ವವನ್ನು ಶ್ರೀ ಹರಿಗೆ ಅರ್ಪಿಸಿ, ಮನಸಾ ವಂದಿಸುತ್ತಾ, (ಮನವನ್ನಿತ್ತರೆ ತನ್ನನೀವನು. ಶ್ರೀ ಹರಿಕಥಾಮೃತಸಾರ), **ಪರಿಪರಿ ಭಕ್ತಿಯ** = ನವವಿಧವಾದ ಭಕ್ತಿಗಳಿಂದ, **ಭರದಿಂದ ಕುಣಿಯುತ** = ಮೈ ಮರೆತು, ನೃತ್ಯ ಮಾಡುತ್ತಾ, ನೃತ್ಯವು ಆನಂದದ ಉದ್ರೇಕದ (ಭಕ್ತಿಯಿಂದ ಮಾಡಿದ) ಸಾಂಕೇತ.

**ಕರೆದರೆ ಬರುವ** = ಭಕ್ತಿ ಭಾವದಿಂದ ಆಹ್ವಾನಿಸಿದರೆ, ನಮ್ಮೆಡೆಗೆ ಧಾವಿಸಿ ಬಂದು ಸಂರಕ್ಷಿಸುವ ಕರುಣಾಳು, **ಮುರವೈರಿಯ ನೀನು** = ಮುರಾ-ಎಂಬ ದೈತ್ಯನನ್ನು ಸಂಹರಿಸಿದ ಶ್ರೀ ಕೃಷ್ಣ.

**ತರಳ ಧ್ರುವನಿಗೆ** = ಕೇವಲ ಬಾಲಕನಾದ ಧ್ರುವರಾಜರಿಗೆ, **ಓಲಿದಾ** = ಅವರ ನಿಷ್ಕಪಟವಾದ ಭಕ್ತಿಗೆ ಪ್ರಸನ್ನನಾಗಿ ಪ್ರತ್ಯಕ್ಷನಾದನು (ಧ್ರುವ ವರದನು), **ದುರುಳ ರಾವಣನಾ ತರಿದಾ** = ದುಷ್ಟ ದೈತ್ಯನಾದ ರಾವಣೇಶ್ವರನನ್ನು ಸಂಹರಿಸಿದ ಶ್ರೀ ರಾಮಚಂದ್ರ (ರಾವಣನಲ್ಲಿ ಜೀವದ್ವಯಾವೇಶ), **ತರುಣಿ ದ್ರೌಪದೀ** = ಅಬಲೆಯಾಗಿದ್ದ ದ್ರೌಪದಿಯ ಮಾನ ಸಂರಕ್ಷಣ ಮಾಡಿದ ಪಾಂಚಾಲಿ ವರದನಾದ ಪಾರ್ಥಸಖನು, **ಗಿರಿಧರ** = ಗೋವರ್ಧನ ಪರ್ವತವನ್ನು ಎತ್ತಿ, ಗೋಕುಲವನ್ನು ಸಂರಕ್ಷಿಸಿದ ಶ್ರೀ ಕೃಷ್ಣ, **ಬೆರಳ** = ಈ ಶಬ್ದ ಉಭಯಾರ್ಥ ಸಮನ್ವಯವು ಅಂದರೆ, ಶ್ರೀ ಕೃಷ್ಣನು ತನ್ನ ಕಿರು ಬೆರಳಿನಿಂದ ಅನಾಯಾಸವಾಗಿ ಗೋವರ್ಧನ ಪರ್ವತವನ್ನು ಎತ್ತಿ ಹಿಡಿದು. ಸಕಲ ಗೋಕುಲವನ್ನು ಸಂರಕ್ಷಿಸಿದನು (ಗಿರಿಧರ). ಅಂತೆಯೇ ಬೆರಳಿನ ಸಂಧಿಯಲ್ಲಿ ಕೊಳಲನ್ನು ಹಿಡಿದು, ತನ್ನ ತುಟಿಗೆ ಒತ್ತಿಕೊಂಡು ವೇಣುಗಾನ ಮಾಡಿದನು ವೇಣುಗಾನಲೋಲನು. ಇದರಿಂದ "ಬೆರಳು"- ಎಂಬ ಶಬ್ದವು ಉಭಯಾರ್ಥ ಅನ್ವಯವು.

**ಕರುಣಾಕರ** = ಸಜ್ಜನರ ಪಾಲಿಗೆ ಅತ್ಯಂತ ದಯಾಮಯನು. ಅವನ ಕೃಪಾ ದೃಷ್ಟಿಯಿಂದಲೇ ಸಜ್ಜನರ ಸಕಲ ದುರಿತಗಳ ಪರಿಹಾರವು, **ಶ್ರೀ ರಮಣಾ** = ಕಾಂತಿಸಂಪನ್ನಳಾದ, ನಿತ್ಯ ಯೌವ್ವನೆಯಾದ, ಸತ್ತ್ವಗುಣಾಭಿಮಾನಿಯಾದ ಶ್ರೀ ಲಕ್ಷ್ಮೀದೇವಿಯರಿಗೆ ಪತಿ ಹಾಗೂ ನಿಯಾಮಕನಾದ ಶ್ರೀ ಹರಿಯು, **ಮರಣ ಸಮಯದಾ ಭರಣ** = ಮರಣ ಕಾಲದಲ್ಲಿ ಶ್ರೀ ಹರಿಯ ಸ್ಮರಣೆಯೇ ರಕ್ಷಾಕವಚವು, **ದೊರೆತೊಡೆ** = ಮರಣ ಕಾಲದಲ್ಲಿ ಅವನೇ ತನ್ನ ಸ್ಮರಣ ಭಾಗ್ಯವನ್ನು ನೀಡಬೇಕು, **ಅವ್ಯಾಹತ ದಿವ್ಯ ಸ್ಮರಣಾ** = ಎಡೆ ತಡೆಯಿಲ್ಲದ (ನಿರಂತರವಾದ) ಫಲದಾಯಕವಾದ ಸ್ಮರಣೆಯು, **ಖರೆ ದೊರಕುವುದೋ** = ಶ್ರೀ ಹರಿಯ ಪಾದ ಪದ್ಮಗಳನ್ನು ದೃಢವಾಗಿ ನಂಬಿದವರಿಗೆ ಖಂಡಿತಾ ಶ್ರೀ ಹರಿಯು ತನ್ನ ಸ್ಮರಣ ಭಾಗ್ಯವನ್ನು ನೀಡುವನು.



## ೫೯

## ಕೀರ್ತನೆ-೪೦

### (ಅಂಕಿತ–ಗುರುಗೋಪಾಲವಿಠ್ಠಲ)

### (ಅಪರಾಧ ನಿವೇದನ)

**ರಾಗ–ಮುಖಾರಿ** **ಆದಿತಾಳ**

ಅನಘ ನಿನ್ನಂಘ್ರಿಯ ಸೇವೆ ಎನಗೆಂತು ದೊರೆವುದೋ || ||ಪ||

ಮನದ ದುರ್ವಿಷಯದ ಬಾಧೆಗೆ ಕೊನೆಗಾಣೆನೋ ಮಾಧವ || ||ಅ||

ನೋಡಬಾರದ ರೂಪವ ನೋಡಿ ನಯನ ಕಂಗೆಡಿಸಿತೋ
ಆಡಬಾರದ ನಾಡಿ ಜಿಹ್ವೆ ಅತಿ ತುಚ್ಛನ್ನ ಮಾಡಿತೋ
ಮಾಡಬಾರದ ಬಯಕೆಗಳಿಂದ ಮನ ಹೊಲೆಗಳಿಸಿತೋ
ನೋಡಲಿಲ್ಲ-ಪಾಡಲಿಲ್ಲ-ನಿನ್ನ ಧ್ಯಾನ ಮಾಡಲಿಲ್ಲ ಕ್ಷಣವು ನಾ || ||೧||

ಆರದು ಈ ತನು ಆರದೀಧನ ಆರು ಬಂಧುಗಳಾರಿಗೋ
ಆರಿಗೋಸುಗ ಪಡುವೆ ಧಾವತಿ ಆರಿಗೆ ಉಪಕಾರವೋ
ಘೋರವಾದ ಕ್ಷುಧೆ ತೃಷೆ ಮಮತಾಹಂಕಾರದಿ ಮುಳುಗಿಸಿ
ಗಾರು ಮಾಡುವೆ ಸೈ ಸೈ ನಿನ್ನುಪಕಾರವೆ-ಇದು ಮಾಧವ || ||೨||

ಹಿಂದಿನ ಕಾಲದಿ ಬಹು ಕಾಯ ಹೀಗಾಗಿ ಹೋಯಿತೋ
ಇಂದಿನ ದೇಹದ ವಿಚಾರ ಈ ವಿಧವಾಯಿತೋ
ಮುಂದೆ ನಿನ್ನ ಪದಸನ್ನಿಧಿ ಹೊಂದುವ ಬಗೆ ಯಾವುದೋ
ತಂದೆ ನಿನ್ನ ಬಂಧಕ ಶಕುತಿಯಿಂದಲೆ ಹೀಗಾಯಿತೋ || ||೩||

ಕ್ಷಣಭಂಗುರ ವಿಷಯೇಂದ್ರಿಯ ತನುಸ್ಥಿರವೆಂದರಿತು ನಾ
ವನಜ ಸಂಭವನ ಕಲ್ಪತನಕ ಯೋಚಿಸುವೆನೋ
ನೆನೆಸಲೊಮ್ಮೊಮ್ಮೆ ಸೋಜಿಗವೆನಗೆ ತೋರುತಲಿದೆ
ಮನದಾಸೆಗೆ ಕೊನೆಗಾಣದೆ ನಿನಗೆ ಮೊರೆಯಿಡಪವೆನೋ ||   ||೪||

ಕಾಲದೇಶ ವಿದ್ಯಾ ಪ್ರಕೃತಿ ಕಾರ್ಯಕಾರಣ ಸಂಸ್ಕೃತಿ
ಮೂಲಜಾಲಂಗಳಿಗೆ ಮುಖ್ಯ ಮೂಲನೆಂದು ನಂಬಿದೆ
ಆಲಸ್ಯ ಸಲ್ಲದೋ ಭವಕೆ ಆರಿಗೆ ಮೊರೆಯಿಡುವೆನೋ
ಪಾಲಿಸುವುದುಚಿತ **ಗುರುಗೋಪಾಲವಿಠ್ಠಲ** ವೆಂಕಟ ||   ||೫||

**ಅರ್ಥವಿವರಣೆ :**

ಶ್ರೀ ಗೋಪಾಲದಾಸರ ಮೂವರು ತಮ್ಮಂದಿರಲ್ಲಿ **ಸೀನಪ್ಪದಾಸರ** ಅಂಕಿತನಾಮ-**ಗುರುಗೋಪಾಲವಿಠ್ಠಲ** ಇವರ ಕೀರ್ತನೆಗಳೆಲ್ಲವೂ ಪ್ರಮೇಯ ಪೂರಿತವಾಗಿವೆ. ತಾತ್ತ್ವಿಕ ಅರ್ಥಗಳಿಂದ ಪರಿಪೂರ್ಣವಾಗಿವೆ. ಪ್ರಸಕ್ತ ಕೀರ್ತನ ಸಾಹಿತ್ಯವು, ದಾಸರಾಯರು ಶ್ರೀ ಹರಿಯಲ್ಲಿ ತಮ್ಮ ಅಪರಾಧ ಗಳನ್ನು ನಿವೇದಿಸಿಕೊಂಡಿರುತ್ತಾರೆ. ಇದೊಂದು **ಲೋಕನೀತಿ ಬೋಧಕ** ವಾದ ಕೀರ್ತನಸಾಹಿತ್ಯ.

**ಅನಘ** = **ಸರ್ವ** ಪಾಪವಿದೂರನಾದ ಶ್ರೀ ಹರಿ, ಶ್ರೀ ಪರಮಾತ್ಮನು ಸಕಲ ದೋಷಗಳಿಂದ ವಿದೂರನು. ಅನಂತಕಲ್ಯಾಣ ಗುಣಗಣ ಪರಿಪೂರ್ಣ ವಸ್ತು, **ನಿನ್ನಂಘ್ರಿಯ ಸೇವೆ** = ನಿರ್ದೋಷನಾದ ಶ್ರೀ ಹರಿಯೇ, ನಿನ್ನ ಪಾದಕಮಲಗಳ ಸೇವಾರೂಪವಾದ ಭಾಗ್ಯ ವಿಶೇಷವು, **ಎನಗೆ ಎಂತು ದೊರೆಯುವುದೋ** = ನನಗೆ ಯಾವಾಗ ಹೇಗೆ ದೊರೆಯುವುದು ?-ಎಂದು ಪ್ರಶ್ನಿಸುತ್ತಾರೆ–ಮೊರೆಯ ರೂಪದಲ್ಲಿ ದಾಸರಾಯರು.

**ಮನದ ದುರ್ವಿಷಯದ** = ಮನಸ್ಸಿನಿಂದ ಉತ್ಪನ್ನಗಳಾದ ದುರಭಿ ಲಾಷೆಗಳಿಂದ ಕಲುಷಿತನಾಗಿದ್ದೇನೆ, **ಬಾಧೆಗೆ ಕೊನೆಗಾಣೆನೋ** = ಮಾನ

ಸಿಕವಾದ ಈ ದುರ್ವಿಷಗಳ ನೋವಿಗೆ ಅರಿತವನ್ನು ನಾ ಕಾಣೆ. ಅದು ಅಷ್ಟು ಅಪಾರವಾಗಿದೆ, **ಮಾಧವ** = ಮಾ-ಜ್ಞಾನಪ್ರದಳಾದ ಶ್ರೀ ಲಕ್ಷ್ಮೀ ದೇವಿ ಅವಳಿಗೆ ಪತಿ ಮತ್ತು ನಿಯಾಮಕ-ಮಾಧವನಾಮಕ ಶ್ರೀ ಹರಿ, **ನೋಡದ ಬಾರದ ರೂಪವ ನೋಡಿ** = ರೂಪವನ್ನು ಗ್ರಹಿಸುವ ಇಂದ್ರಿಯವು ನೇತ್ರಗಳು. ಕಣ್ಣಿನಿಂದ ನೋಡಬಾರದ ಅನ್ಯಸ್ತ್ರೀಯರ ರೂಪ, ದುರ್ವಿಷಯ ಯುಕ್ತವಾದ ವಸ್ತುಗಳನ್ನು ನೋಡೋಣ-ಇತ್ಯಾದಿ ನಿಷಿದ್ಧ ರೂಪವಾದ ನೇತ್ರದ ವ್ಯಾಪಾರಗಳು.

**ನಯನ ಕಂಗೆಡಿಸಿತೋ** = ಭಗವಂತನ ಪ್ರತೀಕಗಳು, ಶಾಸ್ತ್ರಾವಲೋಕನ, ಭಗವದ್ಭಕ್ತರ ಸಂದರ್ಶನ, ಕ್ಷೇತ್ರಸ್ಥ ಮೂರ್ತಿಗಳ ಸಂದರ್ಶನ ಇತ್ಯಾದಿಗಳನ್ನು ನೋಡುವುದನ್ನು ಬಿಟ್ಟು, ದುರ್ವಿಷಯ ರೂಪಗಳನ್ನು ಗ್ರಹಿಸಿ, ನನ್ನ ನೇತ್ರದ್ವಯಗಳು ನನ್ನ ಮನಸ್ಸನ್ನು ಕಲುಷಿತಗೊಳಿಸಿವೆ.

**ಆಡಬಾರದನಾಡಿ ಜಿಹ್ವೆ** = ಜಿಹ್ವೆಯು ರಸನೇಂದ್ರಿಯವಾದ ಜ್ಞಾನೇಂದ್ರಿಯವೂ ಹೌದು. ಹಾಗೆಯೇ ವಾಗ್ರೂಪವಾದ ಕ್ರಿಯಾದಿಗಳನ್ನು ಮಾಡುವ ಮುಖ್ಯ ಕರ್ಮೇಂದ್ರಿಯವೂ ಖರೆ. ನಾಲಿಗೆಯಿಂದ ಆಡಬಾರದ ದುರ್ವಾಕ್ಯಗಳನ್ನು, ನಿಂದಾರೂಪವಾದ ವಾಕ್ಯಗಳನ್ನು ಆಡಿ, ನಾಲಿಗೆ ಕಲುಷಿತವಾಗಿದೆ, **ಅತಿ ತುಚ್ಛನ್ನ ಮಾಡಿತೋ** = ನಮ್ಮ ನಾಲಿಗೆಯಿಂದ ಬರುವ ವಾಗ್ರೂಪವಾದ ವಚನಗಳು ನಮ್ಮ ಹೃದಯದ ಸಂಸ್ಕೃತಿಯನ್ನು ತೋರಿಸುವವು.

ಭಗವಂತನ ಸ್ತೋತ್ರ, ಭಗವದ್ಭಕ್ತರ ಮಹಿಮಾವರ್ಣನಾ, ಸಚ್ಛಾಸ್ತ್ರಗಳ ಪಾಠ ಪ್ರವಚನಾದಿಗಳಿಗೆ ಮೀಸಲಾಗಿರುವ ನಾಲಿಗೆಯನ್ನು ಹರಿಬಿಟ್ಟು, ದುರ್ವಿಷಯದ ಮಾತುಗಳನ್ನಾಡಿ, ಸಜ್ಜನರ ದೃಷ್ಟಿಯಲ್ಲಿ ನನ್ನನ್ನು ಅತ್ಯಂತ ನೀಚನನ್ನಾಗಿ ಮಾಡಿದೆ, **ಮಾಡಬಾರದ ಬಯಕೆಗಳಿಂದ** = ನಮ್ಮ ಅಭಿಲಾಷೆಗಳು ಮೂಡುವುದು ಮನಸ್ಸಿನಲ್ಲಿ, ಮನಸ್ಸಿನಿಂದ ಮೂಡಿದ ಬಯಕೆಗಳು ಸದಭಿಲಾಷೆಗಳಾಗಿರಬೇಕು ಮಾಡಬಾರದ, ನಿಷಿದ್ಧ ರೂಪ

ವಾದ ದುರ್ವಿಷಯಗಳಲ್ಲಿ ಆಸಕ್ತವಾದ ಮನಸ್ಸಿನಿಂದ ದುಷ್ಟವಾದ ಬಯಕೆ ಗಳನ್ನು ಮಾಡಿದೆ.

**ಮನಹೊಲೆಗೆಳಿಸಿತೋ** = ದುರಭಿಲಾಷೆಗಳಿಂದ ನನ್ನ ಮನಸ್ಸ ತುಂಬಾ ಕಲುಷಿತವಾಗಿದೆ. ಭಗದ್ವಿಚಾರದ ಧ್ಯಾನ, ಮನನ, ನಿಧಿ ಧ್ಯಾಸ ನಾದಿಗಳಲ್ಲಿ ಮನಸ್ಸು ಯಾವಾಗಲೂ ತೊಡಗಿರಬೇಕು, **ನೋಡಲಿಲ್ಲ-ಪಾಡಲಿಲ್ಲ-ನಿನ್ನ ಧ್ಯಾನವನು ಮಾಡಲಿಲ್ಲ ಕ್ಷಣವೂ ನಾ ಅನಘ** = ನಿನ್ನ ದಿವ್ಯರೂಪ ವಿಶೇಷಗಳನ್ನು ಈ ನೇತ್ರಗಳಿಂದ ನೋಡಲಿಲ್ಲ. ನಾಲಿಗೆಯಿಂದ ನಿನ್ನ ಮಹಿಮಾ ವಿಶೇಷಗಳನ್ನು ಸ್ತೋತ್ರರೂಪವಾಗಿ ಪಾಡಿ, ಕೊಂಡಾಗ ಲಿಲ್ಲ. ಮನಸ್ಸಿನಿಂದ ನಿನ್ನ ಧ್ಯಾನಾದಿಗಳನ್ನು ಮಾಡಲಿಲ್ಲ-ಹೇ ಜಗತ್ಪ್ರಭು. ಒಂದು ಕ್ಷಣವಾದರೂ ನಿನ್ನ ವಿಷಯವಾಗಿ ಆಲೋಚಿಸಲಿಲ್ಲ.

ಅಂತಹ ಘೋರ ಅಪರಾಧಿನಾನು–ಎನ್ನುತ್ತಾರೆ -ದಾಸರಾಯರು, **ಆರದು ಈತನು** = ಪಾಂಚಭೌತಿಕವಾದ ಈ ದೇಹವು ಭಗವಂತನಿಂದ ಸತ್ಸಾಧನೆಗಾಗಿ ಕೊಡಲ್ಪಟ್ಟಿದೆ. ಈ ದೇಹವೇ ನಾನು-ನಾನೇ ಈ ದೇಹ-ಎಂಬ ದೇಹ ಜೀವಾತ್ಮಕವಾದ ದುರಭಿಮಾನದಿಂದ, ಅಹಂಕಾರ ಮಮ ಕಾರಗ್ರಸ್ತನಾಗಿದ್ದಾನೆ–ಜೀವ, **ಆರಧೀದನ** = ನಮ್ಮಿಂದ ಸಂಪಾದಿತ ದ್ರವ್ಯವು ನಮಗೆ ಸೇರಿದ್ದೇನು ? ಭಗವಂತನು ದಾನ ಧರ್ಮ ಮತ್ತು ಶರೀರ ಪೋಷಣೆಗಾಗಿ ದತ್ತವಾದ ಭಾಗ್ಯ ವಿಶೇಷ, **ಆರು ಬಂಧುಗಳು ಯಾರಿಗೋ** =ನಮಗೆ ಜನ್ಮ ದಾತರಾದ ಮಾತಾಪಿತೃಗಳು, ಕೈ ಹಿಡಿದ ಧರ್ಮಪತ್ನೀ, ತನ್ನಿಂದ ಜನಿತರಾದ ಪುತ್ರ ಪುತ್ರಿಯರು.

ದೇಹ ಸಂಬಂಧಿಗಳಾದ ನಾನಾ ಬಂಧು ಬಾಂಧವರ ಪರಿವಾರ-ಇವ ರೆಲ್ಲರೂ ಋಣಾನುಬಂಧದಿಂದ ನಮಗೆ ಸಂಬಂಧವನ್ನು ಹೊಂದಿದ್ದಾರೆ. ಆ ಅನುಬಂಧ ತೀರಿದ ಬಳಿಕ. ಅವರ್‍ಯಾರೋ, ಅವರಿಗೆ ನಾವ್ಯಾರೋ ?, **ಆರಿಗೋಸುಗ ಪಡುವೆ ಧಾವತಿ** = ಬಂಧು ವರ್ಗವನ್ನು ಪೋಷಿಸುವುದಕ್ಕಾಗಿ ವೃಥಾ ಧಾವತಿ ಪಟ್ಟುಗೊಂಡು ಈ ಸಂಸಾರ ಚಕ್ರದ ಸುಳಿಯಲ್ಲಿ ತೊಳ

ಲಾಡುತ್ತಿದ್ದಾನೆ-ಜೀವ, **ಆರಿಗೆ ಉಪಕಾರವೋ** = ಈ ವೃಥಾ ಧಾವತಿ ಯಿಂದ ಯಾರಿಗೆ ಉಪಕಾರವಾಗುವುದು ?, **ಘೋರವಾದ ಕ್ಷುಧೆ ತೃಷೆ** = ಸಹಿಸಲಶಕ್ಯಕವಾದ ಹಸಿವು ಬಾಯಾರಿಕೆಯಿಂದ ನಿತ್ಯವೂ ಬಳಲುತ್ತಾನೆ– ನಿರ್ವಿಣ್ಣನಾದ ಜೀವನು.

**ಮಮತಾಹಂಕಾರದಿ ಮುಳುಗಿಸಿ** = ನಾನು–ನನ್ನದು–ನನ್ನ-ಎಂಬ ಆತ್ಮಪ್ರತ್ಯಯರೂಪವಾದ ದುರಭಿಮಾನದಿಂದ ಕಟ್ಟಲ್ಪಟ್ಟು. ತಜ್ಜನ್ಯ ಸಂಸಾರ ಸಾಗರದಲ್ಲಿ ಮುಳುಗಿಸಿ, **ಗಾರು ಮಾಡದೆ** = ಈ ದುಸ್ತರವಾದ ಕ್ಲೇಶ ಸಾಗರದಿಂದ ದಾಟಿಸದೆ, **ಸೈ ಸೈ ನಿನ್ನುಪಕಾರವೇ ಇದು ಮಾಧವ** = ಎಲೈ ರಮಾ ರಮಣನೇ, ಹೀಗೆ ಮಾಡುವುದು ನಿನಗುಚಿತವೇ ? ಇದು ನಿನ್ನ ಮಹದುಪಕಾರವೇ-ಹೇ ದೇವಾ-ಎಂದು ಉದ್ಗಾರ ತೆಗಿದಿದ್ದಾರೆ ದಾಸ ರಾಯರು.

**ಹಿಂದಿನ ಕಾಲದಿ** ಹಿಂದೆ ಕಳೆದ ಜನ್ಮಗಳ ಅವಧಿಯಲ್ಲಿ, **ಬಹು ಕಾಯ ಹೀಗಾಗಿ ಹೋಯಿತೋ** = ನಾನಾ ಪ್ರಕಾರವಾಗಿ ಈ ಸಾಧನ ಶರೀರದ ಸ್ಥಿತಿ ಹೀಗಾಗಿ ವ್ಯರ್ಥವಾಗಿ ಹೋಯಿತು. ಏನೇನೂ ಸಾರ್ಥಕ ವಾಗಲಿಲ್ಲ, **ಇಂದಿನ ದೇಹದ ವಿಚಾರ** = ಆದರೆ ವರ್ತಮಾನ ಕಾಲದ ಈ ನನ್ನ ಸ್ಥಿತಿಯ ಗತಿ ಯೇನು ? ಹಿಂದಿನಂತೆಯೇ ನಿರರ್ಥಕವಾಗುತ್ತಿದೆ.

ಕಾಲ ಹರಣವಾಯಿತೇ ಹೊರತು, **ಸತ್ಸಾಧನೆಯಾಗಲಿಲ್ಲ, ಮುಂದೆ ನಿನ್ನಯ ಪದ** = ಮುಂದಿನ ಭವಿಷತ್ಕಾಲದ ವಿಚಾರ ನಿಶ್ಚಿತವಿಲ್ಲ. ಈ ದುರವಸ್ಥೆಯಲ್ಲಿ ನಿನ್ನ ಚರಣಾಂಭುಜ ಸಾನ್ನಿಧ್ಯವನ್ನು ನಾನು ಪಡೆಯುವು ದೆಂತು ?, **ತಂದೆ** = ಹೇ ಜಗಜ್ಜನಕನೇ, **ನಿನ್ನ ಬಂಧಕಶಕುತಿಯಿಂದಲೆ** = ನಿನ್ನ ಬಂಧಕಶಕ್ತಿ ಅನುಪಮ ಅದನ್ನು ಮೀರುವರಾರು ? ಸ್ವರೂಪ ದೇಹಕ್ಕೆ ಲಿಂಗೋಪಾದಾನದ ದ್ವಾರಾ, ಸಂಸಾರಾವಸ್ಥೆಗೆ ಜೀವರನ್ನು ತರುವುದೇ ಸೃಷ್ಟಿಯ ವ್ಯಾಪಾರವು. ಇದೇ ಭಗವಂತನ ಬಂಧಕಶಕ್ತಿಯು.

**ಕ್ಷಣ ಭಂಗುರ** = ನೀರಿನ ಮೇಲಿನ ಗುಳ್ಳೆಯಂತೆ ಅತ್ಯಂತ ಕ್ಷಣಿಕ ವಾಗಿವೆ-ವಿಷಯ ಸುಖಗಳು, **ವಿಷಯೇಂದ್ರಿಯ** - ಜ್ಞಾನೇಂದ್ರಿಯಗಳಿಗೆ ವಿಷಯಗಳು ಸನ್ನಿಕರ್ಷವಾದಾಗ (ಸಂಬಂಧಿಸಿದಾಗ), ಇಂದ್ರಿಯಗಳ ದ್ವಾರಾ ಆ ವಿಷಯಗಳು ಮನಸ್ಸನ್ನು ಮುಟ್ಟುವುವು. ಮನಸ್ಸು ಆ ವಿಷಯಗಳಲ್ಲಿ ಗ್ರಹಿಸಿ, ಅವುಗಳಲ್ಲಿಯೇ ಆಸಕ್ತವಾಗುವುದು. ಇಂತಹ ವಿಷಯ ಸುಖಗಳು ಕೇವಲ ಕ್ಷಣಿಕವಾದುವು.

ಗುಳ್ಳೆಗಳು ನೀರಿನ ಮೇಲೆ ಕಾಣಿಸಿಕೊಂಡು, ತಕ್ಷಣವೇ ಒಡೆದು ಮಾಯವಾಗುವಂತೆ, ವಿಷಯ ಸುಖೋಪ ಭೋಗಗಳು ಕ್ಷಣ ಭಂಗುರ, **ತನುಸ್ಥಿರವೆಂದರಿತು** = ನಮ್ಮ ಶರೀರವು ಅನಿತ್ಯ. ಅದು ಶಾಶ್ವತವೆಂದರಿತು, ಭ್ರಮನಿರಸನಗಳಿಂದ ನಾವು ಜೀವನದಲ್ಲಿ ವ್ಯವಹರಿಸುತ್ತಿರುತ್ತೇವೆ. ಜನನ ವಿದ್ದವಗೆ ಮರಣವು ಸಿದ್ಧ (ಜಾ ಮರ್ತುರ್ಧ್ರುವಂ ಮೃತ್ಯೋರ್ಧ್ರುವಂ-ಗೀತಾ ವಾಕ್ಯ), **ನಾ ವನಜ ಸಂಭವನ ಕಲ್ಪತನಕ ಯೋಚಿಸುವೆನೋ** = ನಮ್ಮ ಈ ಅನಿತ್ಯವಾದ ಪಾಂಚ ಭೌತಿಕವಾದ ಸ್ಥೂಲಶರೀರವು ಸ್ಥಿರವೆಂದು ನಾವು ತಿಳಿದಿದ್ದೇವೆ. ವನಜ ಸಂಭವ-ನೆಂದರೆ ಶ್ರೀ ಪರಮಾತ್ಮನ ನಾಭೀಕಮಲೋದ್ಭವರಾದ ಬ್ರಹ್ಮದೇವರು.

ನಾವು ಶಾಶ್ವತರಾಗಿರುತ್ತೇವೆ-ಎಂಬ ಭಾವನೆಯಿಂದ ಬ್ರಹ್ಮ ಕಲ್ಪ ಪರ್ಯಂತ ಅನೇಕ ಯೋಜನಾಕ್ರಮಗಳನ್ನು ಹಾಕಿಕೊಳ್ಳುತ್ತೇವೆ. ಆದರೆ ಕಾಲಮೃತ್ಯುವು ಯಾವಾಗಲಾದರೂ ಒದಗಿ, ಮೇಲೆರಗಿ ನಮ್ಮ ಕಲ್ಪನೆಗಳನ್ನೆಲ್ಲಾ ಮಣ್ಣು ಗೂಡಿಸುವುದು. ಈ ವಿಚಾರದಲ್ಲಿ ಎಚ್ಚರಿಕೆಯಿಂದಿರಬೇಕು-ಎನ್ನುತ್ತಾರೆ-ದಾಸರಾಯರು, **ನೆನೆಸಲು ಒಮ್ಮೊಮ್ಮೆ** = ಈ ವಿಷಯವನ್ನು ಮನಸ್ಸಿನಲ್ಲಿ ನೆನೆಸಿದ್ದೇ ಆದರೆ, ಅದು ಅತ್ಯಂತ ಆಶ್ಚರ್ಯಕರವಾದ ಸಂಗತಿ ಎನಿಸುತ್ತದೆ (**ಸೋಜಿಗವೆನಗೆ ತೋರುತಲಿದೆ**), **ಮನದಾಸೆಗೆ ಕೊನೆಗಾಣಿಸೋ** = ನನ್ನ ಮನಸ್ಸಿನ ಅಭಿಲಾಷೆಗಳಿಗೆ ಅಂತ್ಯವೇ ಇಲ್ಲ. ಅದು ಕಲ್ಪಿಸಿಕೊಂಡಷ್ಟು ಅಧಿಕವಾಗುತ್ತಲೇ ಬೆಳೆಯುತ್ತಾ ಹೋಗುವುದು.

ಗಗನ ಸ್ಪರ್ಶಿಯಾಗಿದೆ-ಮಾನವನ ಆಸೆಗಳು, **ನಿನಗೆ ಮೊರೆಯಿಡು ವೆನೋ** = ಇಂತಹ ನಿರರ್ಥಕವಾದ, ಸತ್ಸಾಧನೆಗೆ ಪ್ರತಿಬಂಧಕವಾದ ಆಸೆ ಗಳನ್ನು ಪರಿಹರಿಸಿ, ನನ್ನ ಮನಸ್ಸನ್ನು ನಿನ್ನ ಪಾದಾರವಿಂದಗಳಲ್ಲಿ ನೆಲೆಸು ವಂತೆ ಮಾಡೆಂದು, ದಾಸರಾಯರು ಶ್ರೀ ಹರಿಯಲ್ಲಿ ಮೊರೆಯಿಡುತ್ತಾರೆ.

**ಕಾಲ** = ಪ್ರವಾಹತೋ ನಿತ್ಯವಾದ ಕಾಲಚಕ್ರವು, **ದೇಶ** = ಸರ್ವತ್ರ ವ್ಯಾಪ್ತವಾದ ಪ್ರದೇಶವು ಅದಕ್ಕೆ ತಕ್ಕಂತೆ ಸಂದರ್ಭೋಚಿತವಾದ ಪ್ರಸಂಗ ವಿಶೇಷಗಳು, **ವಿದ್ಯಾ** = ಜ್ಞಾನರೂಪವಾದ ಸಾಧನೆ, **ಪ್ರಕೃತಿ** = ಜಗತ್ತಿನ ಸೃಷ್ಟಿಗೆ ಉಪಾದಾನ ಕಾರಣವಾದ ತ್ರಿಗುಣಾತ್ಮಕವಾದ ಪ್ರಕೃತಿ, **ಕಾರ್ಯ** = ಪರಿದೃಶ್ಯ ಮಾನವಾದ ಕಾರ್ಯರೂಪವಾದ ಈ ಜಗತ್ತು, **ಕಾರಣ** = ಕಾರ್ಯಕ್ಕೆ ಹೇತುವಾದ ಕಾರಣ (ಪ್ರಕೃತಿ-ಉಪಾದಾನ ಕಾರಣ ಜಗತ್ತು-ಕಾರ್ಯ ಹೀಗೆ), **ಸಂಸೃತಿ** = ಕರ್ಮಬಂಧನ ರೂಪದಲ್ಲಿರುವ ಈ ಸಂಸಾ ರಾವಸ್ಥೆ, **ಮೂಲ ಜಾಲಂಗಳಿಗೆ** = ಇತ್ಯಾದಿ ಮೂಲಭೂತವಾದ ಕಾರಣ ಮತ್ತು ತದುತ್ಪನ್ನವಾದ ಕಾರ್ಯ ವಸ್ತುಗಳ ಸಮೂಹಂಗಳಿಗೆ, **ಮುಖ್ಯ ಮೂಲನೆಂದು** = ಸರ್ವಶಕ್ತನಾದ ಶ್ರೀ ಹರಿಯೇ ನೀನೇ ಮೂಲ ಹಾಗೂ ಮುಖ್ಯ ಕಾರಣನೆಂದು (ಶ್ರೀ ಹರಿಯೇ ಪ್ರಧಾನ ಕಾರಣನು-ನಿಮಿತ್ತ ಕಾರ ಣನು), **ನಂಬಿದೆ** = ಈ ರೀತಿ ದೃಢವಾದ ನಂಬಿಕೆಯಿಂದ ಅರಿತಿದ್ದೇನೆ, **ಆಲಸ್ಯ ಸಲ್ಲದೋ** = ಆಲಸ್ಯಭಾವ (ಉದಾಸೀನ ಭಾವ) ನಿನಗೆ ಸಲ್ಲದು.

**ಆರಿಗೆ ಮೊರೆಯಿಡುವೆನೋ** = ಸರ್ವೋತ್ತಮನಾದ ಸರ್ವ ಕಾಮಿ ತಾರ್ಥ ಪ್ರದಾಯಕನಾದ ನಿನ್ನನ್ನು ಬಿಟ್ಟು ಬೇರೆ ಇನ್ಯಾವ ದೇವತೆಗಳಿಗೂ ಮೊರೆ ಇಡುವುದಿಲ್ಲ (ಶ್ರೀ ಹರಿಯೇ ಸರ್ವೋತ್ತಮನೆಂಬ ದೃಢವಾದ ಭಾವನೆ), **ಪಾಲಿಸುವುದು ಉಚಿತ** = ಇಂತಹ ಪರಿಸ್ಥಿತಿಯ ಪರಿಸರದಲ್ಲಿ ಸಿಲುಕಿರುವ ನನ್ನನ್ನು ನೀನು ಸಂರಕ್ಷಿಸಿ, ಉದ್ಧಾರ ಮಾಡುವುದು-ಕರ್ಮ ವಿಮೋಚಕನಾದ ನಿನಗೆ ಉಚಿತವಾದದ್ದು, **ಗುರುಗೋಪಾಲವಿಠ್ಠಲ ವೆಂಕಟ** = ಗುರುಗೋಪಾಲ ವಿಠ್ಠಲಾಂಕಿತನಾದ ತಿರುಪತಿಯ ಶ್ರೀ ವೆಂಕ

ಟೀಶನೇ, ನನ್ನನ್ನು ಸಲಹು–ಉದ್ಧರಿಸೆಂದು ಹೃತ್ಪೂರ್ವಕವಾಗಿ ಶ್ರೀ ಹರಿಯಲ್ಲಿ ಮೊರೆ ಇಡುತ್ತಾರೆ-ದಾಸರಾಯರು.



೬೦

**ಕೀರ್ತನ–೪೧**

**(ಅಂಕಿತ-ಶ್ರೀಕೃಷ್ಣ-ಶ್ರೀ ವ್ಯಾಸರಾಜ ಯತಿ ಕೃತ)**

**ರಾಗ–ಮೋಹನ** **ಆದಿತಾಳ**

**ಅಂತರಂಗದಲಿ ಹರಿಯ ಕಾಣದವನೆ**
ಹುಟ್ಟು ಕುರುಡನೋ || ||ಪ||

ಸಂತತ ಸಿರಿಕೃಷ್ಣ ಚರಿತೆ ಕೇಳದವನೆ
ಜಡಮತಿ ಕಿವುಡನೋ ಎಂದೆಂದಿಗೂ || ||ಅ||

ಹರುಷದಿಂದಲಿ ನರಹರಿಯ ಪೂಜೆಯ
ಮಾಡದವನೆ ಕೈ ಮುರಿದವನೊ
ಕುರುವರ ಸೂತನ ಮುಂದೆ ಕೃಷ್ಣಾ ಎಂದು
ಕುಣಿಯದವನೆ ಕುಂಟನೋ
ನರಹರಿ ಚರಣೋದಕ ಧರಿಸದ ಶಿರ
ನಾಯುಂಡ ಹೆಂಚು ಕಾಣೋ
ಸುರವರ ಕೃಷ್ಣ ಪ್ರಸಾದವಿಲ್ಲದ ಊಟ
ಸೂಕರ ಭೋಜನವೂ ಎಂದೆಂದಿಗೂ || ||೧||

ಅಮರೇಶ ಕೃಷ್ಣಗರ್ಪಿತವಿಲ್ಲದಾ ಕರ್ಮ
　　ಅಸತಿಯು ವ್ರತನೇಮವೊ
ರಮೆಯರಸಗೆ ಪ್ರೀತಿಯಿಲ್ಲದ ವಿಕರಣೆ
　　ರಂಡೆಕೊರಳ ಸೂತ್ರವೊ
ಕಮಲನಾಭನ ಪಾಡಿ ಪೊಗಳದ ಸಂಗೀತ
　　ಗಾರ್ದಭ ರೋದನವೋ
ಮಮತೆಯಿಂದಲಿ ಕೇಶವಗೆ ನಮಸ್ಕಾರ
　　ಮಾಡದವನೆ ಮೃಗವೋ ಎಂದೆಂದಿಗೂ || ||೨||

ಜರೆಪುಟ್ಟು ಮರಣ ತೊಡೆವ ಸುಧೆಯು ಬಿಟ್ಟು
　　ಸುರೆಯು ಸೇವಿಸಬೇಡವೊ
ಸುರಧೇನುವಿರಲಾಗಿ ಸೂಕರ ಮೊಲೆ ಹಾಲು
　　ಕರೆದು ಕುಡಿಯಬೇಡವೋ
ಕರಿರಥಾ ತುರಗಗಳಿರಲು ಬಿಟ್ಟು ಕೆಡಹುವ
　　ಕತ್ತೆ ಏರಲಿ ಬೇಡವೊ
ಪರಮಪದವನೀವ ಸಿರಿಕೃಷ್ಣನಿರಲಾಗಿ
　　ನರರ ಸೇವಿಸಬೇಡವೊ ಎಂದೆಂದಿಗೂ || ||೩||



**ಅರ್ಥವಿವರಣೆ :**

ಶ್ರೀ ವ್ಯಾಸರಾಜ ಗುರುಸಾರ್ವಭೌಮರಿಂದ ವಿರಚಿತ ಸುಂದರ ಕೀರ್ತನ ಕೃತಿ ಇದು. ಲೋಕನೀತಿ ರೂಪವಾದ ಕೀರ್ತನೆಯಲ್ಲಿ ನಿಜವಾದ ಸಾಧಕನಿಗೆ ಇರಬೇಕಾದ ನಿಯಮಗಳನ್ನು ತಿಳಿಸುತ್ತಾರೆ. **"ಶ್ರೀ ಕೃಷ್ಣ"**– ಎಂಬ ತಮ್ಮ ಉಪಾಸ್ಯ ಮೂರುತಿ.

**ಅಂತರಂಗದಲಿ** = ನಮ್ಮ ಹೃತ್ಪದ್ಮದಲ್ಲಿ (ದಹರಾಕಾಶ ಪ್ರದೇಶದಲ್ಲಿ), **ಹರಿಯ** = ಬಿಂಬರೂಪನಾದ, ಸಕಲ ಸಜ್ಜನರ ಪಾಪ ದುರಿತ ಪರಿಹಾರಕನಾದ ಶ್ರೀ ಪರಮಾತ್ಮನ ಭಗವದ್ರೂಪವನ್ನು, **ಕಾಣದವನೆ** = ನೋಡದವನು, **ಹುಟ್ಟು ಕುರುಡನೋ** = ಜಾತ್ಯಂಧನೇ ಸರಿ. ಅಂದರೆ ಬಿಂಬಾಪರೋಕ್ಷ ಭಾಗ್ಯವನ್ನು ಹೊಂದದವನು, ಕಣ್ಣಿದ್ದರೂ, ವ್ಯರ್ಥ. ಅವನು ಹುಟ್ಟು ಕುರುಡನೇ ಸರಿ.

**ಸಂತತ** = ನಿರಂತರವೂ (ಎಡಬಿಡದೆ), **ಸಿರಿಕೃಷ್ಣ ಚರಿತೆ** = ಲಕ್ಷ್ಮೀಪತಿಯಾದ ಶ್ರೀ ಕೃಷ್ಣರೂಪೀ ಶ್ರೀ ಪರಮಾತ್ಮನ ಪರಮಾಶ್ಚರ್ಯಕರವಾದ ವ್ಯಾಪಾರ ವಿಶೇಷಗಳನ್ನು ಒಳಗೊಂಡ ಕಥಾನಕವನ್ನು, **ಕೇಳದವನೆ** = ಶ್ರವಣ ಮಾಡದಿದ್ದವನು, **ಜಡಮತಿ ಕಿವುಡನೋ ಎಂದೆಂದಿಗೂ** = ಅವನು ಮಂಕು ಮತಿಯಾದ ಕಿವುಡನೇ ಸರಿ. ನಮಗೆ ಶ್ರವಣೇಂದ್ರಿಯವನ್ನು ಕೊಟ್ಟುದುದಕ್ಕೆ, ನಿರಂತರವೂ ಶ್ರೀ ಹರಿ ಕಥಾಶ್ರವಣ ಮಾಡುತ್ತಿರಬೇಕೆಂದು ತಾತ್ಪರ್ಯ. ಕೇವಲ ಲೌಕಿಕ ವಾರ್ತೆಯನ್ನು ಆಲಿಸುತ್ತಿರುವ ಮಾನವನು ಜಡಮತಿ ಮತ್ತು ಕಿವಿಯಿದ್ದರೂ ಬಧಿರನೇ ಸರಿ.

**ಹರುಷದಿಂದಲಿ** = ಅತ್ಯಂತ ಸಂತೋಷದಿಂದ (ಭಕ್ತ್ಯಾದರಗಳಿಂದ ಯುಕ್ತವಾದ), **ನರಹರಿಯ ಪೂಜೆ** = ನರಸಿಂಹ ನಾಮಕನಾದ ಶ್ರೀ ಹರಿಯ ಪೂಜಾದಿ ಸೇವೆಗಳನ್ನು, **ಮಾಡದವನು ಕೈ ಮುರಿದವನೋ** = ಆಚರಿಸದಿದ್ದವನು ಕೈ ಮುರಿದವನೇ ಸರಿ. ಸರ್ವತ್ರ ವ್ಯಾಪಕನಾದ ಶ್ರೀ ಹರಿಯನ್ನು ಪೂಜಾದಿ ದ್ರವ್ಯಗಳಿಂದ ಪೂಜೆ ಮಾಡಿದ್ದೇ ಆದರೆ ನಮ್ಮ ಕರಗಳು ಸಾರ್ಥಕ. ಇಲ್ಲದಿದ್ದರೆ ನಿರರ್ಥಕವೆಂದು ಅಭಿಪ್ರಾಯ.

**ಕುರುವರ ಸೂತನ ಮುಂದೆ** = ಪಾರ್ಥಸಾರಥಿಯಾದ ಶ್ರೀ ಕೃಷ್ಣನ ಮುಂದೆ, (ಕುರುವರ-ಕುರಕುಲ ಶ್ರೇಷ್ಠನಾದ ಮಧ್ಯಮ ಪಾಂಡವನಾದ ಅರ್ಜುನ. ಸೂತ-ಅರ್ಜುನನ ಬಂಡಿ ಬೋವನಾದ ಶ್ರೀ ಕೃಷ್ಣ ಪರಮಾತ್ಮ ಕುರುವಂಶದಲ್ಲಿ ಕೌರವರು ಪಾಂಡವರು ಸಂಜಾತರು), **ಕೃಷ್ಣಾ ಎಂದು**

**ಕುಣಿಯುದವನೆ ಕುಂಟನೋ** = "ಕೃಷ್ಣಾ"-ಎಂದು ಭಕ್ತಿಯಿಂದ ಉದ್ಘೋಷಿಸುತ್ತಾ, ನೃತ್ಯ ಮಾಡದವನು ಕಾಲಿದ್ದರೂ ಕುಂಟನೇ ಸರಿ. (ನಲಿದರೇ ಒಲಿವೆ ನಿಮಗೆಂಬ-ಎಂಬ ದಾಸರ ವಚನ).

**ನರಹರಿ ಚರಣೋದಕ** = ಶ್ರೀ ನರಹರಿಯನ್ನು ಪೂಜಿಸಿ, ಅವನ ಪಾದಾರವಿಂದಗಳಿಗೆ ಅಭಿಷೇಕ ಮಾಡಿದ ತೀರ್ಥವನ್ನು(ಪಾದೋದಕವನ್ನು), **ಧರಿಸದ ಶಿರ** = ಧರಿಸದಿದ್ದ ಮಸ್ತಕವು, **ನಾಯುಂಡ ಹೆಂಚು ಕಾಣೋ** = ಶ್ವಾನವು ನೆಕ್ಕಿದ ತಟ್ಟೆಯಂತೆ ಒಂದು ಪರಾತವನ್ನು ನಾಯಿ ನೆಕ್ಕಿದರೆ, ಅದು ಹೇಗೆ ನಿರರ್ಥಕವೋ ಅಂತೆಯೇ ಶ್ರೀ ಹರಿಯ ಪಾದೋದಕವನ್ನು ಧಾರಣ ಮಾಡದ ಶಿರಸ್ಸು ವ್ಯರ್ಥ-ವೆಂದು ತಾತ್ಪರ್ಯ, **ಸುರವರ ಕೃಷ್ಣ** = ದೇವತಾ ಶ್ರೇಷ್ಠನಾದ, ಅಂದರೆ ಸರ್ವೋತ್ತಮನಾದ ಶ್ರೀ ಕೃಷ್ಣ ಪರಮಾತ್ಮನಿಗೆ, **ಪ್ರಸಾದವಿಲ್ಲದ ಊಟ** = ನೈವೇದ್ಯಪೂರ್ವಕ ಅರ್ಪಣ ಮಾಡದಿರುವ, ಭೋಜನ, **ಸೂಕರ ಭೋಜನವೋ ಎಂದೆಂದಿಗೂ** = ಯಾವತ್ತೂ ಹಂದಿಯ ಆಹಾರ. (ಅಂದರೆ, ಅಮೇಧ್ಯಕ್ಕೆ ಸಮಾನ) ಭಗವದನರ್ಪಿತ ಭೋಜನ ನಿಷಿದ್ಧವೆಂದು ತಾತ್ಪರ್ಯ. ಭೋಜನ ಕ್ರಿಯೆಯಂತೆಯೇ ಇಂದ್ರಿಯಗಳಿಗೆ ಸನ್ನಿಕರ್ಷವಾಗುವ ಸಮಸ್ತ ವಿಷಯಗಳು ಭಗವದರ್ಪಿತವಲ್ಲದಿದ್ದರೆ, ನಿಷಿದ್ಧ ಮತ್ತು ಅಗ್ರಾಹ್ಯ.

**ಅಮರೇಶ** = ದೇವತಾ ಪ್ರಭುವಾದ, **ಕೃಷ್ಣಗೆ ಅರ್ಪಿತವಲ್ಲದಾ ಕರ್ಮ** = ಶ್ರೀ ಹರಿಗೆ ಅರ್ಪಿತವಲ್ಲದ ಸಕಲ ಕರ್ಮ ವಿಶೇಷಗಳೂ (ಶುಭ-ಅಶುಭ-ಮಿಶ್ರ-ಸಮಸ್ತವಾದ ಕರ್ಮಗಳನ್ನೂ, ಕರ್ಮಾಧಿಪತಿಯಾದ ಕಂಜನಾಭನೇ ಬಿಂಬಕ್ರಿಯಾದ್ವಾರಾ ತಾನೇ ಮಾಡಿಸಿ, ತತ್ತ್ವಾಭಿಮಾನಿ ದೇವಾಸುರರಿಂದ ಮಾಡಿಸಿ, ಇಂದ್ರಿಯಗಳಲ್ಲಿ ಪ್ರಕಾಶತೋ ವ್ಯಾಪ್ತನಾಗಿರುವ ಜೀವನ ದ್ವಾರಾ-ಮಾಡಿ ಮಾಡಿಸುತ್ತಿರುವನು-ಎಂಬ ಜ್ಞಾನಾನುಸಂಧಾನವೇ ಸರ್ವಕರ್ಮ ಸಮರ್ಪಣೆಯ ಮರ್ಮವು).

**ಅಸತಿಯು ವ್ರತನೇಮವ್ಹೋ**= ಪತಿವಿಹೀನಳಾದ ಸ್ತ್ರೀ ಮಾಡುವ ವ್ರತ ನೇಮ ನಿಷ್ಠೆಗಳಿದ್ದಂತೆ, ನಿರರ್ಥಕವೆಂದು ಭಾವ, **ರಮೆಯರಸಗೆ**= ಇಂದಿರಾ ರಮಣನಾದ ಶ್ರೀ ಹರಿಗೆ, **ಪ್ರೀತಿಯಿಲ್ಲದ ವಿತರಣೆ**= ಪ್ರೀತಿಯಾಗದ ಸಕಲ ಸತ್ಕರ್ಮಗಳೂ ಸಹ, **ರಂಡೆಗೊರಳ ಸೂತ್ರವ್ಹೋ**= ಪತಿವಿಹೀನಳಾದ ಸ್ತ್ರೀಯು ಸೂತ್ರವಿದ್ದಂತೆ ಸಕಲ ಕರ್ಮಗಳೂ ಕೂಡ ಭಗವದರ್ಪಿತವಾಗಿದ್ದರೇ, ಸಾರ್ಥಕ. ಕೇವಲ ವಿಷ್ಣು ಪ್ರೇರಣೆಯಾ, ವಿಷ್ಣು ಪ್ರೀತ್ಯರ್ಥಂ-ಸಕಲ ಕರ್ಮಗಳನ್ನೂ ಆಚರಿಸಬೇಕು. ಅಹಂ ಕರ್ತೃತ್ವ ಭಾವದಿಂದ ಮಾಡಿದ ಸತ್ಕರ್ಮಗಳೂ ನಿಷ್ಫಲವೆಂದು ತಾತ್ಪರ್ಯ.

**ಕಮಲನಾಭನ**= ತನ್ನ ಹೊಕ್ಕಳಿನಲ್ಲಿ ಸ್ವೇಚ್ಛೆಯಿಂದ ಸೃಜಿಸಿದ ಕಮಲ ಪುಷ್ಪಯುಳ್ಳ ಪದ್ಮನಾಭನನ್ನು, **ಪಾಡಿ ಪೊಗಳದ ಸಂಗೀತ**= ಬಾಯ್ತುಂಬಾ ಹಾಡಿ, ಮನಸಾ, ಭಕ್ತಿಯಿಂದ ಕೊಂಡಾಡದ ಸಂಗೀತ ಕಲೆಯು, **ಗಾರ್ದಭ ರೋದನವ್ಹೋ**= ಕತ್ತೆಯ ಕಿರುಚಾಟದಂತೆ ವ್ಯರ್ಥ. ಸಂಗೀತದ ಸಾಹಿತ್ಯ ವಸ್ತು ಭಗವದ್ಗುಣಗಳ ಗಾನ ರೂಪದಲ್ಲಿರಬೇಕು, **ಮಮತೆಯಿಂದಲಿ**= ಭಕ್ತ್ಯಾದರ ಪೂರ್ವಕವಾಗಿ, **ಕೇಶವಗೆ**= ಬ್ರಹ್ಮ ರುದ್ರಾದಿ ವಂದ್ಯನಾದ ಶ್ರೀ ಹರಿಗೆ, **ನಮಸ್ಕಾರ ಮಾಡದವನೆ**= ಸಾಷ್ಟಾಂಗ ಪೂರ್ವಕವಾಗಿ ನಮನ ಮಾಡದವನು, **ಮೃಗವ್ಹೋ ಎಂದೆಂದಿಗೂ**= ಮೃಗಕ್ಕೆ ಸಮಾನನೇ ಸರಿ.

**ಜರೆ ಪುಟ್ಟು ಮರಣ**= ಮುಪ್ಪು-ಜನನ-ಸಾವು ಇವುಗಳನ್ನು, **ತೊಡೆವ**= ಪರಿಹಾರ ಮಾಡುವ, **ಸುಧೆಯ ಬಿಟ್ಟು**= ಅಮೃತ ಸದೃಶವಾದ ಶ್ರೀ ಹರಿ ಸುಧಾ ಪಾನವನ್ನು ಬಿಟ್ಟು, **ಸುರೆಯ ಸೇವಿಸಬೇಡವ್ಹೋ**= ಮದ್ಯವನ್ನು ಎಂದೆಂದಿಗೂ ಸೇವಿಸಬೇಡ. ಶ್ರೀ ಹರಿಯ ನಾಮ ಸಂಕೀರ್ತನವು ಕರ್ಮಬಂಧನರೂಪವಾದ ಜನನ ಮರಣಗಳ ಸುಳಿಯನ್ನು ಬಿಡಿಸಿ, ಉದ್ಧಾರ ಮಾಡುವುದು. ಅದು ಅಮೃತ ಸಂಜೀವಿನೀ.

**ಸುರಧೇನುವಿರಲಾಗಿ**= ಕಾಮಧೇನು ಇರಲಿಕ್ಕೆ, **ಸೂಕರ ನೊಲೆ ಹಾಲು**= ಹಂದಿಯ ಹಾಲನ್ನು, **ಕರೆದು ಕುಡಿಯಬೇಡವ್ಹೋ**= ಕರೆದು

ಪಾನ ಮಾಡಬಾರದು. ಶ್ರೀ ಹರಿಯ ಕಥಾ ಸಂಕೀರ್ತನವು ಸಕಲಾಭೀಷ್ಟ ಗಳನ್ನೂ ಕೊಡುವ ಕಾಮಧೇನು ಸದೃಶವಾದದ್ದು (ಸುರಧೇನು ಸದೃಶ), **ಕರಿರಥಾ ತುರಗ ಇರಲು** = ಆನೆ-ರಥ-ಕುದುರೆ-ಇತ್ಯಾದಿ ವಾಹನ ವಿಶೇಷ ಗಳಿರಲು, **ಬಿಟ್ಟು** = ಅವುಗಳನ್ನು ತೊರೆದು, **ಕೆಡುಹುವ ಕತ್ತೆ ಏರಲಿ ಬೇಡವೋ** = ನೆಲಕ್ಕೆ ಕೆಡಹುವ ಕತ್ತೆಯ ಬೆನ್ನನ್ನು ಏರಲು ಬೇಡ. ಕರಿ ರಥಾ ತುರಗಗಳು ಸು ಮಾರ್ಗದಲ್ಲಿ ನಮ್ಮನ್ನು ಒಯ್ಯುವ ವಾಹನ ವಿಶೇಷ ಗಳು. ಅಂತೆಯೇ ಶ್ರೀ ಹರಿಯ ಸುಧಾಮೃತ. ಹರಿ ಭಕ್ತಿ ಮಾರ್ಗದಲ್ಲಿ ಸಾಧಕರನ್ನು ನೇರವಾಗಿ ಮೋಕ್ಷ ಮಾರ್ಗದಲ್ಲಿ ಕರೆದೊಯ್ಯುವ ಉತ್ತಮ ಸಾಧನವಾಗಿದೆ.

**ಪರಮಪದವನೀವ** = ಅತ್ಯಂತ ಶ್ರೇಷ್ಠವಾದ ಮೋಕ್ಷವೆಂಬ ನಿತ್ಯಾ ನಂದ ರೂಪವಾದ ಪದವಿಯನ್ನು ನೀಡುವ, **ಸಿರಿಕೃಷ್ಣ ನಿರಲಾಗಿ** = ಶ್ರೀ ಲಕ್ಷ್ಮೀಕಾಂತನಾದ ಕೃಷ್ಣನು ಇರಲಿಕ್ಕೆ, **ನರರ ಸೇವಿಸಬೇಡವೋ ಎಂದೆಂದಿಗೂ** = ಮಾನವರನ್ನು ಎಂದೆಂದಿಗೂ ಸೇವಿಸಬೇಡ. ಸಿರಿಕೃಷ್ಣನು- ಸರ್ವೋತ್ತಮದೇವತಾ, ಅಂತಹ ಪುರುಷೋತ್ತಮ ದೇವನನ್ನು ಬಿಟ್ಟು ಕ್ಷಣಿಕವಾದ ಭೋಗ ಭಾಗ್ಯಗಳನ್ನು ಕೊಡುವ ಮಾನವರ ಸೇವೆಯನ್ನು ಎಂದೆಂದಿಗೂ ಮಾಡಬಾರದೆಂದು ತಾತ್ಪರ್ಯ.



## ೬೧

### ಕೀರ್ತನೆ–೨೮

### (ಶ್ರೀ ಕನಕದಾಸರಕೃತಿ)

### ಶ್ರೀ ಹರಿಯಲ್ಲಿ ಭಕ್ತನ ಮೊರೆ

ರಾಗ–ಭೈರವಿ ಆದಿತಾಳ

ಅಣು ಮಹತ್ತಾದ ದೇವ ‖ ‖ಪ‖

ಅಣುವಿಗೆ ಅಣುವು ಮಹತಿಂಗೆ ಮಹಿಮನು ಅಖಿಳ
ಗುಣಭರಿತ ಪರಮಪಾವನಚರಿತ ಎನ್ನ ನಿರ-
ಯಣ ಸಮಯದಲ್ಲಿ ಶ್ರೀ ಹರಿ ಹರಿಯೆ ಎಂತೆಂಬ
ನೆನೆಹದೊಲಿದಿತ್ತು ಸಲಹೋ ॥ ॥೮॥

ನೋಡಿ ನಡೆಯದೆ ಹಿಂದನೇಕ ಜನ್ಮಗಳಲ್ಲಿ
ಮಾಡಿರುವ ಪಾತಕವು ವ್ಯಾಧಿರೂಪಗಳಿಂದ
ಪೀಡಿಸುತ ತನುವ ತೊತ್ತುಳಿಗೈದು ನೆಲಕಿಕ್ಕಿ
ತೀಡಿ ಬಸವಳಿದ ಬಳಿಕ ॥

ನಾಡಿಗಳು ಸ್ವಸ್ಥಾನದಾಸ್ಥಾನ ಭೇದಿಸಲು
ಓಡಿ ಕಂಠೋಪದಲಿ ಪ್ರಾಣನಿಲ್ಲದೆಯೆ ಒ-
ದ್ದಾಡುತಿಹ ಸಮಯದಲಿ ಹರಿನಾಮವನು ಪಾಡಿ
ಪೊಗಳುವುದ ಕರುಣಿಸಯ್ಯ ॥ ॥೧॥

ಕಂದಬಾರೆಂತೆಂದು ಶೋಕಿಪ ಜನಕ ಜನನಿ
ನಿಂದಳುತ ಜ್ಯೇಷ್ಠರು ಕನಿಷ್ಠ ಭ್ರಾತರು ಪುತ್ರ
ಬಂಧು-ಮಿತ್ರರು ಬಹು ಪ್ರಳಾಪವಾಂಗೈವ ಸತಿ
ಅಂದದಲ್ಲಿಹ ಮಂದಿರ ॥

ಹೊಂದಿಪ್ಪ ಸಂಪತ್ತು ನೋಡಿ ಹಂಬಲಿಸುತಲಿ
ವೃಂದಾವನ ಪ್ರಿಯನೆ ನಿನ್ನ ಮರೆತಿದ್ದೆ ಗೋ-
ವಿಂದ ವೈಕುಂಠವಿಧುವೆಂದು ತಾರಿಸುತ ಮು
ಕುಂದ ಮುಕುತಿಯನೊದಗಿಸೈ ॥ ॥೨॥

ಘಾತೀಸೀತನ ಹಿಡಿದು ಹೆಡಗಟ್ಟಿ ಪಂಚ ಮಹಾ-
ಪಾತಕನ ತೊಗಲನ್ನು ಸುಲಿದು ಸೀಳೆಂಬ ಯಮ-
ದೂತರುದ್ಧತ ಕಣ್ಗಳನು ಕಂಡು ಮನದಲ್ಲಿ
ಭೀತಿಯಲಿ ಬಹಳ ಬಳಲಿ ॥

ಚೇತನವು ಕುಂದಿ ನಾಲಿಗೆ ಬೀಳ್ವ ಸಮಯದಲಿ
ಏತರಾಸೆಯು ಬಾಡದಾದಿಕೇಶವನೇ ಅ-
ನಾಥ ಬಂಧುವೆ ಅಚ್ಯುತ ಮುರಾರಿ ಹರಿಯೆಂಬ
ಮಾತನಾಡಿಸಿ ಮುಕುತಿಯೊದಗಿಸಯ್ಯ ॥ ॥೩॥



ಕವಿ ಪುಂಗವರಾದ ಶ್ರೀ ಕನಕದಾಸರು-ಪ್ರಸಕ್ತ ಕೀರ್ತನೆಯಲ್ಲಿ ಮಹಾ ಮಹಿಮೋಪೇತವಾದ ಶ್ರೀ ಮುಕುಂದನ ದಿವ್ಯ ನಾಮಸ್ಮರಣೆಯ ಮಹಾತ್ಮೆಯನ್ನು ನಿರೂಪಿಸಿರುತ್ತಾರೆ.

**ಅರ್ಥವಿವರಣೆ :**

**ಅಣು ಮಹತ್ತಾದ** ಅಣು-ಎಂದರೆ, ಅತ್ಯಂತ ಸೂಕ್ಷ್ಮವಾದ ಭಾಗ. ಮಹತ್ತು-ಎಂದರೆ ವ್ಯಾಪಕವಾದ ಬೃಹತ್ತಾದ ಭಾಗ, **ದೇವ**= ಸರ್ವೋತ್ತಮನಾದ ಶ್ರೀ ಹರಿ.

**ಅಣುವಿಗೆ ಅಣುವು**= ವಸ್ತುವಿನ ಅತ್ಯಂತ ಕನಿಷ್ಠ ಪರಿಮಿತಿಯ ಸೂಕ್ಷ್ಮತಮವಾದ ಅಂಶವೇ ಅಣುವು. ಬ್ರಹ್ಮ ದೇವರಿಂದ ಆರಂಭಿಸಿ, ತೃಣಾಂತ ಸಮಸ್ತ ಜೀವರ ಸ್ವರೂಪ ದೇಹವು ಅತ್ಯಂತ ಸೂಕ್ಷ್ಮವಾದ ಪರಮಾಣು ರೂಪದಲ್ಲಿದೆ. ಅದನಲ್ಲಿ ಪರಮಾಣುವಿಗಿಂತ ಸೂಕ್ಷ್ಮತರನಾಗಿ ಬಿಂಬನಾದ ಶ್ರೀ ಹರಿಯು ಅಂತರ್ಯಾಮಿಯಾಗಿದ್ದಾನೆ. ಜಗತ್ತಿನಲ್ಲಿ ಅತ್ಯಂತ ದೊಡ್ಡದಾದ ವಸ್ತುವಿಗಿಂತ ಬೃಹತ್ತಾದ ರೂಪದಿಂದ ಅದಕ್ಕೆ ಆವರಣವಾಗಿ ವ್ಯಾಪ್ತನಾಗಿದ್ದಾನೆ. ಈ ಅಚಿಂತ್ಯಾದ್ಭುತ ಗುಣವನ್ನೇ ನಿಗಮವು-"ಅಣೋ ರಣೀಯಾನ್-ಮಹತೋ ಮಹೀಯಾನ್"-ಎಂದು ಸಾರುತ್ತಿದೆ.

**ಅಖಿಳ ಗುಣಭರಿತ**=ಅನಂತ ಕಲ್ಯಾಣ ಗುಣಗಣ ಪರಿಪೂರ್ಣನು, **ಪರಮ ಪಾವನ ಚರಿತ**=ಭಗವಂತನ ಚರಿತ್ರೆಯು, ಅವನ ಲೀಲಾವಿಲಾಸ

**ವೈ**ಭವಗಳು ಅತ್ಯಂತ ಪವಿತ್ರ. ವಸ್ತುಗಳಿಗೆ ಪಾವಿತ್ರ್ಯವನ್ನು ಕೊಡುವುದೇ ಆ ವಸ್ತುವಿನಲ್ಲಿ ಅಂತರ್ಗತನಾಗಿರುವ ಭಗವಂತನ ಸನ್ನಿಧಾನ ವಿಶೇಷ, **ಎನ್ನ ನಿರಯಣ ಸಮಯದಲ್ಲಿ** = ನನ್ನ ಅಂತ್ಯ ಕಾಲದಲ್ಲಿ(ಮರಣ ಸಮಯದಲ್ಲಿ), **ಶ್ರೀ ಹರಿ ಹರಿಯೆ ಎಂಬ** = ಸಜ್ಜನರ ಸಕಲ ಪಾಪಪರಿಹಾರಕ ರೂಪವೇ-**ಶ್ರೀ ಹರಿಯು.** ಶ್ರೀ ಹರಿಯ ನಾಮಕ್ಕೆ ಹೋಗದ ದುರಿತಗಳೇ ಸಮಗ್ರ **ಜಗತ್ತಿನಲ್ಲಿಲ್ಲ, ನೆನೆಹನು ಒಲಿದಿತ್ತು ಸಲಹೋ** = ನಿನ್ನ ದಿವ್ಯ ಸ್ಮರಣೆ ಯನ್ನಿತ್ತು ಸಂರಕ್ಷಿಸೆಂದು ಶ್ರೀ ಕನಕದಾಸರು ಶ್ರೀ ಹರಿಯನ್ನು ಭಕ್ತಿ ಪರವಶರಾಗಿ ಪ್ರಾರ್ಥಿಸಿರುತ್ತಾರೆ.

**ನೋಡಿ ನಡಿಯದೆ** = ಸಚ್ಛಾಸ್ತ್ರಗಳ ಅಧ್ಯಯನಪೂರ್ವಕ ಗುರೂಪ ದೇಶ ದ್ವಾರಾ ತಿಳಿದು ಸನ್ಮಾರ್ಗದಲ್ಲಿ ಹೋಗದೆ, **ಹಿಂದೆ ಅನೇಕ ಜನ್ಮ ಗಳಲ್ಲಿ** = ಗತಿಸಿ ಹೋದ ಅನೇಕ ಜನ್ಮಾಂತರಗಳಲ್ಲಿ, **ಮಾಡಿರುವ ಪಾತ ಕವು** = ಗಳಿಸಿದ್ದ ಪಾಪ ರಾಶಿಗಳ ಫಲ ರೂಪವಾಗಿ, **ವ್ಯಾಧಿ ರೂಪಗಳಿಂದ** = ದೈಹಿಕ, ಮಾನಸಿಕವಾದ ನಾನಾ ಪರಿಯ ರೋಗೋಪದ್ರವಗಳಿಂದ, **ಪೀಡಿಸುವ** = ಬಾಧೆ ಪಡುತ್ತಾ, **ತನುವ ತೊತ್ತುಳಿಗೈದು** = ಈ ಶರೀರ ವನ್ನು ಅನೇಕ ಜನರ ಸೇವೆಯಲ್ಲಿ ಸವೆಸಿ, **ನೆಲಕಿಕ್ಕಿ** = ಅಂತ್ಯ ಕಾಲದಲ್ಲಿ ಹಾಸಿಗೆ ಹಿಡಿದು ಮಲಗಿ, **ತೀಡಿ ಬಸವಳಿದ ಬಳಿಕ** ದೇಹವು ಸೊರಗಿದ ನಂತರ, **ನಾಡಿಗಳು ಸ್ವಸ್ಥಾನದಾಸ್ಥಾನ ಛೇದಿಸಲು** = ಈ ಶರೀರಗತ ೭೨,೦೦೦ ಸಂಖ್ಯಾಕವಾದ ನರ ನಾಡಿಗಳು ದುರ್ಬಲವಾಗಿ, ತನ್ಮೂಲಕ ದೇಹಗತ ಇಂದ್ರಿಯಗಳ ಪಟುತ್ವ ತೊಲಗಿ, **ಓಡಿ ಕಂಠೊಪದಲಿ** = ಪ್ರಾಣವು ಕಂಠಕ್ಕೆ ಸೇರಿ. (ಕುತ್ತಿಗೆಯ ನರಗಳು ಬಿಗಿದು, ಮಾತು ಹೊರ ಡದೆ, ಮರಣೋನ್ಮುಖ ಸ್ಥಿತಿಯಲ್ಲಿರುವಾಗ), **ಒದ್ದಾಡುತಿಹ ಸಮ ಯದಲಿ** = ಜೀವವು ದೇಹದಲ್ಲಿ ನಿಲ್ಲಲಾರದೆ ವಿಲಿವಿಲಿ ಒದ್ದಾಡುತ್ತಿರುವ ಕಾಲದಲ್ಲಿ. **ಹರಿನಾಮವನು ಪಾಡಿ ಪೊಗಳುವುದ ಕರುಣಿಸಯ್ಯ** = ಹೇ ದೇವಾ ! ಕರುಣಾಳು, ನಿನ್ನ ದಿವ್ಯ ಭವ್ಯ ನಾಮಸ್ಮರಣೆಯನ್ನು ಕರುಣಿಸು.

**ಕಂದ ಬಾರೆಂದು**=ಪುತ್ರ ವಾತ್ಸಲ್ಯದಿಂದ, **ಶೋಕಿಪ ಜನಕ ಜನನಿ**=ದುಃಖಿತಪ್ತರಾಗಿರುವ ತಂದೆ ತಾಯಿಗಳು, **ನಿಂದು ಅಳುತ**= ಮುಂದೆ ನಿಂತು, ಕಣ್ಣೀರು ಹಾಕುತ್ತಾ, **ಜೇಷ್ಠರು ಕನಿಷ್ಠರು ಭ್ರಾತರು** = ದೊಡ್ಡವರು ಚಿಕ್ಕವರೂ ಸಹೋದರರು, **ಪುತ್ರ ಬಂಧು ಮಿತ್ರರು**= ಮಕ್ಕಳು, ನೆಂಟರಿಷ್ಟಮಿತ್ರರು, **ಬಹು ಪ್ರಳಾಂಪಗೈದು**=ಬಹು ವಿಧ ವಾಗಿ ಶೋಕಿಸುತ್ತಾ, **ಸತಿ**=ಕೈ ಹಿಡಿದ ಪತ್ನೀ, **ಅಂದದಲ್ಲಿಹ ಮಂದಿರ** =ಭವ್ಯವಾಗಿ ನಿರ್ಮಿಸಿದ ಗೃಹ, **ಹೊಂದಿಪ್ಪ ಸಂಪತ್ತ ನೋಡಿ**= ಆರ್ಜಿತವಾದ ಐಶ್ವರ್ಯ ಭಾಗ್ಯಗಳನ್ನು ಕಾಣುತ್ತಾ, **ಹಂಬಲಿಸುತಲಿ**= ಅವುಗಳ ಭೋಗಾಪೇಕ್ಷೆಯಿಂದ ಇನ್ನು ಬದುಕಬೇಕೆಂದು ಹಂಬಲಿಸುತ್ತಾ, **ವೃಂದಾವನ ಪ್ರಿಯನೆ**= ನಂದಗೋಕುಲ ಮತ್ತು ವೃಂದಾವನದ ಗೋಪ ಗೋಪಿಯರಿಗೆ ಅತ್ಯಂತ ಪ್ರಿಯನಾದ ಶ್ರೀ ಕೃಷ್ಣನೇ.

**ನಿನ್ನ ಮರೆತಿದ್ದೆ**= ಈ ಸಿರಿಯ ವೈಭವದಲ್ಲಿ ನಿನ್ನನ್ನು ನಾನು ಸಂಪೂರ್ಣವಾಗಿ ಮರೆತೇ ಬಿಟ್ಟಿದ್ದೆ, **ಗೋವಿಂದ** = ಗೋ-ಬ್ರಾಹ್ಮಣ- ವೇದ ಪ್ರಿಯನೇ, **ವೈಕುಂಠ ವಿಭುವೆಂದು** = ಮುಕ್ತಿ ಶ್ರೇಷ್ಠ ಧಾಮವಾದ ವೈಕುಂಠಾಧಿಪತಿ ಎಂದು, **ತಾರಿಸುತ** = ಉದ್ಘೋಷಿಸುತ್ತಾ, **ಮುಕುಂದ** =ಮುಕ್ತಿಪ್ರದನಾದ ಶ್ರೀ ಹರಿಯೇ, **ಮುಕುತಿಯನು ಒದಗಿಸೈ**= ಅನಾದಿ ಕಾಲದಿಂದ ಜೀವನ ಸ್ವರೂಪಕ್ಕೆ ಪ್ರತಿಬಂಧಕವಾಗುವ ಅನಾದಿ ಕರ್ಮ ಬಂಧನವನ್ನು ಲಿಂಗಭಂಗ ದ್ವಾರಾ ಕಳೆದು, ಕರ್ಮ ವಿಮೋಚನೆ ಗೈದು, ತನ್ಮೂಲಕ ಸ್ವಸ್ವರೂಪಗತ ಆನಂದಾವಿರ್ಭಾವ ರೂಪವಾದ ನಿಜಾ ನಂದವೆಂಬ ಮುಕ್ತಿಯನ್ನು ಕೊಡುವವನೇ-ಮುಕುಂದನಾಮಕ ಶ್ರೀ ಪರ ಮಾತ್ಮನು. ಅದನ್ನು ಅನುಗ್ರಹಿಸೆಂದು ದಾಸರು ಶ್ರೀ ಹರಿಯಲ್ಲಿ ಬೇಡಿ ಕೊಂಡಿದ್ದಾರೆ.

**ಘಾತಿಸು ಈತನ ಹಿಡಿದು**=ಮರಣಾನಂತರ, ಯಮದೂತರು ಪಾಶಹಾಕಿ, ಯಾತನಾಮಯ ಶರೀರವನ್ನು ಜೀವನಿಗೆ ಕೊಟ್ಟು, ಅವ ನನ್ನು ಹಿಡಿದು, ನಾನಾ ಪರಿಯಲ್ಲಿ ಪೀಡಿಸುತ್ತಾರೆ, **ಹೆಡೆಗಟ್ಟಿ**=ಅವನು

**ಮುಸುಕದಂತೆ** ಬಂಧಿಸಿ, **ಪಾಶದಿಂದ** ಬಿಗಿದು, **ಪಂಚಮಹಾ ಪಾತಕನ** = ಸುಳ್ಳು-ವಂಚನೆ-ವ್ಯಭಿಚಾರ-ಅಪೇಯಪಾನ-ಅಭಕ್ಷ್ಯ ಭಕ್ಷಣಾದಿ ಮಹಾ ಪಾಪಗಳನ್ನು ಮಾಡಿದ ಜೀವ, **ತೊಗಲನ್ನು ಸುಲಿದು** = ಯಾತನಾ ಶರೀರದ ಚರ್ಮವನ್ನು ಸುಲಿದು, **ಸೀಳೆಂಬ** = ತೀಕ್ಷ್ಣವಾದ ಆಯುಧಗಳಿಂದ ಭೇದನ ಮಾಡಿರೆಂದು, **ಯಮದೂತರು** = ಯಮಧರ್ಮರಾಯನ ಕಿಂಕರರು **ಉದ್ಭವ ಕಣ್ಗಳನು ಕಂಡು** = ಕ್ರೋಧದಿಂದ ಕೆಂಪೇರಿದ ಬಿರುಗಣ್ಣುಗಳನ್ನು ನೋಡಿ, **ಮನದಲಿ ಭೀತಿಯಲಿ** = ಮನಸ್ಸಿನಲ್ಲಿ ತುಂಬಾ ಹೆದರಿಕೊಂಡು.

**ಬಹಳ ಬಳಲಿ** = ಯಾತನಾ ಪೀಡಿತರಾಗಿ ತುಂಬಾ ಬಸವಳಿದು, **ಚೇತನವು ಕುಂದಿ** = ಜೀವನ ಬಲವು ಕ್ಷೀಣಿಸಿ, **ನಾಲಿಗೆ ಬೀಳ್ವ ಸಮಯದಲಿ** = ಮಾತು ಹೊರಡದೇ, ಕೇವಲ ಸಂಜ್ಞೆಯಿಂದ ಒದ್ದಾಡುತ್ತಿರುವ ಕಾಲದಲ್ಲಿ (ಮರಣ ಸಮಯದಲ್ಲಿ), **ಏತರಾಸೆಯು** = ಇನ್ನು ಭೋಗಬೇಕೆಂಬ ಆಸೆಯು ಏಕೆ ? ಇರುವಷ್ಟು ಧರ್ಮ ಉಳ್ಳದ್ದಲ್ಲವೇ ?-ಎಂದು ತಾತ್ವಿಕವಾಗಿ ಎಚ್ಚರಿಸುತ್ತಾರೆ-ಶ್ರೀ ಕನಕದಾಸರು, **ಬಾಡದಾದಿ ಕೇಶವನೇ** = "ಬಾಡ"-ಎಂಬುದು ಶ್ರೀ ಕನಕದಾಸರ ಜನ್ಮಸ್ಥಳ. ಅಲ್ಲಿನ ಆದಿಕೇಶವನ ಅಂಕಿತವನ್ನಿಟ್ಟು ಮಾಡಿದ ಕೀರ್ತನೆ.

**ಅನಾಥ ಬಂಧುವೆ** = ದಿಕ್ಕಿಲ್ಲದವರಿಗೆ ಪರಮಾಪ್ತನಾದ ಬಂಧುವೇ, **ಅಚ್ಯುತ** = ಚತುರ್ವಿಧ ನಾಶರಹಿತನಾದ, ಶಶ್ವದೇಕ ಪ್ರಕಾರವಾದ ನಿತ್ಯ ಶಾಶ್ವತಮೂರ್ತಿ, **ಮುರಾರಿ** = ಮುರಾ-ಎಂಬ ಪ್ರಬಲ ದೈತ್ಯನ ಸಂಹಾರಕನಾದ ಶ್ರೀ ಕೃಷ್ಣನು, **ಹರಿಯೆಂಬ** = ಸರ್ವ ಸಜ್ಜನರ ಪಾಪ ಪರಿಹಾರಕವಾದ ಭಗವದ್ರೂಪವು, **ಮಾತನಾಡಿಸಿ** = ನಿನ್ನ ದಿವ್ಯ ದರ್ಶನವಿತ್ತು ಪ್ರೀತಿಯ ಮಾತುಗಳನ್ನಾಡಿ, **ಮುಕುತಿ ಒದಗಿಸಯ್ಯ** = ಮೋಕ್ಷಪ್ರದನಾಗು.



೬೨

## ಕೀರ್ತನೆ-೨೯

(ವಿಜಯವಿಠ್ಠಲಾಂಕಿತ)

ರಾಗ-ಮೋಹನ ಆದಿತಾಳ

ಅಂತರಂಗದ ಕದವು ತೆರೆಯಿತಿಂದು || ||ಪ||

ಎಂತು ಪುಣ್ಯದ ಫಲವು ಪ್ರಾಪ್ತಿ ದೊರಕಿತೊ ಎನಗೆ || ||ಅ||

ಏಸುದಿನವಾಯಿತೋ ಬೀಗಮುದ್ರೆಯ ಮಾಡಿ
ವಾಸವಾಗಿದ್ದರೋ ದುರುಳರಿಲ್ಲಿ
ಮೋಸವಾಯಿತು ಇಂದಿನ ತನಕ ತಮಸಿನ
ರಾಸಿಯೊಳಗೆ ಹೂಳಿ ಕಾಣಿಸುತ್ತಿರಲಿಲ್ಲ || ||೧||

ಹರಿಗುಣವೆಂಬ ಕೀಲಿ ಕೈ ದೊರಕಿತು
ಗುರು ಕರುಣವೆಂಬಂಥ ಶಕ್ತಿಯಿಂದ
ಪರಮ ಭಾಗವತರ ಸಹವಾಸದಲಿ ಪೋಗಿ
ಹರಿಸ್ಮರಣೆಯಿಂದಲ್ಲಿ ಬೀಗ ಮುದ್ರೆಯ ತೆಗೆದೆ || ||೨||

ಸುತ್ತಲಿದ್ದವರೆಲ್ಲ ಪಲಾಯನವಾದರು
ಭಕ್ತಿ ಕಕ್ಕಡವೆಂಬ ಜ್ಞಾನದೀಪ
ಜತ್ತಾಗಿ ಹಿಡಕೊಂಡು ದ್ವಾರದೊಳಗೆ ಪೊಕ್ಕೆ
ಎತ್ತ ನೋಡಿದರತ್ತ ಶೃಂಗಾರ ಸದನ || ||೩||

ಹೊರಗೆ ದ್ವಾರವು ನಾಲ್ಕು ಒಳಗೈದು ದ್ವಾರಗಳು
ಪರದಾರಿಗೆ ಪ್ರಾಣ ಜಯವಿಜಯರು

ಮಿರುಗುವೊ ಮಧ್ಯ ಮಂಟಪ ಕೋಟಿ ರವಿಯಂತೆ
ಸರಸಿಜನಾಭನ ಅರಮನೆಯು ಸೊಬಗು ॥ ॥೪॥

ಸ್ವ ಮೂರ್ತಿಗಣ ಮಧ್ಯ ಸಚ್ಚಿದಾನಂದೈಕ
ರಮೆ ಧರೆಯರಿಂದ ಲಾಲಿಂಗಿತ್ವದಿ
ಕಮಲಾಜಾದಿಗಳಿಂದ ತುತಿಸಿಕೊಳ್ಳುತ ಹೃದಯ-
ಕಮಲದೊಳಗಿರುವ ಶ್ರೀ ವಿಜಯವಿಠ್ಠಲನ ಕಂಡೆ ॥ ॥೫॥



**ಅರ್ಥವಿವರಣೆ :**

ಜ್ಞಾನಿ ಶ್ರೇಷ್ಠರಾದ ಶ್ರೀ ವಿಜಯದಾಸವರೇಣ್ಯರಿಗೆ ಕಾಶೀ ಪವಿತ್ರ ಕ್ಷೇತ್ರದಲ್ಲಿ ಶ್ರೀ ಹರಿಯ ಪರಮಾನುಗ್ರಹದಿಂದ ಬಿಂಬಾಪರೋಕ್ಷವಾದಾಗ ತಮ್ಮ ಹೃತ್ಕಮಲದಲ್ಲಿ ಬಿಂಬಮೂರ್ತಿಯ. ಸಂದರ್ಶನ ಭಾಗ್ಯವನ್ನು ಪಡೆದ ಉತ್ತುಂಗ ಸಂದರ್ಭದಲ್ಲಿ ದಾಸರ ವದನಾರವಿಂದದಿಂದ ಹೊರ ಹೊಮ್ಮಿದ ಅಮೃತ ವಾಕ್ಯವಿದು.

**ಅಂತರಂಗದ** = ಜೀವರ ಹೃತ್ಕಮಲದಲ್ಲಿ ಬಿಂಬ ಮೂರ್ತಿಯಾದ ಶ್ರೀ ಹರಿಯು ವಾಸವಾಗಿದ್ದಾರೆ. ದಹರಾಕಾಶದಲ್ಲಿ ಬಿಂಬದರ್ಶನ ಭಾಗ್ಯ ವನ್ನು ಕರುಣಿಸುವ ಅಂಬಾ ರಮಣನಾದ ಶ್ರೀ ಮೂಲೇಶ ನಾಮಕನಾದ ಶ್ರೀ ಹರಿಯು, **ಕದವು** = ಅಜ್ಞಾನವೆಂಬ ಪ್ರತಿಬಂಧಕವು ಬಿಂಬದರ್ಶನಕ್ಕೆ ಅಡ್ಡಿಯಾಗಿ, ಕದದಂತೆ ಅಂತರಂಗದ ಮಂದಿರವನ್ನು ಮುಚ್ಚಿದೆ.

ಶ್ರೀ ಹರಿಯ ಪರಮ ಪ್ರಸಾದದಿಂದಲೇ ಅಂತರಂಗದ ಕದವು ತೆರೆ ಯಲು ಸಾಧ್ಯ, **ತೆರೆಯಿತು ಇಂದು** = ಈ ದಿನ ನನ್ನ ಅಂತರಂಗದ ಮಂದಿರ ವನ್ನು ಮುಚ್ಚಿದ ಹೆಬ್ಬಾಗಿಲು ಶ್ರೀ ಹರಿಯ ಕಾರುಣ್ಯ ವಿಶೇಷದಿಂದ ತೆರೆ ಯಿತು, **ಎಂತು ಪುಣ್ಯದ ಫಲವು** = ಎಷ್ಟು ಜನ್ಮ ಜನ್ಮಾಂತರಗಳ ಸತ್ಪುಣ್ಯ ರಾಶಿಗಳ ಫಲವು ಇಂದು ನನಗೆ ದೊರಕಿತು.

**ಸಾಧನಾ ಕ್ರಮ :-**

ಶ್ರೀ ಹರಿ ವಾಯು ಗುರುಗಳಲ್ಲಿ ದೃಢವಾದ ಭಕ್ತಿಯಿಂದ, ಅಹಂ ಕರ್ತೃತ್ವವನ್ನು ತೊರೆದೂ ಸದಾಚಾರ ಸಂಪನ್ನನಾಗಿ, ಸರ್ವಕರ್ಮಗಳ ಫಲವನ್ನೂ ಆ ಸರ್ವೇಶ್ವರನ ಚರಣ ಕಂಜಗಳಿಗೆ ಅರ್ಪಿಸಬೇಕು. ಮಹಾತ್ಮ ಜ್ಞಾನಪೂರ್ವಕವಾದ ಸುಧೃಢವಾದ ಭಕ್ತಿ ಭಾವವಿರಬೇಕು. ಸತ್ಕರ್ಮಾನುಷ್ಠಾನ-ಸಮೀಚೀನವಾದ ಜ್ಞಾನ–ನಿಷ್ಕಾಮಕವಾದ ಭಕ್ತಿಯಿಂದ ವಿಷಯ ಭೋಗಗಳಲ್ಲಿ ನಿರಾಸೆ ಉಂಟಾಗಿ, ವೈರಾಗ್ಯ ಭಾಗ್ಯವು ಲಭಿಸುವುದು.

ಜ್ಞಾನ–ಭಕ್ತಿ–ವೈರಾಗ್ಯಗಳೇ ಸಜ್ಜನರ ಭೂಷಣ ಪ್ರಾಯವಾದ ದೈವೀ ಸಂಪತ್ತು. ಅದರ ಕ್ರಮಬದ್ಧವಾದ ಸಾಧನೆಯಿಂದ ಸಕಲ ಪಾಪಗಳ ಪರಿಹಾರವಾಗಿ, ಭಗವದಪರೋಕ್ಷಕ್ಕೆ ಕಾರಣವಾಗುವುದು. ಹೃತ್ಕಮಲದಲ್ಲಿ ಬಿಂಬಾಪರೋಕ್ಷವಾದಾಗ, ಶ್ರೀ ಹರಿಯ ಕೃಪಾ ಕಟಾಕ್ಷ ವೀಕ್ಷಣದಿಂದ ಸಂಚಿತ ಕರ್ಮಗಳ ನಾಶ. ಆಗಾಮಿ ಲೇಪವಿಲ್ಲ. ಅಪರೋಕ್ಷಾನಂತರ, ಪ್ರಾರಬ್ಧ ಕರ್ಮಾನುಭೋಗ ಮಾತ್ರ ಉಳಿದಿರುವುದು. ಅವಶಿಷ್ಟವಾಗಿರುವ ಪ್ರಾರಬ್ಧ ಕರ್ಮವನ್ನು ಕ್ರಮವಾಗಿ ಭೋಗಿಸುತ್ತಾ, ಕೊನೆಯಲ್ಲಿ ಜೀವನ್ಮುಕ್ತ ಸ್ಥಿತಿಯನ್ನು ಪಡೆಯುವರು.

ಆ ಜೀವನ್ಮುಕ್ತರು ಸತ್ಯಲೋಕದಲ್ಲಿ ಚತುರ್ಮುಖ ಬ್ರಹ್ಮದೇವರ ಸನ್ನಿಧಿಯಲ್ಲಿರುವರು. ಬ್ರಹ್ಮರೊಡನೆ ಸಹ ವಿರಜಾ ನದಿಯಲ್ಲಿ ಸ್ನಾನ ತನ್ಮೂಲಕ ಲಿಂಗ ದೇಹ ಭಂಗ. ತದ್ವಾರಾ ಅನಾದಿ ಕರ್ಮವಿಮೋಚನೆ, ನಂತರ ಶ್ರೀ ವಾಸುದೇವ ನಾಮಕ ಶ್ರೀ ಹರಿಯ ಪರಮಾನುಗ್ರಹದಿಂದ ಮೋಕ್ಷಾನಂದ ಪ್ರಾಪ್ತಿ. ಈ ಕ್ರಮಬದ್ಧವಾದ ಸಾಧನಾ ರೂಪವಾದ ಸರಣಿಯು ಸಹಜವಾದದ್ದು. ಈ ಹಿನ್ನಲೆಯಲ್ಲಿ ಶ್ರೀ ವಿಜಯದಾಸರು-"ಎಂತು ಪುಣ್ಯದ ಫಲವು ಪ್ರಾಪ್ತಿ ದೊರಕಿತೋ ಎನಗೆ"-ಎಂದಿದ್ದಾರೆ.

**ಏಸುದಿನವಾಯಿತೋ** = ಎಷ್ಟು ಜನ್ಮ ಜನ್ಮಾಂತರಗಳು ಕಳೆದು ಹೋದುವೋ ? ಜೀವನ ಸ್ವರೂಪದೇಹವು ಅನಾದಿ ಮತ್ತು ನಿತ್ಯ. ಅ

ಸ್ವರೂಪ ದೇಹಕ್ಕೆ ಆವರಣ ರೂಪದಲ್ಲಿರುವ ಪ್ರಾಕೃತವಾದ ಲಿಂಗದೇಹವು ಅನಾದಿ. ಆದರೆ ಸಾಂತ್ಯವಾದದ್ದು. ಅಸೃಜ್ಯಾವಸ್ಥೆಯಲ್ಲಿ ಜೀವರ ಸ್ವರೂಪ ಶರೀರಕ್ಕೂ ಮತ್ತು ಲಿಂಗ ಶರೀರಕ್ಕೂ ಸಂಪರ್ಕವಿರುವುದಿಲ್ಲ. ಲಿಂಗದೇಹವು ಸ್ವರೂಪ ಶರೀರಕ್ಕೆ ಸಾವಕಾಶವಾಗಿ ಹೊಂದಿರುವುದು.

ಶ್ರೀ ಹರಿಯು ತನ್ನ ಇಚ್ಛಾರೂಪವಾದ ಅಘಟನಾ ಘಟನಾ ಶಕ್ತಿ ಸಾಮರ್ಥ್ಯದಿಂದ ಲಿಂಗದೇಹದ ಸಂಪರ್ಕವನ್ನು ಸ್ವರೂಪ ಶರೀರಕ್ಕೆ ಉಂಟು ಮಾಡುವನು. ಆಗ ಲಿಂಗದೇಹವು ನಿರವಕಾಶವಾಗಿ ಪರಿಣಮಿಸಿ, ಪ್ರಾಕೃತ ತ್ರಿಗುಣಗಳಿಂದ ಜೀವನು ಬದ್ಧನಾಗುವನು, ಈ ಪ್ರಕ್ರಿಯೆಗೆ-"ಲಿಂಗೋಪಾದಾನ" ಅಥವಾ "ಲಿಂಗೋಪಚಯು"-ಎಂದು ಹೆಸರು. ಈ ಪ್ರಕ್ರಿಯೆಯಿಂದ ಪ್ರಪ್ರಥಮವಾಗಿ ಜೀವನಿಗೆ ಸಂಸಾರಾವಸ್ಥೆ ಉಂಟಾಗುವುದು. ಈ ಪ್ರಾಕೃತ ತ್ರಿಗುಣಗಳ ಸಂಬಂಧವೇ ಸೃಷ್ಟಿಗೆ ಕಾರಣವು. ಅಲ್ಲಿಂದ ಆರಂಭವಾಗಿ ಜೀವನಿಗೆ ಕರ್ಮ ಭೋಗಕ್ಕಾಗಿ, ಅನೇಕ ಜನ್ಮಗಳ ಪ್ರಾಪ್ತಿ, **ಬೀಗ ಮುದ್ರೆಯ ಮಾಡಿ** = ಬಾಗಿಲಿಗೆ ಹಾಕಿರುವ ಮೊಹರಿನ ಮುದ್ರೆ ಅಂದರೆ ಅನಾದಿಕಾಲದಿಂದ ಜೀವನು ಬದ್ಧನಾಗಿದ್ದಾನೆ.

ಈ ಬಂಧನದಿಂದ ಬಿಡುಗಡೆಯೇ-"ಮುಕ್ತಿ"-ಎನಿಸುವುದು. ಅದು ಶ್ರೀ ಹರಿಯ ಪರಮ ಪ್ರಸಾದದಿಂದಲೇ ಸಾಧ್ಯ. ಕರ್ಮ ಬಂಧಕನೂ ಅವನೇ-ಕರ್ಮವಿಮೋಚಕನೂ ಅವನೇ, **ವಾಸವಾಗಿದ್ದರೋ ದುರುಳರಿಲ್ಲಿ** = ಅಹಂಕಾರ-ಮಮಕಾರ-ಕಾಮ ಕ್ರೋಧಾದಿ ಅರಿಷಡ್ವರ್ಗಗಳು ಅವುಗಳನ್ನು ಪ್ರಚೋದಿಸುವ ದೃತ್ಯರು ನಮ್ಮಲ್ಲಿಯೇ ವಿದ್ಯಮಾನರಾಗಿದ್ದಾರೆ.

**ಮೋಸವಾಯಿತು** = ಇದನ್ನು ಅರಿಯದೇ ಜೀವನು ವಂಚಿಸಲ್ಪಟ್ಟ. ಅಂದರೆ ಅಹಂಕಾರ ಮಮಕಾರಗಳಿಂದ ಗ್ರಸ್ತನಾಗಿ ಅಹಂಕರ್ತೃತ್ವ ಜ್ಞಾನವನ್ನು ಪಡೆದು, ಸರ್ವ ಕರ್ತನಾದ ಶ್ರೀ ಹರಿಯನ್ನು ಮರೆತ, **ಇಂದಿನ ತನಕ** = ಇಲ್ಲಿಯವರೆಗೆ, ಅಂದರೆ, ಬಿಂಬಾರೋಕ್ಷ ಪರ್ಯಂತ, **ತಮಸಿನ ರಾಶಿಯೊಳಗೆ** = ತಮಸ್ಸು ಎಂದರೆ ಕತ್ತಲೆ. ಅಜ್ಞಾನವೇ ಕತ್ತಲೆ. ಅಹಂ

ಕರ್ತೃತ್ವವೆಂಬ ಅಜ್ಞಾನದ ದಟ್ಟವಾದ ಆವರಣದಿಂದ ಆಚ್ಛಾದಿತವಾಗಿ, ಬಿಂಬ ದರ್ಶನವಾಗಲಿಲ್ಲ. ಈ ಅಭಿಪ್ರಾಯವನ್ನೇ-"ತಮಸಿನ ರಾಶಿಯೊಳಗೆ ಹೂಳಿ ಕಾಣಿಸುತ್ತಿರಲಿಲ್ಲ"-ಎಂದಿದ್ದಾರೆ-ದಾಸರಾಯರು.

**ಹರಿಗುಣವೆಂಬ** = ಶ್ರೀ ಪರಮಾತ್ಮನ ಅನಂತಕಲ್ಯಾಣ ಗುಣಗಳೆಂಬ, **ಕೀಲಿ** = ಬೀಗದ ಕೈ ದ್ವಾರ ಮುಚ್ಚಿದೆ. ಅದಕ್ಕೆ **ಬೀಗಮುದ್ರೆ** ಹಾಕಿದೆ. ಬೀಗವನ್ನು ತೆರೆಯಲು **ಬೀಗದ ಕೈ** ಅತ್ಯಗತ್ಯ. ಇಲ್ಲಿ ಅಂತರಂಗದ ಬಾಗಿಲಿನ **ಬೀಗ** ಮುದ್ರೆಯನ್ನು ತೆಗೆಯುವ ಕೀಲಿಯು, **ಭಗವಂತನ ಮಂಗಳಕರವಾದ ಗುಣಗಳು.** ಅವನ ಗುಣೋಪಾಸನೆಯಿಂದ ಅಂತರಂಗದ ದ್ವಾರವು ತೆರದು, ಅಲ್ಲಿ ವಿದ್ಯಮಾನವಾಗಿರುವ ಬಿಂಬನ ದರ್ಶನವಾಗುವುದು. **ಗುರು ಕರುಣವೆಂಬಂಥ** = ಗುರುವಿನ ಅನುಗ್ರಹವೆಂಬ ಗುರು ಕಾರುಣ್ಯ ದ್ವಾರಾ ಹರಿಯ ಅನುಗ್ರಹಪ್ರಾಪ್ತಿ "ಮುಕುಂದ ಭಕ್ತ್ಯೈಃ ಗುರುಭಕ್ತಿ ಜಾಯ್ಯೈ" :-ಎಂಬ ಸಮಧ್ವ ವಿಜಯಕಾರರ ವಚನದಂತೆ, ಶ್ರೀ ಹರಿಯಲ್ಲಿ ಭಕ್ತಿ ಉಂಟಾಗಬೇಕಾದರೆ, ಆದಕ್ಕೆ ಕಾರಣವು ಗುರು ಕಾರುಣ್ಯ ಶ್ರೀ ಹರಿಯ ಗುಣೋಪಾಸನೆ ಎಂಬ ಕೀಲಿಯಿಂದ, ಗುರು ಕಾರುಣ್ಯವೆಂಬ **ಶಕ್ತಿ**ಯಿಂದ ಅಂತರಂಗದ ಬೀಗಮುದ್ರೆ ತೆರೆಯಿತೆಂದು ದಾಸರಾಯರು ಹೇಳುತ್ತಾರೆ. ಇಷ್ಟೇ ಸಾಲದು, **ಪರಮ ಭಾಗವತರ ಸಹವಾಸದಲಿ** = ಶ್ರೀ ಹರಿಯ ಏಕಾಂತ ಭಕ್ತರ ಸಂಗ ಅತ್ಯವಶ್ಯಕ.

ಶ್ರೀ ಹರಿಯ ಗುಣೋಪಾಸನೆ-ಗುರುವಿನ ಪರಮ ಕಾರುಣ್ಯ-ಜೊತೆಗೆ ಭಾಗವತರ ಸಹವಾಸ-ಇವೆಲ್ಲವೂ ಮುಖ್ಯ ಸಾಧನಾಂಶಗಳು, **ಹರಿಸ್ಮರಣೆಯಿಂದಲ್ಲಿ** ಶ್ರೀ ಪರಮಾತ್ಮನ ದಿವ್ಯ ನಾಮಸ್ಮರಣೆಯ ದ್ವಾರಾ (ಶ್ರೀ ಹರಿಯ ದಿವ್ಯ ನಾಮಸ್ಮರಣೆ-ಸಕಲ ಪಾಪಗಳ ಪರಿಹಾರ), **ಬೀಗ ಮುದ್ರೆಯ ತೆಗೆದೆ** ಭದ್ರವಾಗಿ ಮುಚ್ಚಿದ ಅಂತರಂಗದ ದ್ವಾರಕ್ಕೆ ಹಾಕಿದ್ದ ಬೀಗಮುದ್ರೆಯನ್ನು ತೆರೆದು, ಬಿಂಬದರ್ಶನ ಉಂಟಾಗಲು ಕಾರಣವಾಯಿತು.

**ಸುತ್ತಲಿದ್ದವರೆಲ್ಲ** = ಸತ್ಸಾಧನೆಗೆ ಪ್ರತಿಬಂಧಕರಾಗಿದ್ದ ಅಸುರೀ ಶಕ್ತಿಗಳು ಕಾಮ ಕ್ರೋಧಾದಿ ಅರಿಷಡ್ವರ್ಗಗಳು. ಅಹಂಕಾರ ಮಮಕಾರ ಇತ್ಯಾದಿಗಳು ಸಾಧಕರ ಸತ್ಸಾಧನೆಗೆ ಪ್ರತಿಬಂಧಕ ಸಾಮಗ್ರಿಗಳು, **ಪಲಾಯನವಾದರು** = ಓಡಿ ಹೋದರು ಬಿಂಬಾಪರೋಕ್ಷದಿಂದ ಸಂಚಿತ ಕರ್ಮಗಳ ಪೂರ್ಣನಾಶ. ಆಗಾಮಿ ಕರ್ಮಗಳ ಲೇಪವಿಲ್ಲ. ಪ್ರಾರಬ್ಧ ಕರ್ಮ ಭೋಗ ಮಾತ್ರ.

**ಭಕ್ತಿ ಕಕ್ಕಡವೆಂಬ ಜ್ಞಾನದೀಪ** = ಭಕ್ತಿ ಎಂಬುದೇ ಜ್ಞಾನಜ್ಯೋತಿ ಕಕ್ಕಡವೆಂದರೆ, ಎಣ್ಣೆಯಿಂದ ಉರಿಯುವ ಪಂಜಿನದೀಪ. ಶ್ರೀ ಹರಿಯ ಮಹಾತ್ಮ ಜ್ಞಾನದಿಂದ ಭಕ್ತಿಯ ಅಭಿವ್ಯಕ್ತಿ.

ಸುಜ್ಞಾನದಲ್ಲಿ ಭಕ್ತಿ–ವೈರಾಗ್ಯಗಳು ಹಾಸುಹೊಕ್ಕಾಗಿ ಸೇರಿಕೊಂಡಿವೆ. ಇದರಿಂದ ಜ್ಞಾನ–ಭಕ್ತಿ-ವೈರಾಗ್ಯಗಳೆಂಬ ಪ್ರವೃತ್ತಿಗಳು ಬೇರೆ ಬೇರೆ ಅಲ್ಲ. ಒಂದರಲ್ಲಿ ಮತ್ತೊಂದು ಅಡಕವಾಗಿದೆ, **ಜತ್ತಾಗಿ ಹಿಡಕೊಂಡು** = ಎಚ್ಚರಿಕೆಯಿಂದ ಗಟ್ಟಿಯಾಗಿ ಕೈಯ್ಯಲ್ಲಿ ಹಿಡಿದುಕೊಂಡು ಇದರ ಭಾವ-ಜ್ಞಾನವು ನಿಸ್ಸಂಶಯವಾಗಿರಬೇಕು. "ಇದಮಿತ್ಥಂ"–ಎಂಬ ಸತ್ಯಭೂತವಾದ ಜ್ಞಾನ ಅನ್ಯಥಾಜ್ಞಾನ, ವಿಪರೀತ ಜ್ಞಾನಗಳಿಗೆ ಒಳಗಾಗದೆ ದೃಢವಾದ ಸುಸಮೀಚೀನ ಜ್ಞಾನದಿಂದ-ಎಂದರ್ಥ.

**ದ್ವಾರದ ಒಳಗೆ ಪೊಕ್ಕೆ** = ಅಂತರಂಗದ ಮಂದಿರವನ್ನು ಪ್ರವೇಶಿಸಿದೆ. **ಎತ್ತ ನೋಡಿದರೆ ಅತ್ತ** = ಸುತ್ತಲೂ ಎಲ್ಲೆಲ್ಲಿ ನೋಡಿದರೆ, ಅಲ್ಲಲ್ಲಿ, **ಶೃಂಗಾರ ಸದನ** = ಹೃದ್ಗತ ಕಮಲ ಪೀಠದಲ್ಲಿ ದೇದೀಪ್ಯನಾಗಿ ವಿರಾಜಮಾನನಾಗಿರುವ ಬಿಂಬಮೂರ್ತಿಯ ಸನ್ನಿಧಾನ ವಿಶೇಷದಿಂದ, ಇಡೀ ಅಂತರಂಗದ ಸದನವೇ ಶೃಂಗಾರಮಯವಾಗಿದೆ.

**ಹೊರಗೆ ದ್ವಾರವು ನಾಲ್ಕು** = ಆ ಅಂತರಂಗದ ಅರಮನೆಗೆ ಹೊರಗೆ ನಾಲ್ಕು ಪ್ರಧಾನ ದ್ವಾರಗಳು-(ಪೂರ್ವ-ದಕ್ಷಿಣ–ಪಶ್ಚಿಮ–ಉತ್ತರ ದಿಗ್ಭಾಗಗಳಲ್ಲಿ), **ಒಳಗೈದು ದ್ವಾರಗಳು** = ಅರಮನೆಯ ಒಳಗೆ ಪಂಚ ಮನೋ

ವೃತ್ತಿಗಳೆಂಬ ಐದು ದ್ವಾರಗಳು. (ಮುಕ್ತಿ ಧಾಮವಾದ ವೈಕುಂಠವೂ ಸಹ ಹೀಗೆಯೇ), **ಪರದಾರಿಗೆ ಪ್ರಾಣ** ಅರಮನೆಯನ್ನು ಪ್ರವೇಶಿಸುವ ರಾಜಮಾರ್ಗದಲ್ಲಿ ಶ್ರೀ ಮುಖ್ಯ ಪ್ರಾಣದೇವರು. (ಇದೇ ಸುಷುಮ್ನಾ ನಾಡಿ-ಎಂಬ ರಾಜ ಪಂಥಾನ-ಅಲ್ಲಿ ತಳವಾರ-ಶ್ರೀ ವಾಯುದೇವರು).

**ಜಯ ವಿಜಯರು** = ಉಳಿದ ದಿಕ್ಕುಗಳಲ್ಲಿ ವಿಷ್ಣು ಪಾರ್ಷದರಾದ ಜಯ ಮತ್ತು ವಿಜಯರೆಂಬ ದ್ವಾರ ಪಾಲಕರು. (ಕಾವಲುಗಾರರು), **ಮಿರುಗುವ್ರೋ ಮಧ್ಯೆ ಮಂಟಪ** = ಅಂತರಂಗವೆಂಬ ಅರಮನೆಯ ನಡು ಪ್ರದೇಶದ ಮಧ್ಯೆ ಥಳ ಥಳಿಸಿ ಹೊಳೆಯುವ ಹೃತ್ಪದ್ಮವೆಂಬ ಮಂಟಪ (ಮೂಲೇಶ ನಾಮಕ ಬಿಂಬನು ಪೀಠಸ್ಥನಾಗಿರುವ ಸಿಂಹಾಸನ), **ಕೋಟಿ ರವಿಯಂತೆ** = ಅನಂತ ಸೂರ್ಯರ ಅಖಂಡ ಪ್ರಕಾಶದಂತೆ (ಈ ಉಪಮಾನ ಕೇವಲ ಔಪಚಾರಿಕವು), **ಸರಸಿಜನಾಭನ** = ತನ್ನ ನಾಭಿಯಲ್ಲಿ ಬ್ರಹ್ಮಾಂಡದ ಉದಯಕ್ಕೆ ಕಾರಣವಾದ ಕಮಲವನ್ನು ಸ್ವೇಚ್ಛೆಯಿಂದ ಸೃಜಿಸಿದ, ಪದ್ಮನಾಭನ, **ಅರಮನೆಯ ಸೊಬಗು** = ಅವನ ಧಾಮದ ವೈಭವ.

**ಸ್ವ ಮೂರ್ತಿಗಣ ಮಧ್ಯ** = ತನ್ನ ಏಕಾಂತ ಭಕ್ತರಾದ ಶ್ರೀ ಲಕ್ಷ್ಮೀ ದೇವಿ, ಚತುರ್ಮುಖ ಬ್ರಹ್ಮದೇವರು ಶ್ರೀ ವಾಯುದೇವರು. ಗರುಡ-ಶೇಷ-ರುದ್ರಾದಿ ದೇವತಾ ಗಣಗಳ ಮಧ್ಯೆ, **ಸಚ್ಚಿದಾನಂದ** = ಜ್ಞಾನಾನಂದ ಪರಿಪೂರ್ಣನಾದ, **ಏಕ** = ಏಕಮೇವ ಅದ್ವಿತೀಯನಾದ, **ರಮೆ ಧರೆಯರಿಂದ** = ಶ್ರೀ ಲಕ್ಷ್ಮೀದೇವಿ ಮತ್ತು ಭೂ ದೇವಿಯರಿಂದ, **ಆಲಿಂಗಿತ್ಪದಿ** = ಆಲಿಂಗನದಿಂದ ಅಂದರೆ, ಶ್ರೀ ಪರಮಾತ್ಮನು ಶ್ರೀ ಭೂ ದೇವಿಯರನ್ನು ಆಲಂಗಿಸಿಕೊಂಡಿದ್ದಾನೆ. ಮಹಾತ್ಮಕ್ಷವಾಲತೆಯು ಆಶ್ರಿತವಸ್ತು, ಇದರಿಂದ, ಶ್ರೀ ಭೂ ದೇವಿಯರು ಶ್ರೀ ಪರಮಾತ್ಮನ ಅಧೀನರಾಗಿ ಅವನ ಆಶ್ರಮದಲ್ಲಿದ್ದಾರೆಂತ ತಾತ್ಪರ್ಯ, **ಕಮಲಾಜಾದಿಗಳಿಂದ** = ಬ್ರಹ್ಮದೇವರು ಇತ್ಯಾದಿ ದೇವತಾ ವರ್ಗದಿಂದ (ಕಮಲ—ಶ್ರೀ ಪದ್ಮನಾಭನಾಮಕ ಮಹಾವೃಕ್ಷವಾಲತೆಯ ಆಲಂಗಿಸಿಕೊಳ್ಳುವುದು. ಈ ದೃಷ್ಟಾಂತದಿಂದ ಮರ-

ಲತೆಗೆ ಆಶ್ರಯವಾಗಿದೆ. ಲತೆಯು ಆಶ್ರಿತವಸ್ತು, ಇದರಿಂದ ಶ್ರೀ ಭೂದೇವಿಯರು ಶ್ರೀ ಪರಮಾತ್ಮನ ಅಧೀನರಾಗಿ ಅವನ ಆಶ್ರಯದಲ್ಲಿದ್ದಾರೆಂತ ತಾತ್ಪರ್ಯ. ಕಮಲಾಜಾದಿಗಳಿಂದ.........ಶ್ರೀ ಹರಿಯ ನಾಭೀಕಮಲ. ಕಮಲಜ = ನಾಭೀಕಮಲ ಸಂಜಾತರಾದ ಚತುರ್ಮುಖ ಬ್ರಹ್ಮದೇವರು), **ತುತಿಸಿ ಕೊಳ್ಳುವ** = ಸಂಸ್ತೂಯಮಾನನಾಗಿ ಪೂಜಾಧಿಕಾರ ಶ್ರೀ ರಮಾದೇವರದ್ದು. ಬ್ರಹ್ಮ ರುದ್ರಾದಿಗಳಿಂದ ವಿನುತನು.

**ಹೃದಯ ಕಮಲದೊಳಗಿರುವ** = ದಹರಾಕಾಶದಲ್ಲಿರುವ ಹೃತ್ಪದ್ಮದಲ್ಲಿ ವಿರಾಜಮಾನನಾಗಿರುವ ಬಿಂಬಮೂರ್ತಿ, **ಶ್ರೀ ವಿಜಯವಿಠ್ಠಲನ** = ಅಗ್ರೇಶ ಮತ್ತು ಮೂಲೇಶ ನಾಮಕನಾದ **ಸ್ವ** ಬಿಂಬಮೂರ್ತಿ ಶ್ರೀ ವಿಜಯವಿಠ್ಠಲ ನಾಮಕ ಶ್ರೀ ಹರಿಯನ್ನು, **ಕಂಡೆ** = ಸಂದರ್ಶಿಸಿದ ಅಂದರೆ ಬಿಂಬಾಪರೋಕ್ಷ ದರ್ಶನದಿಂದ ಧನ್ಯನಾದೆ-ಎಂದರ್ಥ.



**೭೩**

**ಕೀರ್ತನೆ-೩೦**

**ಉಗಾಭೋಗ**

**(ಗೋಪಾಲವಿಠ್ಠಲಾಂಕಿತ)**

ಅನ್ಯರಿಂದಲಿ ಸುಖವಾಯಿತೆಂಬುದಕಿಂತ
ನಿನ್ನಿಂದಾಯಿತೆಂಬ ಕ್ಲೇಶ ಮೇಲಯ್ಯ
ನಿನ್ನನರಿಯದೆ ಅನ್ಯರ ಬಲ್ಲೆನೆಂಬುದಕಿಂತ
ಕಣ್ಣಿಲ್ಲದಿರುವ ಕುರುಡ ಮೇಲಯ್ಯ
ಪುಣ್ಯ ಪಾಪವರಿಯದೆ ಬದುಕುವ ಮನು
ಜನಿಗಿಂತ ನಾಯಿ ಕುನ್ನಿ ಲೇಸಯ್ಯ ಕುಲ-
ಹೀನನಾದರು ಸುಖ ದುಃಖಗಳು

ನಿನ್ನಿಂದಾಯಿತೆಂಬ ಮತಿ
ಚೆನ್ನಾಗಿ ತಿಳಿಸಯ್ಯ **ಗೋಪಾಲವಿಠ್ಠಲ** ॥



**ಅರ್ಥವಿವರಣೆ :**

**ಶ್ರೀ ಗೋಪಾಲದಾಸವರ್ಯರ** ಸುಂದರವಾದ **ಉಗಾಭೋಗ ರೂಪದ** ಸಾಹಿತ್ಯವಿದು, **ಅನ್ಯರಿಂದಲಿ**= ಶ್ರೀ ಹರಿಯನ್ನು ಬಿಟ್ಟು, ಇತರರು ಯಾರಿಂದಲಾಗಲೀ, **ಸುಖವಾಯಿತು ಎಂಬುವುದಕಿಂತ**=ನನಗೆ ಸುಖವುಂಟಾಯಿತು ಎಂದು ಹೇಳುವುದಕ್ಕಿಂತ, **ನಿನ್ನಿಂದ ಅಯಿತು ಎಂಬ ಕ್ಲೇಶ**- ನಿನ್ನ ಪ್ರೇರಣೆಯಿಂದುಂಟಾದ ದುಃಖವು, **ಮೇಲಯ್ಯ** - ಉತ್ತಮವಾದದ್ದು ಎಂದು ದಾಸರು ಹೇಳುತ್ತಾರೆ.

ಮಾನವರ ಸುಖ ದುಃಖಗಳಿಗೆಲ್ಲಾ ಶ್ರೀ **ಹರಿಯೇ** ಮುಖ್ಯ ಕಾರಣನು. ಇತರರಿಂದ ನಮಗೆ ಆನಂದ ಉಂಟಾಗಬಹುದು. ಆದರೆ ಅದು ಅನಿತ್ಯ ಮತ್ತು ಅಯುಕ್ತವಾದದ್ದು. ಅದಕ್ಕಿಂತ ಶ್ರೀ ಹರಿಯ ಪ್ರೇರಣೆಯಿಂದ ಉಂಟಾಗುವ ದುಃಖರೂಪವಾದ ಕ್ಲೇಶವೇ ಲೇಸು. ನಮ್ಮ ಸುಖ ದುಃಖಗಳೆಲ್ಲವೂ ನಮ್ಮ ಕರ್ಮದ ಅನುಭೋಗದ ಫಲರೂಪಗಳು. ಕರ್ಮಗಳು ಗುಣಜನ್ಯವಾದುವು. ಸತ್ತ್ವ-ರಜ-ತಮ ಎಂಬ ತ್ರಿಗುಣಗಳು ಕೇವಲ ಜಡಗಳು.

ಅವುಗಳ ಪ್ರೇರಕ ಶಕ್ತಿಯೇ ಗುಣಾಂತರ್ಗತವಾದ ಭಗವಂತನ ಕ್ರಿಯೆಯು. ಸತ್ತ್ವಗುಣ ಪ್ರಾಚುರ್ಯದಿಂದ ಸತ್ಕರ್ಮಗಳ ಅಭಿವ್ಯಕ್ತಿ, ಅವುಗಳ ಫಲವೇ ಸುಖವು. ರಜೋಗುಣದ ಪ್ರಾಚುರ್ಯದಿಂದ ಸುಖ ದುಃಖ ಮಿಶ್ರಿತವಾದ ಕರ್ಮಗಳ ಅಭಿವ್ಯಕ್ತಿ. ಅದರಿಂದ ಮಿಶ್ರಕರ್ಮಾನುಭವ. ತಮೋಗುಣದ ಪ್ರಾಚುರ್ಯದಿಂದ ದುಷ್ಕರ್ಮಗಳ ಅಭಿವ್ಯಕ್ತಿ. ತದ್ದ್ವಾರಾ ದುಃಖಾನುಭವ. ಇಂತು, ಶ್ರೀ ಹರಿಯಿಂದ ನಡೆಯುವ ಗುಣ

ಗಳ ಅಭಿವ್ಯಕ್ತಿ ರೂಪವಾದ ಕ್ರಿಯೆಯೇ ಕರ್ಮವು. ಅವುಗಳ ಫಲಾನುಭವವೇ ಸುಖ-ದುಃಖಗಳು.

**ನಿನ್ನನರಿಯದೆ** = ನಿನ್ನ ಬಿಂಬಕ್ರಿಯಾ ರೂಪವಾದ ವ್ಯಾಪಾರ ವಿಶೇಷಗಳನ್ನು ತಿಳಿಯದೇ, **ಅನ್ಯರ ಬಲ್ಲೆನೆಂಬುದಕಿಂತ** = ಇತರರು ಅದಕ್ಕೆ ಕಾರಣರು ಎಂದು ತಿಳಿಯುವುದಕ್ಕಿಂತ, **ಕಣ್ಣಿಲ್ಲದಿರುವ ಕುರುಡ ಮೇಲಯ್ಯ** = ನೋಟದ ಶಕ್ತಿಯನ್ನೇ ಕಳೆದುಕೊಂಡಿರುವ ಅಂಧನೇ ಲೇಸು. ನಾವು ಕಣ್ಣಿದ್ದೂ ಕುರುಡರಾಗಿದ್ದೇವೆ. ಜ್ಞಾನ ದೃಷ್ಟಿಯಿಂದ ನೋಡಿದಾಗ ಮಾತ್ರ, ಶ್ರೀ ಪರಮಾತ್ಮನ ಕರ್ತೃತ್ವದ ಅರಿವುಂಟಾಗುವುದು.

ಅವನೇ ಸರ್ವಕ್ಕೂ ಕರ್ತನಲ್ಲದೇ ಅನ್ಯರಾರೂ ಅಲ್ಲ, **ಪುಣ್ಯ ಪಾಪವನರಿಯದೆ** = ಪುಣ್ಯ ಪಾಪಗಳ ನೆಲೆಯನ್ನು ತಿಳಿಯದೇ, **ಬದುಕುವ ಮನುಜನಿಗಿಂತ** = ಜೀವಿಸುವ ಮಾನವನಿಗಿಂತ, **ನಾಯಿ ಕುನ್ನಿ ಲೇಸಯ್ಯ** = ನಾಯಿಯ ಮರಿಯೇ ವಾಸಿ. ಅಂದರೆ, ಶ್ರೀ ಪರಮಾತ್ಮನ ಸರ್ವ ಕರ್ತೃತ್ವ ಗುಣವನ್ನು ಅರಿಯದೇ, ನಮ್ಮ ಜೀವನದಲ್ಲಿ ನಡೆಯುವ ಕ್ರಿಯೆಗಳೆಲ್ಲವೂ ನಮ್ಮಿಂದಲೇ ನಡೆಯುತ್ತಿವೆ. ಎಂಬ ಅಹಂಕರ್ತೃತ್ವಾಭಿಮಾನ-ದುರಭಿಮಾನ ಮತ್ತು ಇತರರಿಂದ ಆಯಿತೆಂಬ ಅನ್ಯಥಾಜ್ಞಾನ-ಇರುವ ನರನ ಬಾಳಿಗಿಂತ ನಾಯಿ ನರಿಗಳ ಬದುಕೇ ಲೇಸೆನ್ನುತ್ತಾರೆ ದಾಸರಾಯರು. ಮಾನವನಿಗೆ ವಿವೇಚನಾ ಶಕ್ತಿ ಇದೆ.

ಯಾವುದು ವಿಧಿ-ಯಾವುದು ನಿಷಿದ್ಧ ಎಂಬುದರ ಸ್ಪಷ್ಟ ಅರಿವು ಇದೆ. ಈ ವಿವೇಚನಾ ಶಕ್ತಿಯನ್ನು ಮಾನವನು ಸ್ವಾರ್ಥಕ್ಕಾಗಿ ದುರುಪಯೋಗಪಡಿಸಿಕೊಳ್ಳುತ್ತಿದ್ದಾನೆ. ಶ್ರೀ ಪರಮಾತ್ಮನ ಬಿಂಬಕ್ರಿಯಾರೂಪವಾದ ಪ್ರಕ್ರಿಯೆಯ ದ್ವಾರಾ ನಡೆಯುತ್ತಿರುವ ಸಕಲ ಕ್ರಿಯೆಗಳನ್ನು ಮಾನವನು ಸ್ವಶಕ್ತಿಯಿಂದ ಆಗುತ್ತಿವೆ-ಎಂದು ತಿಳಿಯುವುದು ಅನ್ಯಥಾ ಜ್ಞಾನವಿಲ್ಲದೇ ಬೇರೆ ಅಲ್ಲ-ಎಂಬುದೇ ತಾತ್ಪರ್ಯ.

**ಕುಲಹೀನನಾದರೂ** = ಹೀನ ಕುಲದಲ್ಲಿ ಸಂಜಾತನಾಗಿ, ಉತ್ತಮ ಸಂಸ್ಕಾರವಿಲ್ಲದವನೂ ಸಹ, ಸುಖ ದುಃಖಗಳು ಶ್ರೀ ಪರಮಾತ್ಮನ ಸಂಕಲ್ಪಾನುಸಾರವಾಗಿ ಒದಗುತ್ತಿವೆ ಎಂದು ತಿಳಿದರೆ, ಅಂತಹ ಕುಲಹೀನನು ಅಹಂಕಾರ ಮಮಕಾರ ಗ್ರಸ್ತವಾದ ಸುಸಂಸ್ಕೃತನಿಗಿಂತಲೂ ಲೇಸು-ಎನ್ನುತ್ತಾರೆ-ದಾಸರಾಯರು. ಅಂತಹ ಸಮೀಚೀನವಾದ ಮತಿಯನ್ನು ನೀಡೆಂದು ಶ್ರೀ ಹರಿಯಲ್ಲಿ ಪ್ರಾರ್ಥಿಸುತ್ತಾರೆ—ಪರಮ ಜ್ಞಾನಿವರೇಣ್ಯರಾದ ದಾಸರಾಯರು.



## ೭೪

## ಕೀರ್ತನೆ–೩೧

## ಆಹ್ವಾನ ಪದ

## (ಅಂಕಿತ–ಪ್ರಸನ್ನವೆಂಕಟ)

ಅಮ್ಮಾ ಬಾರೋ ರಂಗಮ್ಮಾ ಬಾರೋ-ಪುಟ್ಟ
ತಮ್ಮಾ ಬಾರೋ-ಮುದ್ದಿನುಮ್ಮಾ ಬಾರೋ ॥ ॥ಪ॥

ಅಯ್ಯಾ ಬಾರೋ-ಅಜನಯ್ಯಾ ಬಾರೋ—ಚಿನು
ಮಯ್ಯಾ ಬಾರೋ-ಬೆಣ್ಣೆಗಯ್ಯಾ ತಾರೋ ॥ ॥೧॥

ಕಂದ ಬಾರೋ—ಪೂರ್ಣಾನಂದ ಬಾರೋ-ಸುರ
ವಂದ್ಯಾ ಬಾರೋ ಬಾಲ್ಮುಕುಂದಾ ಬಾರೋ ॥ ॥೨॥

ಅಣ್ಣ ಬಾರೋ ತಾವರೆಗಣ್ಣಾ ಬಾರೋ-ಎನ್ನ
ಚಿನ್ನಾ ಬಾರೋ-ಶಿಶು ರನ್ನ ಬಾರೋ ॥ ॥೩॥

ನಲಿದು ಬಾರೋ–ಕರುಣಾ ಜಲಧಿ ಬಾರೋ-ಅಡಿ
ಬಳಿಗೆ ಬಾರೋ-ಕರೆದರೊಲಿದು ಬಾರೋ ॥ ॥೪॥

ಶ್ರೀಶಾ ಬಾರೋ-ಹಸುಗೂಸ ಬಾರೋ-ಪರಿ
ತೋಷಾ ಬಾರೋ–ಪ್ರಸನ್ನ ವೆಂಕಟೇಶ ಬಾರೋ ॥ ॥೫॥



**ಪ್ರಸನ್ನ ವೆಂಕಟದಾಸರ ಸಂಕ್ಷಿಪ್ತ ಜೀವನ ಪರಿಚಯ :-**

೧. ದಾಸರಕಾಲ-೧೭ನೆಯ ಶತಮಾನದ ಮಧ್ಯಕಾಲ. **ಕಾಖಂಡಕಿ ನರಸಪ್ಪನವರು** ದಾಸರ ತಂದೆ. ಅವರ ಜನ್ಮಸ್ಥಳ–ಬಿಜಾಪುರ ಜಿಲ್ಲೆಯ ಬಾಗಲಕೋಟೆ (ಬಾಗಡಕೋಟೆ). ಕಾಶ್ಯಪಗೋತ್ರೋದ್ಭವರು. ಆಶ್ವಲಾಯನ ಸೂತ್ರ-ಋಕ್ ಶಾಖಾಧ್ಯಾಯಿಗಳು ದಾಸರ ವಂಶಸ್ಥರು ದಾಸರ ತಂದೆ ನರಸಪ್ಪಯ್ಯನವರು ವೈದಿಕ ವೃತ್ತಿಯಿಂದ ಜೀವಿಸುತ್ತಿದ್ದರು.

ಆಗ ವಿಜಾಪೂರದಲ್ಲಿ ಮಹಮದ್ ಆದಿಲಷಹ ಎಂಬ ಸರದಾರನು ರಾಜ್ಯವಾಳುತ್ತಿದ್ದನು. ನರಸಪ್ಪಯ್ಯನವರ ಧರ್ಮಪತ್ನೀ-ಶ್ರೀಮತಿ ಲಕ್ಷ್ಮೀಬಾಯಿ. ಈ ದಂಪತಿಗಳಲ್ಲಿ ಕ್ರಿ. ಶ. ೧೬೮೦ ರಲ್ಲಿ ದಾಸರು ಅವತರಿಸಿದರು. ದಾಸರ ವಂಶೀಕರ ಕುಲ ದೈವನಾದ ತಿರುಪತಿ ಶ್ರೀ ವೆಂಕಟೇಶನ ಕೃಪೆಯಿಂದ ಜನ್ಮ ತಾಳಿದ ಕಾರಣದಿಂದ, ಶಿಶುವಿಗೆ-ವೆಂಕಟೇಶ-ನೆಂದ ನಾಮಕರಣ ಮಾಡಿದರು. ಕಾಲಕ್ರಮೇಣ ವೆಂಕಟೇಶನು ವೆಂಕಪ್ಪಯ್ಯನೆಂದು ಖ್ಯಾತ ನಾಮನಾದನು.

೨. ದಾಸರಿಗೆ ಚಿಕ್ಕಂದಿನಲ್ಲಿಯೇ ಮಾತಾಪಿತೃಗಳ ವಿಯೋಗವಾಯಿತು. ಅಣ್ಣನ ಮನೆಯಲ್ಲಿ ವಾಸಿಸುತ್ತಿದ್ದನು. ತಂದೆ ತಾಯಿಗಳನ್ನು ಕಳೆದುಕೊಂಡ ವೆಂಕಪ್ಪಯ್ಯನು ಅನಾಥ ಬಾಲಕನಾಗಿ ಬೆಳೆದ. ಅಣ್ಣನ ಅನಾಕರಣೆ ಮತ್ತು ಅತ್ತಿಗೆಯ ಕಿರುಕುಳಗಳಿಂದ, ಶಾಲೆಯನ್ನು ಕಾಣದೇ

ಅವಿದ್ಯಾವಂತನಾಗಿ ಬೆಳೆದ ಬಾಲಕನನ್ನು ಅಣ್ಣ-ಅತ್ತಿಗೆಯರು ದನಕರುಗಳನ್ನು ಕಾಯಲು ನೇಮಿಸಿದರು.

ಬಾಲ್ಯದಿಂದಲೂ ಅನಾದರಣೀಯವಾಗಿ ವೆಂಕಪ್ಪಯ್ಯನು ದನಗಳನ್ನು ಕಾಯುತ್ತಾ, ಅಡವಿಯ ಪರಿಸರದಲ್ಲಿ ಬೆಳೆದ. ಆದರೆ ಅಣ್ಣನು ಮನೆಯಲ್ಲಿ ಶ್ರೀ ವೆಂಕಟೇಶ ಮಹಾತ್ಮ್ಯ-ಎಂಬ ಗ್ರಂಥವನ್ನು ಪಾರಾಯಣ ಮಾಡುತ್ತಿದ್ದನು ವೆಂಕಟೇಶನು ಬಹು ಭಕ್ತಿಯಿಂದ ಆಲಿಸುತ್ತಿದ್ದನು ಆದರಿಂದ ಬಾಲಕನಿಗೆ ಸಪ್ತಗಿರಿ ನಿವಾಸನ ಮೇಲೆ ಭಕ್ತಿಯು ಸಹಜವಾಗಿ ಬೆಳೆಯಿತು.

೩. ಮನೆಯಲ್ಲಿ ಅತ್ತಿಗೆಯ ಕಿರುಕುಳ ಮತ್ತು ಚಿತ್ರ ಹಿಂಸೆ ದಿನ ದಿನಕ್ಕೆ ಹೆಚ್ಚಾಯಿತು. ಆದರಿಂದ ವೆಂಕಟೇಶನು ಬಹುವಾಗಿ ಮನನೊಂದಿದನು. "ಅಣ್ಣನವರು ಬಂದರೆ, ಅವರಿಗೆ ನಾನು ತಿರುಪತಿಗೆ ಹೊರಟಿದ್ದೇನೆ"-ಎಂದಷ್ಟು ಮನೆಯಲ್ಲಿ ತಿಳಿಸಿ, ಬಾಲಕನು ಶ್ರೀನಿವಾಸನ ಸಂದರ್ಶನ ಭಾಗ್ಯವನ್ನು ಬಯಸುತ್ತಾ, ಪಯಣಿಸಿದನು. ಕಾಲುನಡಿಗೆಯಿಂದಲೇ ತಿರುಪತಿಯನ್ನು ಸೇರಿದನು. ಸಪ್ತಗಿರಿಯ ಭವ್ಯ ಸಾಲನ್ನು ನೋಡಿ, ಬಾಲಕನ ಮೈ ಪುಳುಕಾಂಕಿತವಾಯಿತು. ಕಪಿಲ ತೀರ್ಥದಲ್ಲಿ ಸ್ನಾನಮಾಡಿ, ಹೆಜ್ಜೆ ಹೆಜ್ಜೆಗೆ ನಮಸ್ಕಾರ ಹಾಕುತ್ತಾ, ಸಪ್ತಗಿರಿಯ ಭವ್ಯ ಮೆಟ್ಟಿಲುಗಳನ್ನು ಏರಿದನು. ಶ್ರೀನಿವಾಸನ ದೇಗುಲದ ದರ್ಶನದಿಂದ ಶರೀರ ರೋಮಾಂಚಿತವಾಯಿತು. ಗರುಡಗಂಭಕ್ಕೆ ಪ್ರದಕ್ಷಿಣೆ ಹಾಕಿ, ಆ ದಿವ್ಯ ಮಂಗಳ ಮೂರ್ತಿಯ ಮುಂದೆ ಬಂದು ನಿಂತಿದ್ದಾನೆ ಬಾಲಕ. ಭಕ್ತಿ ಪಾರವಶ್ಯದಿಂದ ಮೈಮರೆತಿದ್ದಾನೆ. ಎರಡು ಕಂಗಳ ಧಾರೆ ಸುರಿಯುತ್ತಿದೆ.

ಭೂಲೋಕದ ಆ ವೈಕುಂಠ ಪತಿಗೆ ದೀರ್ಘದಂಡ ನಮನ ಮಾಡಿದ. ಆಗ ಪರಮ ಕರುಣಾಳುವಾದ ಶ್ರೀನಿವಾಸನು ಬಾಲಕನಿಗೆ ತನ್ನ ದಿವ್ಯದರ್ಶನ ಭಾಗ್ಯವನ್ನು ಕರುಣಿಸಿದ. ಬಾಲಕನ ನಾಲಿಗೆಯ ಮೇಲೆ ಪ್ರಸನ್ನ ವೆಂಕಟ-ಎಂಬ ಅಂಕಿತಾಕ್ಷರಗಳನ್ನು ಲಿಪಿಸಿದ ಧ್ಯಾನದಿಂದ ಎಚ್ಚರಗೊಂಡ ಬಾಲಕ. ಅವನ ವದನದಲ್ಲಿ ದಿವ್ಯ ತೇಜಸ್ಸು ಲಾಸ್ಯವಾಡುತ್ತಿದೆ. ಗಿರಿಯ ಮೇಲೆ

ಸ್ವಲ್ಪ ಕಾಲವಿದ್ದು, ಪ್ರಸನ್ನ ವೆಂಕಟಾಂಕಿತದಲ್ಲಿ ಅನೇಕ ಕೀರ್ತನೆ–ಉಗಾಭೋಗ–ಠಾಯಿಗಳನ್ನು ರಚಿಸಿ, ಸಪ್ತಗಿರಿವಾಸನ ಚರಣಾರವಿಂದಗಳಲ್ಲಿ ಅರ್ಪಿಸಿ, ಕೃತಕೃತನಾದನು. ದಾಸರ ಮೊದಲನೆಯ ಕೀರ್ತನೆ.

ತಪ್ಪು ನೋಡದೆ ಬಂದೆಯಾ ನನ್ನ ತಂದೆಯಾ ಅಪ್ಪ ತಿರುವೆಂಕಟೇಶನೆ ನಿರ್ದೋಷನೆ ॥ಪ॥. ಆಗಿದೆ.

೪. ದಾಸರ ಕಾಲದಲ್ಲಿ ಮುದ್ಗಲ ಜನಾರ್ದನಾಚಾರ್ಯರೆಂಬ ಪ್ರಖ್ಯಾತ ಪಂಡಿತವರೇಣ್ಯರಿದ್ದರು. ಅವರಲ್ಲಿ ಶಾಂತಿಪಾಠ ಹಾಕಿ ಶಿಷ್ಯತ್ವ ವಹಿಸಿ, ಐದಾರು ವರ್ಷಗಳು ಅವರಲ್ಲಿಯೇ ಇದ್ದು, ಸಂಸ್ಕೃತವನ್ನು ಅಭ್ಯಸಿಸಿ, ಭಾರತ, ಭಾಗವತಾದಿ ಶಾಸ್ತ್ರಗಳನ್ನು ಮನನ ಮಾಡಿದರು. ದ್ವೈತ ಸಿದ್ಧಾಂತದ ಪ್ರಮೇಯ ರಹಸ್ಯಗಳೆಲ್ಲಾ ಅಪರೋಕ್ಷೀಕೃತ ಶ್ರೀಶರಾದ ದಾಸರಿಗೆ ಕರತಲಾಮಲಕವಾಯಿತು.

ತಮ್ಮ ಕುಲದೈವನಾದ ಶ್ರೀನಿವಾಸನ ಪೂರ್ಣಾನುಗ್ರಹಕ್ಕೆ ಪಾತ್ರರಾಗಿದ್ದ, ಶ್ರೀ ಪ್ರಸನ್ನ ವೆಂಕಟದಾಸರು ತಮ್ಮ ಜೀವನದಲ್ಲಿ ಅನೇಕ ಪವಾಡಗಳನ್ನು ತೋರಿಸಿ, ಪ್ರಖ್ಯಾತ ಹರಿದಾಸರಾಗಿ ವೈಭವದಿಂದ ಮೆರೆದರು. ಹುಲಿಗೆ ಅಂಗಾರ ಹಚ್ಚಿ ತಮ್ಮ ಧೈರ್ಯ ಪ್ರದರ್ಶನ ಮಾಡಿದ ಪ್ರಸಂಗದಿಂದಾಗಿ, ದಾಸರನ್ನು, **ಅಂಗಾರದ ಆಚಾರ್ಯರೆಂದು** ಜನರು ಕರೆದರು.

ದಾಸರಿಗೆ ದಾಸಶ್ರೇಷ್ಠ ಪುರಂದರ ದಾಸರಲ್ಲಿ ಅತಿಶಯವಾದ ಭಕ್ತಿ ಇತ್ತು. ಅವರ-"ತಂದೆ ಪುರಂದರದಾಸರ ಸ್ಮರಿಸುವೆ"-ಎಂಬ ಕೀರ್ತನೆಯೊಂದರಲ್ಲಿ ಈ ಭಕ್ತಿ ಭಾವವು ಪ್ರತಿಪಾದಿತವಾಗಿದೆ.

೫. ಇತರ ದಾಸವರೇಣ್ಯರಂತೆ, ಈ ದಾಸರೂ ಸಹ ಅಖಂಡ ಭಾರತದ ಪುಣ್ಯ ಕ್ಷೇತ್ರಗಳ ಸಂಚಾರವನ್ನು ಕೈಕೊಂಡು, ಕ್ಷೇತ್ರ ಮೂರ್ತಿಗಳನ್ನು ಸಂದರ್ಶಿಸಿ, ಅಲ್ಲಲ್ಲಿ ಕೀರ್ತನೆಗಳನ್ನು ರಚಿಸಿರುತ್ತಾರೆ.

೬. ಅನೇಕ ಕೀರ್ತನ ಸಾಹಿತ್ಯದ ಜೊತೆಗೆ, ಉಗಾಭೋಗಗಳು, ಠಾಯುಗಳನ್ನು ರಚಿಸಿದರು. ಅವರ ಕೃತಿ ವಿಶೇಷವೆಂದರೆ-ಶ್ರೀಮದ್ಭಾಗವತ ಪುರಾಣವನ್ನು ಪೂರ್ವಾರ್ಧವನ್ನು ಕನ್ನಡದಲ್ಲಿ ಬರೆದಿರುತ್ತಾರೆ. ಇದಕ್ಕೆ ಪ್ರಸನ್ನ ವೆಂಕಟರ ಭಾಗವತ-ಎಂದು ಹೆಸರು.

1) ಸಮಸ್ತನಾಮ ಮಣಿಗಣ ಷಟ್ ಚರಣ ಪದ್ಯಮಾಲಾ. 2) ನಾರದರು ಕೊರವಂಜಿ ವೇಷ ತಾಳ್ದ ಚರಿತ್ರೆ. 3) ನವವಿಧ ಭಕ್ತಿಯ ಪದಗಳು. 4) ಶ್ರೀ ಕೃಷ್ಣ ಪಾರಿಜಾತ. 5) ಭ್ರಮರಗೀತಾ ಮತ್ತು 6) ನಾರಾಯಣ ಪಂಜರ ಇವು ದೀರ್ಘ ಕಾವ್ಯ ಸಾಹಿತ್ಯಗಳು.

೭. ಎಪ್ಪತ್ತೆರಡು ವರ್ಷಗಳ ಕಾಲ ಜೀವಿಸಿದ್ದು, 1674 ಶಕೆ, ಅಂಗೀರಸ ಸಂವತ್ಸರದ ಭಾದ್ರಪದ ಶುದ್ಧ ಏಕಾದಶೀ ದಿನದಂದು ಮಧ್ಯ ರಾತ್ರಿಯಲ್ಲಿ ಪಾರ್ಥಿವ ಶರೀರವನ್ನು ತೊರೆದು, ಶ್ರೀ ಹರಿಪದವನ್ನು ಸೇರಿದ ಮಹಾನುಭಾವರಿವರು.

**ಕೀರ್ತನೆಯ ಅರ್ಥವಿವರಣೆ :-**

ಪ್ರಸಕ್ತ ಕೀರ್ತನ ಸಾಹಿತ್ಯದಲ್ಲಿ ಶ್ರೀ ಹರಿಯನ್ನು ಪರಮ ಭಕ್ತಿ ಭಾವದಿಂದ ತಮ್ಮ ಅಂತರಂಗದ ಮಂದಿರಕ್ಕೆ ಆಹ್ವಾನಿಸಿದ್ದಾರೆ. ಶ್ರೀ ಪರಮಾತ್ಮನನ್ನು ಅಮ್ಮ-ತಮ್ಮ-ಅಯ್ಯ-ಕಂದ-ಬಾಲ್ಮುಕುಂದಾ-ಅಣ್ಣ-ಚಿನ್ನ-ಎಂದು ನಾನಾ ರೀತಿಗಳಲ್ಲಿ ಸಂಭೋದಿಸಿ ಕರೆದಿದ್ದಾರೆ.

**ಅಮ್ಮ ಬಾರೋ** = ಶ್ರೀ ಹರಿಯು ಜಗತ್ತಿಗೆ ಮಾತಾಪಿತೃ ಸ್ವರೂಪನು. ಜಗಜ್ಜನನಿಯಾದ ಚಿತ್ಪ್ರಕೃತಿನಾಮಕಳಾದ ಶ್ರೀ ಲಕ್ಷ್ಮೀದೇವಿಯನ್ನು ಜಗತ್ಸೃಷ್ಟಿಕಾರ್ಯಕ್ಕೆ ಉಪಾದಾನ ಕಾರಣವನ್ನಾಗಿಮಾಡಿಕೊಂಡು,ಬ್ರಹ್ಮಾಂಡವನ್ನು ಶ್ರೀ ಹರಿಯು ಸೃಷ್ಟಿಸಿದನು. ಇದರಿಂದ ಜಗತ್ತಿನ ಜನನೀ-ಎಂದು ಸಂಬೋಧಿಸಿದ್ದಾರೆ, ರಂಗಮ್ಮ ತಾನು ಸೃಷ್ಟಿಸಿದ ಜಗತ್ತಿನಲ್ಲಿ ಪರಿ

ಪೂರ್ಣನಾಗಿ ವ್ಯಾಪ್ತನಾಗಿ, ಕ್ರೀಡಾದಿ ವಿಶಿಷ್ಟ ಗುಣ ಪರಿಪೂರ್ಣನಾದ ಶ್ರೀ ಹರಿಗೆ-ರಂಗ-ಎಂತ ನಾಮ. ಈ ಜಗತ್ತೇ ಆ ಮಂಗಳಾಂಗನ ರಂಗ ಮಂದಿರವು.

**ಪುಟ್ಟ ತಮ್ಮ ಬಾರೋ**=ಬಾಲರೂಪಿಯಾದ ನಂದನ ಕಂದನಾದ ಶ್ರೀ ಕೃಷ್ಣನ ಸ್ಮರಣೆ. ಬಲರಾಮನ ಅನುಜ-ಶ್ರೀ ಕೃಷ್ಣ ಇದರಿಂದ ಶ್ರೀ ಶೇಷದೇವರೂ ಮತ್ತು ಶೇಷಶಯನನಾದ ಶ್ರೀ ಹರಿಯ ಸ್ಮರಣೆ, **ಮುದ್ದಿನಮ್ಮ ಬಾರೋ**=ಮುದ್ದು ಸುರಿಯುವ ಬಾಲಗೋಪಾಲ ಇದು ಶ್ರೀ ಹರಿಯ ಅನುಪಮ ಸೌಂದರ್ಯವನ್ನು ತೋರಿಸುತ್ತದೆ. ಜಗನ್ಮೋಹಕ ರೂಪ.

**ಅಯ್ಯ ಬಾರೋ**=ಸರ್ವಶ್ರೇಷ್ಠನಾದ ಭಗವಂತ ಶ್ರೀ ಹರಿಯ ಪಾರಮ್ಯ ಮತ್ತು ಸರ್ವೋತ್ತಮತ್ವ ಪ್ರತಿಪಾದಕ ಶಬ್ದ ಪ್ರಯೋಗ, **ಅಜನಯ್ಯ ಬಾರೋ**=ಚತುರ್ಮುಖ ಬ್ರಹ್ಮದೇವರ ತಂದೆ-ನೀನು ಬಾ. ಶ್ರೀ ಹರಿಗೆ ಜನನ ಮರಣಾದಿಗಳಿಲ್ಲ ಇದರಿಂದ-"ಅಜ"ನಾಮಕನು ಬ್ರಹ್ಮದೇವರಿಗೂ "ಅಜ"ನೆಂತ ನಾಮ. ಅಜನಾಮಕನಾಗಿ ಬ್ರಹ್ಮಾಂತರ್ಗತನಾಗಿದ್ದು ಬ್ರಹ್ಮನ ದ್ವಾರಾ ಸೃಷ್ಟಿ ಕಾರ್ಯ ಇದರಿಂದ ಸೃಷ್ಟಿಕರ್ತನು, **ಚಿನುಮಯ್ಯ ಬಾರೋ**=ಚಿತ್+ಮಯ=ಚಿನ್ಮಯ (ಅನುನಾಸಿಕ ಸಂಧಿ) ಅಂದರೆ ಆನಂದ ಪರಿಪೂರ್ಣನೆಂದರ್ಥ. "ಮಯಟ್"-ಶಬ್ದವು ಪೂರ್ಣತ್ವದ ಸೂಚಕ, **ಚಿಣ್ಣಿಗಯ್ಯ**=ಶಿಶುಗಳಿಗೆ ಶಿಶುರೂಪ. ಶ್ರೀ ಹರಿಯ ಅಣುತ್ವರೂಪ ಅಣುಗಳಲ್ಲಿ ಅಣುರೂಪವಾಗಿ ಅಂತರ್ಗತನಾಗಿದ್ದಾನೆ.

**ಕಂದ ಬಾರೋ**=ದಾಸರು ಶ್ರೀ ಹರಿಯನ್ನು ಪುಟ್ಟಬಾಲ(ಮಗ)-ನೆಂದು ಸಂಬೋಧಿಸುತ್ತಾರೆ. ಅದಿತಿ-ಕಶ್ಯಪರ ನಂದ-ಶ್ರೀರಾಮನು ದಶರಥರಸೂನು-ಶ್ರೀ ರಾಮಚಂದ್ರ ವಸುದೇವಕಿಯ ಕಿಶೋರ-ಬಾಲಕೃಷ್ಣ ರೂಪಗಳ ಸ್ಮರಣೆ, **ಪೂರ್ಣಾನಂದ**=ಪರಿಪೂರ್ಣ ಸುಖಮಯ ಶ್ರೀ ಹರಿಯ ಆನಂದವು ಅಪ್ರಾಕೃತ ಮತ್ತು ಅಪರಿಚ್ಛಿನ್ನವಾದದ್ದು ಯಾವ

ವಿಧವಾದ **ನ್ಯೂನತೆಯೂ**ಇಲ್ಲದಪೂರ್ಣಾನಂದಘನನು**ಸುರವಂದ್ಯ**=ರಮಾ ಬ್ರಹ್ಮಾದಿ **ದೇವತಾ ಗಣದಿಂದ** ನಮ್ಯನು ದೇವೋತ್ತಮನು, **ಬಾಲುಮುಕುಂದ**=ಬಾಲ + **ಮುಕುಂದ**. ಪ್ರಳಯಕಾಲದಲ್ಲಿ ಪ್ರಳಯೋದಕದಲ್ಲಿ **ವಟಪತ್ರ ಶಾಯಿಯಾಗಿರುವ ಶಿಶುರೂಪ.**

**ಅಣ್ಣ ಬಾರೋ**=ಹಿರಿಯನಾದವನು. ಶ್ರೀ ಲಕ್ಷ್ಮಣನ **ಅಣ್ಣ**ನಾದ ಶ್ರೀ **ರಾಮಚಂದ್ರ** ಮೂರ್ತಿಯ **ರೂದಿದ ಸ್ಮರಣೆ, ತಾವರೆಗಣ್ಣ**=**ಕಮ**ಲದ ದಳ (**ಪತ್ರ**)ಗಳಂತೆ ವಿಶಾಲವಾದ ಕಣ್ಣುಳ್ಳವನು-**ಶ್ರೀ** ಹರಿಯ ನೇತ್ರ ಸೌಂದರ್ಯ, **ಎನ್ನ ಚಿನ್ನ ಬಾರೋ**=ನನಗೆ ಅತ್ಯಂತ ಪ್ರೀತಿಯ ವಸ್ತುವಾದ ನೀನು ಬಾ ಎಂದು ಆಹ್ವಾನಿಸಿದ್ದಾರೆ. ಏಕಾಂತ ಭಕ್ತರಾದ ದಾಸರಿಗೆ ಶ್ರೀ **ಹರಿಯೇ ಅತ್ಯಂತ** ಪ್ರೀತಿಯ **ವಸ್ತು**ವಾಗಿದ್ದಾನೆ. **ಅವನೇ ಅವರ** ಪರಮ ಇಷ್ಟ ದೇವತಾ, **ಶಿಶು ರನ್ನ ಬಾರೋ**=ಶಿಶು **ರೂಪದಲ್ಲಿ** ಆದರ್ಶ ವಸ್ತುವಾಗಿದ್ದಾನೆ ಶ್ರೀ ಹರಿ. ಬಾಲ **ಗೋಪಾಲನಾದ** ಶ್ರೀ ಕೃಷ್ಣನು ಆದರ್ಶವಸ್ತು ಶ್ರೀ ಹರಿಯು ಶಿಶುವಾಗಿ, ಪ್ರೌಢ ಯುವಕನಾಗಿ-ವಟುವಾಗಿ ಸರ್ವ ಪ್ರಕಾರಗಳಲ್ಲಿಯೂ ಪರಮಾದರ್ಶವಾಗಿ **ಮೆರೆದಿದ್ದಾನೆ.**

ಸರ್ವ ಪರಿಸ್ಥಿತಿಯಲ್ಲಿಯೂ ಸಮಾಭ್ಯಧಿಕ ಶೂನ್ಯನು. ಅವನಿಗೆ **ಸ**ಮರೂ ಇಲ್ಲ. ಮೀರಿಸುವವರು ಯಾರೂ ಇಲ್ಲವೇ ಇಲ್ಲ, **ನಲಿದು ಬಾರೋ**=ನೃತ್ಯ ಮಾಡುತ್ತಾ ಬಾರೆಂದು ಕರೆದಿದ್ದಾರೆ. ಭಕ್ತನ **ಮೊರೆ** ಅವನ ಭಕ್ತಿಗೆ ಮೆಚ್ಚಿ ಆನಂದ ಪರಿಪೂರ್ಣವಾದ ಶ್ರೀ ಹರಿಯು ನಲಿಯುತ್ತಾ ಅವನೆಡೆಗೆ ಆಗಮಿಸುತ್ತಾನೆ, **ಕರುಣಾ ಜಲಧಿ ಬಾರೋ**=ಕರುಣಾ ಸಮುದ್ರನಾದವನೇ ಬಾರೋ ಶ್ರೀ ಪರಮಾತ್ಮನು ಪರಮ ಕರುಣಾ ಸಮುದ್ರನು. ತನ್ನ ಕೃಪಾ ವಿಶೇಷದಿಂದ ಸಕಲ ಸಜ್ಜನರನ್ನು ಸದಾ ಸಂರಕ್ಷಿಸುವ ಸುಹೃದಯನು, **ಆಡಿ ಬಳಿಗೆ ಬಾರೋ**= ನಾನಾ ಲೀಲಾ ವೈಭವಗಳನ್ನು ಪ್ರದರ್ಶಿಸುತ್ತಾ ಬಾರೋ—ಎಂದಿದ್ದಾರೆ.

ಶ್ರೀ ಹರಿಯು ಕ್ರೀಡಾ ವಿಶಿಷ್ಟನು. ಅವನ ಕ್ರಿಯಾದಿಗಳು ಅಪಾರ-ಅನಂತ-ಅಪರಿಚ್ಛಿನ್ನ, **ಕರೆದರೆ ಓಲಿದು ಬಾರೋ**=ನಿನ್ನ ದಾಸರು ಭಕ್ತಿ

ಯಿಂದ ಕೂಗಿದರೆ, ಅವರ ಅಂತರಂಗದ ಕೂಗಿಗೆ ಓ ಗೊಟ್ಟು ಬಾ, **ಶ್ರೀಶಾ ಬಾರೋ** = ನಿತ್ಯ ಯವ್ವನೆಯೂ, ಪರಮ ಕಾಂತಿಯುಕ್ತಳೂ, ಸತ್ವಾಗುಣಾಭಿಮಾನಿ ಆದ ಶ್ರೀ ಲಕ್ಷ್ಮೀದೇವಿಯು–"ಶ್ರೀ"-ನಾಮಕಳು ಅವಳಿಗೆ ಪ್ರಭು ಮತ್ತು ನಿಯಾಮಕನು. ಶ್ರೀಶನಾದ ಶ್ರೀ ಹರಿಯು, **ಹಸುಗೂಸೆ ಬಾರೋ** = ಎಳೆಯ ಕಂಠದನೆಂದು ಸಂಬೋಧಿಸಿದ್ದಾರೆ ದಾಸ ರಾಯರು.

ಅವನು ಶಿಶುವಾಗಲೀ, ಯುವಕನಾಗಲೀ, ವೃದ್ಧನಾಗಲೀ, ಸದಾ ಪರಿಪೂರ್ಣನೇ, ನಿರ್ವಿಕಾರವಾದ ಶಾಶ್ವತವಾದ ಶಶ್ವದೇಕ ಪ್ರಕಾರವಾದ ವಸ್ತು, ಜಗದ್ವಿಲ್ಲಕ್ಷಣನಾಗಿದ್ದಾನೆ ಆ ಜಗದೀಶ.

**ಪರಿತೋಷ ಬಾರೋ** = ಪೂರ್ಣಾನಂದ ಸ್ವರೂಪಿ ಬಾರೋ (ಪರಿ–ಪೂರ್ಣ ಸ್ವರೂಪವುಳ್ಳ ತೋಷ-ಆನಂದ) ಶ್ರೀ ಹರಿಯ ಸ್ವರೂಪಕ್ಕೂ ಆನಂದಾದಿ ಗುಣಗಳಿಗೂ ಭೇದವಿಲ್ಲ ಅವು ಸವಿಶೇಷಾರ್ಥತದಿಂದ ಯುಕ್ತ ವಾಗಿದೆ.



**೭೫**

**ಕೀರ್ತನೆ–೩೨**

**(ಶ್ರೀಜಗನ್ನಾಥವಿಠ್ಠಲಾಂಕಿತ)**

**ಉಗಾಭೋಗ**

ಅನಘನೆಂದೊಮ್ಮೆ ನೆನೆದ ಮಾನವ ಪಾಪ
ವನಧಿ ದಾಟುವ ಬಹು ವೇಗದಿಂದ

ಜನನ ಮರಣ ಭಯವಿನಿತಿಲ್ಲ ಅವನೆ ಸ-
ಜ್ಜನ ಶಿರೋಮಣಿ ಕಾಣೋ ಸರ್ವರೊಳು
ಜನಕ ಜನನಿ ಮೊದಲಾದ ನೂರೊಂದು ಕುಲವ ಪಾ-
ವನ ಮಾಡುವನು ಪ್ರತಿ ದಿನಗಳಲೀ
ವನಿತಾದಿ ವಿಷಯಗಳನನುಭವಿಸುತ ತನ್ನ
ಮನೆಯೊಳಿರಲವ ಜೀವನ ಮುಕ್ತನೊ
ಸನಕಾದಿ ಮುನಿಗಳ ಮನಕೆ ನಿಲುಕದಿಪ್ಪ
ಘನಮಹಿಮನೆ ಬಂದು ಕುಣಿವ ಮುಂದೆ
ಹನುಮ ವಂದಿತ ಜಗನ್ನಾಥ ವಿಠ್ಠಲರೇಯ
ಅನಿಮಿತ್ತ ಬಂಧು ನೀನು ಆವಾವ ಕಾಲದಲ್ಲಿ ॥



**ಅರ್ಥವಿವರಣೆ :**

ಪ್ರಸಕ್ತ ಸಾಹಿತ್ಯವು ಶ್ರೀ ಮಜ್ಜಗನ್ನಾಥ ದಾಸವರೇಣ್ಯರ ಸುಂದರ ವಾದ ಒಂದು **ಉಗಾಭೋಗ.** ಇದರಲ್ಲಿ, ಜ್ಞಾನ-ಭಕ್ತಿ-ವೈರಾಗ್ಯಾದಿ ಗಳಿಂದ ಪರಿಪಕ್ವವಾದ ಜೀವನ ವಿಚಾರ ಮತ್ತು ಅವನಿಗಾಗುವ ಭಗವತ್ಪ್ರ ಸಾದ ರೂಪವಾದ ಅನುಗ್ರಹ ವಿಶೇಷವನ್ನು ನಿರೂಪಿಸಿರುತ್ತಾರೆ.

**ಅನಘ** = "ಅಘ"-ಎಂದರೆ ಪಾಪಗಳು. ನಿಷೇಧಾರ್ಥದಲ್ಲಿ- "ಅನಘ"-ನೆಂದರೆ ಸಕಲ ದೋಷದೂರನೆಂದರ್ಥ. ಶ್ರೀ ಹರಿಯು ಅನಂತ ಕಲ್ಯಾಣ ಗುಣಗಣ ಪೂರ್ಣನು. ಅತಏವ ಸಕಲ ದೋಷದೂರನು. ಈ ರೀತಿಯಲ್ಲಿ ಉಪಾಸಿಸುವ ಮಾನವನ, **ಪಾಪವನಧಿ** = ಪಾಪ ರಾಶಿಗಳೆಂಬ ಸಮುದ್ರವು. (ವನ-ಎಂದರೆ. ನೀರು ಎಂದರ್ಥ. ವನಧಿ-ಎಂದರೆ ಜಲಧಿ ಅಥವಾ ಸಮುದ್ರವು), **ಬಹುವೇಗದಿಂದ ದಾಟುವ** = ಅತ್ಯಂತ ಶೀಘ್ರ ವಾಗಿ ಉತ್ತರಿಸುವನು. ಶ್ರೀ ಹರಿಯನ್ನು ಸಕಲ ಶುಭಗಣ **ಪರಿಪೂರ್ಣ**

ನೆಂದೂ, ಸಮಸ್ತ ದೋಷವಿದೂರನೆಂದೂ ಯಾವ ಮಾನವನು ಉಪಾಸಿಸುತ್ತಾನೋ (ಗುಣ ಪೂರ್ಣೋಪಾಸನೆ) ಅವನ ಸಕಲ ಪಾಪಗಳು ಪರಿಹಾರವಾಗಿ, ಸಂಸಾರ ಸಾಗರದಿಂದ ಮುಕ್ತನಾಗುತ್ತಾನೆಂದು ತಾತ್ಪರ್ಯ.

**ಜನನ ಮರಣ ಭಯವಿನಿತೂ ಇಲ್ಲ** = ಹುಟ್ಟುವುದು-ಸಾಯುವುದು ಎಂಬ ಭಯವು ಅಂತಹವನಿಗೆ ಎಳ್ಳಷ್ಟೂ ಇಲ್ಲವೇ ಇಲ್ಲ. ಜನನ ಮರಣ ರೂಪವಾದ ಚಕ್ರವ್ಯೂಹದಿಂದ ಪಾರಾಗುವ ಜೀವನ್ಮುಕ್ತನೆನಿಸುವನು, **ಅವನೆ ಸಜ್ಜನ ಶಿರೋಮಣಿ** = ಅಂತಹ ಸಾಧಕನೇ ಪರಮ ಸಾತ್ವಿಕನಾದ ಜೀವರಲ್ಲಿ ಉತ್ತಮನೆನಿಸುವನು. ಸತ್ + ಜನ = ಸಜ್ಜನ. ಸಾತ್ವಿಕ ಮನೋಭಾವವುಳ್ಳ ಮುಕ್ತಿಯೋಗ್ಯ ಚೇತನರು. ಶಿರೋಮಣಿ-ತಲೆಯಲ್ಲಿ ಧರಿಸುವ ಉತ್ತಮಾಭರಣ.

**ಜನನಿ ಜನಕ ಮೊದಲಾದ** = ತಂದೆಯ ಕಡೆ ಮತ್ತು ತಾಯಿಯ ಕಡೆ ನೂರೊಂದು ಕುಲವನ್ನು, **ಪಾವನ ಮಾಡುವನು** = ಪವಿತ್ರೀಕರಿಸುತ್ತಾನೆ. ಅಂತಹ ಸಾಧಕನ ಜನ್ಮದಿಂದ ಅವನ ಕುಲವೇ ಉದ್ಧಾರವಾಗುವುದು, **ಪ್ರತಿದಿನಗಳಲೀ** = ಸದಾ ಸರ್ವದಾ ಎಂದರ್ಥ. ಸರ್ವ ಕಾಲಗಳಲ್ಲಿ ಕುಲಕೋಟಿಗಳ ಉದ್ಧಾರ, **ವನಿತಾದಿ** = ಪತ್ನೀ ಇತ್ಯಾದಿ "ಆದಿ"-ಶಬ್ದದಿಂದ ಹೆಂಡತೀ-ಪುತ್ರರು. ಬಂಧು ಬಾಂಧವರು ವರ್ಗವೇ ಗ್ರಾಹ್ಯ.

**ವಿಷಯಗಳನು ಅನುಭವಿಸುವ** = ಸುಖೋಪ ಭೋಗಗಳನ್ನು ಅನುಭವಿಸುವ, **ತಮ್ಮ ಮನೆಯೊಳಿರಲು ಅವ ಜೀವನ್ಮುಕ್ತನೋ** = ಪತ್ನೀ ಪುತ್ರ ಬಂಧು ಸಹಿತವಾಗಿ ಗೃಹಸ್ಥನಾಗಿ ಮನೆಯಲ್ಲಿಯೇ ಇದ್ದರೂ, ಅಂತಹ ಸಾಧಕನು ಜೀವನ್ಮುಕ್ತನೆನಿಸುವನು, **ಸನಕಾದಿ ಮುನಿಗಳ ಮನಕೆ** = ಬ್ರಹ್ಮನ ಮಾನಸ ಪುತ್ರರು. ಸನಕ-ಸನಂದನ-ಸನತ್ಕುಮಾರ–ಸನತ್ಸುಜಾತ -ಎಂಬ ನಾಲ್ಕು ಮಂದಿ ವೀರಬ್ರಹ್ಮಚಾರಿಗಳು. ಬ್ರಹ್ಮಜ್ಞಾನಿಗಳ ಅಂತಹವರ ಮನಸ್ಸಿಗೂ ಸಹ, **ನಿಲುಕದಿಪ್ಪ** = ಸಿಗದಿರುವ (ಅಪ್ರಾಪ್ಯ ಮನಸಾ ಸಹ), **ಘನಮಹಿಮನೆ** = ನಿಬಿಡೀಕೃತವಾದ ಅಂದರೆ ಪರಿ

ಪೂರ್ಣಗಳಾದ ಮಹಿಮಾ ಸಂಪನ್ನನಾದ ಶ್ರೀ ಭಗವಂತನು, **ಮುಂದೆ ಬಂದು ಕುಣಿವ** = ಅವರಿಗೆ ಪ್ರತ್ಯಕ್ಷ ಗೋಚರನಾಗಿ, ಅವರ ಭಕ್ತಿಗೆ ಪರ ವಶನಾಗಿ ನಲಿಯುವನು.

**ಹನುಮವಂದಿತ** = ಶ್ರೀ ಮುಖ್ಯ ಪ್ರಾಣರಿಂದ ವಂದಿತನಾದ ಶ್ರೀ ಮನ್ಮಧ್ವಮಾನಸ ಮಂದಿರನು, **ಅನಿಮಿತ್ತ ಬಂಧು** = ಜೀವರನ್ನು ಎಂದೆಂದೂ ಬಿಟ್ಟು ಅಗಲದ ಬಿಂಬರೂಪೀ ಶ್ರೀ ಪರಮಾತ್ಮನು, **ಆವಾವ ಕಾಲದಲ್ಲಿ** = ಸದಾ ಸರ್ವ ಕಾಲಗಳಲ್ಲಿಯೂ, ಅಂದರೆ ಅನಾದ್ಯನಂತ ಕಾಲದಿಂದಲೂ ಅನಿಮಿತ್ತ ಬಂಧುವಾಗಿ ಸಂರಕ್ಷಿಸುವನು.



**೬೬**

**ಕೀರ್ತನೆ-೩೩**

**(ಪ್ರಾಣೇಶವಿಠ್ಠಲಾಂಕಿತ)**

**ಉಗಾಭೋಗ**

ಅಲ್ಪ ಧರ್ಮವು ಜ್ಞಾನದಿಂದ ಮಾಡಲು ಬ್ರಹ್ಮ
ಕಲ್ಪ ಪರಿಯಂತ ಸುಖ ಉಂಟು ನರಗೇ
ಸ್ವಲ್ಪೇತರ ತಿಳಿಯದೆ ಮಾಡಲ್ ಫಲವು ಭುಜಗ-
ತಲ್ಪ ಪ್ರಾಣೇಶವಿಠ್ಠಲ ಮೆಚ್ಚನೂ ॥



**ಅರ್ಥವಿವರಣೆ :–**

ಜ್ಞಾನಿವರೇಣ್ಯರಾದ ಶ್ರೀ ಪ್ರಾಣೇಶ ದಾಸವರ್ಯರು ಈ ಉಗಾ

ಭೋಗದಲ್ಲಿ ಸಮೀಚೀನವಾದ ಜ್ಞಾನಾನುಸಂಧಾನದಿಂದ ಮಾಡಲ್ಪಟ್ಟ ಕರ್ಮ-ಧರ್ಮಗಳ ವಿಚಾರವನ್ನು ಸ್ಪಷ್ಟವಾಗಿ ವಿವೇಚಿಸಿರುತ್ತಾರೆ.

**ಅಲ್ಪ ಧರ್ಮವು**=ಅತಿ ಸ್ವಲ್ಪ ಪ್ರಮಾಣದ ಧರ್ಮವು. ಮಾನವರನ್ನು ಸಂರಕ್ಷಿಸುವುದು. ಧರ್ಮ. ದೇಶ ಕಾಲೋಚಿತವಾದ ಕರ್ಮಗಳಿಗೆ ಧರ್ಮವೆಂದು ಹೆಸರು ಅದರಲ್ಲಿ ವರ್ಣ ಮತ್ತು ಆಶ್ರಮೋಚಿತವಾದ ಧರ್ಮವೂ ಇದೆ. ಯುಗ ಧರ್ಮಗಳು ಕಾಲೋಚಿತ ಧರ್ಮಗಳು.

**ಜ್ಞಾನದಿಂದ ಮಾಡಲು** = ಯಾವ ಧರ್ಮದ ಆಚರಣೆಯೇ ಆಗಲೀ, ಅದನ್ನು ಸಮೀಚೀನವಾದ ಜ್ಞಾನಾನುಸಂಧಾನಪೂರ್ವಕ ಮಾಡಬೇಕು. ಶ್ರೀ ಹರಿಯೇ ಧರ್ಮ ಸ್ವರೂಪನು. ಅವನೇ ಧರ್ಮ ಸಂಸ್ಥಾಪಕನು "ಧರ್ಮ"-ಎಂದೇ ಅವನ ನಾಮವು. ಧರ್ಮ ಸ್ವರೂಪಿಯಾದ ದಾಮೋದರನು. ಧರ್ಮಾ ಧರ್ಮಾಂತರ್ಗತನಾಗಿದ್ದು ಧರ್ಮ ಶಬ್ದ ವಾಚ್ಯನಾಗಿದ್ದು, ಧರ್ಮಗಳನ್ನು ಪ್ರೇರಿಸುವನು.

ಅವನ ಪ್ರೇರಣಾರೂಪವಾದ ಕ್ರಿಯೆಯೇ ಧರ್ಮದ ಅಭಿವ್ಯಕ್ತಿ, ಆದರ ಆಚರಣೆಯೇ ಧರ್ಮಾನುಷ್ಠಾನ ಬಿಂಬಮೂರ್ತಿಯಾದ ಶ್ರೀ ಹರಿಯೇ ಧರ್ಮಶಬ್ದ ವಾಚ್ಯನಾಗಿ ನನ್ನಲ್ಲಿ ನಿಂತು ಪ್ರೇರಿಸಿ, ತಾನೇ ಧರ್ಮವನ್ನು ಮಾಡಿ, ದೇವತೆಗಳ ದ್ವಾರಾ ಮಾಡಿಸಿ, ಪ್ರತಿಬಿಂಬ ಭೂತವಾದ ಜೀವರ ದ್ವಾರಾ ಮಾಡಿ ಮಾಡಿಸುತ್ತಾನೆಂಬುದೇ–"ಜ್ಞಾನದಿಂದ ಮಾಡಲು"–ಎಂಬ ಶಬ್ದ ಪ್ರಯೋಗದ ಅಂತರಾರ್ಥವು, **ಬ್ರಹ್ಮ ಕಲ್ಪ ಪರಿಯಂತ** = ಬ್ರಹ್ಮದೇವರ ಕಲ್ಪಾವಸಾನದವರೆಗೂ- ಅಂದರೆ ಸೃಜ್ಯಕಾಲದ ಪೂರ್ಣಾವಧಿ ಪರ್ಯಂತರವೂ, **ಸುಖ ಉಂಟು ನರಗೇ** = ಅಂತಹ ಉಪಾಸಕರಾದ ಮಾನವರಿಗೆ ತಮ್ಮ ಇಹ ಜೀವನದಲ್ಲಿ ತುಂಬಾ ಆನಂದವುಂಟಾಗುವುದು. ಸದುಪಾಸನೆಯಿಂದ ಇಹದಲ್ಲಿ ಆನಂದ, ಪರದಲ್ಲಿ ಶಾಶ್ವತವಾದ ಮೋಕ್ಷ ಸುಖ ಪ್ರಾಪ್ತಿ–ಎಂತ ತಾತ್ಪರ್ಯ.

**ಸ್ವಲ್ಪ ಇವರ ತಿಳಿಯದೆ ಮಾಡಲ್** = ಈ ಸಮೀಚೀನವಾದ ಜ್ಞಾನಾನುಸಂಧಾನವನ್ನು ಬಿಟ್ಟು, ಇನ್ನೇನ್ನನೂ ಮಾಡಿದರೂ ಕೂಡ. (ಅನ್ಯ ಶಾಸ್ತ್ರ ವಿರಹಿತ ಮಾರ್ಗಗಳಿಂದ), **ಫಲವು**=ಅದರಿಂದ ಪ್ರಾಪ್ತಿಯಾಗುವ ಫಲವು, **ಭುಜಗ ತಲ್ಪ** = ಶೇಷ ಶಾಯಿಯಾದ ಶ್ರೀ ಹರಿಯು (ಭುಜಗ-ಸರ್ಪ-ಶೇಷದೇವರು. ತಲ್ಪ-ಹಾಸಿಗೆ), **ಪ್ರಾಣೇಶವಿಠ್ಠಲ ಮೆಚ್ಚನೂ** =ಪ್ರಾಣೇಶ ವಿಠ್ಠಲಾತ್ಮಕನಾದ ಶ್ರೀ ಪರಮಾತ್ಮನು ಎಂದೆಂದೂ ಮೆಚ್ಚುವುದಿಲ್ಲ. ಅಂದರೆ, ಇವರ ಸಾಧನಗಳಿಂದ ಭಗವತ್‌ಪ್ರಸಾದ ಲಭ್ಯವಾಗುವುದಿಲ್ಲ ಎಂದರ್ಥ.



**೬೭**

**ಕೀರ್ತನ-೩೮**

## ಶ್ರೀ ಹರಿಯಲ್ಲಿ ಭಕ್ತನ ಮೊರೆ

**(ಗುರುಜಗನ್ನಾಥವಿಠ್ಠಲಾಂಕಿತ)**

**ರಾಗ-ಕಾಂಬೋದಿ** **ಝಂಪೆತಾಳ**

**ಅಲ್ಪ** ಮನುಜರಿಗಾಲ್ಪರಿಸ ಬ್ಯಾಡೊ ಹರಿಯೆ || ||ಪ||

ಕಲ್ಪತರುಸಮ ನೀನನಲ್ಪ ಜನತತಿಗೆ || ||ಅ|

ಕಲ್ಪ ಕಲ್ಪದ ಹಿತಲ್ಪ ನಿನ ಸಂ-
ಕಲ್ಪ ವನುಸರಿಸಿ ನಡೆವೊ ಜನಕೆ

ಕಲ್ಪತರು ನೀನೆಂದು ಸಂತಸದಿ ಅನುದಿನ
ಸ್ವಲ್ಪವಾದರು ಮನದೊಳಗೆ ವಿಕಲ್ಪ ಮಾಡದವನಾ ॥ ||೧||

ನಿನ್ನ ಧ್ಯಾನವಗೈದು ನಿನ್ನ ಪಾದವ ಭಜಿಸಿ
ನಿನ್ನ ನಾಮದ ಸ್ಮರಣೆ ಮಾಡುತಾ
ಅನ್ಯ ದೇವರ ನಾಮ ಮನದೊಳು ನೆನೆಯದೆ
ನಿನ್ನ ಚರಣವನು ನೆರೆ ನಂಬಿದವನಾ || ||೨||

ನಿನ್ನ ಸೇವೆಯ ಮಾಡಿ ನಿನ್ನ ಸ್ತೋತ್ರವಗೈದು
ನಿನ್ನ ಪದಯುಗ ಪದುಮ ವಾಶ್ರಯಿಸೀ
ಮನ್ನದಲಿ ಭಜಿಪರಾನನ್ಯ ಶರಣಾನು ಎನಿಸಿ
ಅನ್ಯರನು ಯಾಚಿಸದಿಪ್ಪ ನರನಾ || ||೩||

ಮಧ್ವ ಮತದಲ್ಲಿ ಪುಟ್ಟಿ ಮಧ್ವಶಾಸ್ತ್ರವನೋದಿ
ಮಧ್ವಮತವನನುಸರಿಸಿದಾ
ಮಧ್ವದ್ವೇಷಿಗಳೊಡನೆ ಬದ್ಧ ದ್ವೇಷವ ಮಾಡಿ
ಮಧ್ವರಾಯರ ಪಾದ ಪೊಂದಿ ಇರುತಿಹನಾ || ||೪||

ನಾಥ ನಿನ್ನಯ ಪಾದ ಪಾಥೋಜ ಯುಗವನು
ಪ್ರೀತಿಪೂರ್ವಕ ಭಜಿಪ ಜನರಾ
ವ್ಯೂಥದೊಳಗೆ ಇಟ್ಟು ಪೊರೆ ನೀದಾತ ಗುರುಜಗ-
ನ್ನಾಥ ವಿಠ್ಠಲರಾಯ ಸತತಾ || ||೫||



**ದಾಸರ ಸಂಕ್ಷಿಪ್ತ ಜೀವನ ಪರಿಚಯ :–**

ದಾಸರ ಕಾಲ-ಕ್ರಿ. ಶ. 1837-1918. ಕೋಸಗಿ ಎಂಬ ಗ್ರಾಮವು ಆಂಧ್ರ ಪ್ರದೇಶದ ಕರ್ನೂಲು ಜಿಲ್ಲೆಗೆ ಸೇರಿನ ಆದವಾನಿ ತಾಲ್ಲೂಕಿನಲ್ಲಿರುವ

ಸ್ಥಳ. ಅಲ್ಲಿ ವೆಂಕಟಗಿರಿಯಾಚಾರ್ಯರೆಂಬ ಸದ್ಗೃಹಸ್ಥರು ವಾಸಿಸುತ್ತಿದ್ದರು. ಅನೇಕ ಶಿಷ್ಯರಿಗೆ ಪಾಠ ಪ್ರವಚನಾದಿಗಳನ್ನು ನಡೆಯಿಸುತ್ತಾ ಸದಾಚಾರಸಂಪನ್ನರಾಗಿದ್ದರು. ಅವರ ಸಹ ಧರ್ಮಿಣಿ-"ಸೀತಮ್ಮ". ಸಕಲ ಭಾಗ್ಯಗಳಿದ್ದರೂ ಪುತ್ರ ಸಂತಾನವಿಲ್ಲದ ಚಿಂತೆ. ಅವರ ಕಾಲದಲ್ಲಿ ಇಭರಾಮಪುರದ ಅಪ್ಪಾವರು ಸುಪ್ರಸಿದ್ಧ ಜ್ಞಾನಿಗಳು. ಶ್ರೀ ರಾಘವೇಂದ್ರ ಗುರುಸಾರ್ವಭೌಮರ ಅಂತರಂಗ ಭಕ್ತರು. ಪಂಚಮುಖೀ ಪ್ರಾಣೇಶನ ಉಪಾಸಕರು. ಅವರ ಅನುಗ್ರಹ ಬಲದಿಂದ ಆಚಾರ್ಯ ದಂಪತಿಗಳಿಗೆ ಪುತ್ರೋತ್ಸವವಾಯಿತು. ಮಗುವಿನ ಹೆಸರು-ಸ್ವಾಮಿರಾಯನೆಂದು. ಸೋದರ ಮಾವನಲ್ಲಿ ವಿದ್ಯಾಭ್ಯಾಸ ಮಾಡಬೇಕೆಂದು ಕಲ್ಲೂರಿಗೆ ಹೋದನು. ಅಲ್ಲಿ ಪ್ರಯೋಜನವಾಗಲಿಲ್ಲ. ಕೋಸಗಿ ಗ್ರಾಮಕ್ಕೆ ಸಮೀಪವಾಗಿರುವ- "ಬುಡಮಲ ದೊಡ್ಡಿ" ಎಂಬ ಪವಿತ್ರ ನಿರ್ಜನ ಕ್ಷೇತ್ರಕ್ಕೆ ಹೋದರು. ಅಲ್ಲಿ ಕಠಿಣವಾದ ಸೇವೆಯಿಂದ ಶ್ರೀ ಪ್ರಾಣ ದೇವರನ್ನು ಭಜಿಸುತ್ತಿದ್ದರು.

ಆಗ ಶ್ರೀ ವಾಯುದೇವರು ಪ್ರಸನ್ನರಾಗಿ, ಸ್ವಾಮಿರಾಯನ ಸ್ವಪ್ನದಲ್ಲಿ ದರ್ಶನ ನೀಡಿ ಅವನ ನಾಲಿಗೆಯ ಮೇಲೆ ಬೀಜಾಕ್ಷರಗಳನ್ನು ಬರೆದರು. "ಮಂತ್ರಾಲಯದಿಂದ ರಾಘವೇಂದ್ರರು ಬಂದು, ನಿನಗೆ ಪಾಠ ಹೇಳುವರು. ಇನ್ನು ಊರಿಗೆ ನಡೆ"-ಎಂದು ಆದೇಶಿಸಿದರು.

ಅಂದಿನಿಂದ ಸ್ವಾಮಿರಾಯನು ದಿವ್ಯ ಜ್ಞಾನಿಯಾಗಿ, ಕೋಸಗೀ ಸ್ವಾಮಿರಾಯಾಚಾರ್ಯನೆಂದು ವಿಖ್ಯಾತನಾದನು ಸೋದೆಯ ಶ್ರೀ ವಾದಿರಾಜ ಗುರುಸಾರ್ವಭೌಮರು ಮತ್ತು ಶ್ರೀ ಮನ್ಮಂತ್ರಾಲಯದ ಯತಿ ಸಾರ್ವಭೌಮರ ಕೃಪಾ ಕಟಾಕ್ಷಕ್ಕೆ ಪಾತ್ರರಾಗಿ. ಗುರುಜಗನ್ನಾಥವಿಠ್ಠಲ- (ಶ್ರೀ ಗುರುರಾಜರ ಅನುಗ್ರಹದಿಂದ ಸ್ವಪ್ನದಲ್ಲಿ ಶ್ರೀ ಗೋಪಾಲದಾಸರ್ಯರಿಂದ ಲಬ್ಧವಾದ ಅಂಕಿತನಾಮ)-ಅಂಕಿತದಲ್ಲಿ ಅನೇಕ ಕೀರ್ತನೆಗಳನ್ನು ರಚಿಸಿ, ಹಾಡಿ, ನಲಿದು ಕೊಂಡಾಡಿದರು.

ಶ್ರೀ ದಾಸರಾಯರು ಸಮಗ್ರ ಕರ್ನಾಟಕ ಪ್ರಾಂತವನ್ನೆಲ್ಲಾ ಸಂಚರಿಸಿ, ಪ್ರವಚನ-ಭಜನೆ. ಇತ್ಯಾದಿ ದ್ವಾರಾ ಸಜ್ಜನರನ್ನು ಉದ್ಧರಿಸುತ್ತಾ,

ಅನೇಕ ಮಂದಿ ಶಿಷ್ಯೋತ್ತಮರಿಗೆ ಅಂಕಿತ ಪ್ರದಾನಗೈದು, ದಾಸಕೂಟ ವನ್ನು ವೃದ್ಧಿ ಮಾಡಿದರು.

ಕ್ರಿ. ಶ. 1840 ರಲ್ಲಿ ಅಂದರೆ ಕ್ರಿ. ಶ. 1918 ರಲ್ಲಿ ಕಾಳಾಯುಕ್ತಿ ನಾಮ ಸಂವತ್ಸರದ ಆಶ್ವಯುಜ ಬಹುಳ ಪ್ರತಿಪದದಂದು ಶ್ರೀ ಹರಿ ಧ್ಯಾನ ತತ್ಪರರಾಗಿ ಮಧ್ಯಾಹ್ನ ಎರಡು ಗಂಟೆಗೆ ಶ್ರೀ ಹರಿ ಪದವನ್ನು ಸೇರಿದರು. ಲಿಂಗಸೂಗೂರಿನ "ವರದೇಶವಿಠ್ಠಲ"-ದಾಸರು ಇವರ ಶಿಷ್ಯರಲ್ಲಿ ಪ್ರಮು ಖರು.



**ಅರ್ಥವಿವರಣೆ :**

ಪ್ರಸಕ್ತ ಕೀರ್ತನ ಸಾಹಿತ್ಯದಲ್ಲಿ ದಾಸವರ್ಯರು ಅಲ್ಪ ಜನರಿಗೆ ಮಂದ ಮತಿಗಳಾದವರಿಗೆ ಅಲ್ಪರಿಸಬೇಡವೆಂದು ಶ್ರೀ ಹರಿಯಲ್ಲಿ ಮೊರೆ ಇಟ್ಟಿ ದ್ದಾರೆ. ಇದರಿಂದ, ದಾಸರಿಗೆ ಇದ್ದ ಶ್ರೀ ವಿಷ್ಣು ತತ್ತ್ವನಿಷ್ಠೆಯು ವ್ಯಕ್ತ ವಾಗುವುದು.

**ಅಲ್ಪ ಮನುಜರಿಗೆ** = ಮಂದ ಮತಿಗಳಾದ ಸಾಮಾನ್ಯ ಮಾನವರಿಗೆ, **ಅಲ್ಪರಿಸಬ್ಯಾಡ** = ಅವರ ಹತ್ತಿರ ಹೋಗಿ ದೀನನಾಗಿ ಬೇಡುವಂತೆ ಮಾಡ ಬೇಡ, **ಹರಿಯು** = ಸಜ್ಜನರ ಸಕಲ ಪಾಪ ಪರಿಹಾರಕವಾದ ಭಗವ ದ್ರೂಪವು, **ಕಲ್ಪತರು ಸಮ** = ನೀನು ನಿನ್ನ ಭಕ್ತರ ಪಾಲಿಗೆ "ಕಲ್ಪವೃಕ್ಷ" ಸದೃಶನಾಗಿರುವೆ. ಇಂದ್ರಲೋಕದಲ್ಲಿ ಕಲ್ಪತರುವು ತನ್ನನ್ನು ನೇಮಿಸುವವ ರಿಗೆ ಅವರ ಸಕಲ ಇಷ್ಟಾರ್ಥಗಳನ್ನು ಸಲ್ಲಿಸುವುದು.

**ನೀ ಅಲ್ಪ ಜನತತಿಗೆ** = ನೀನು ಮಂದ ಮತಿಗಳಾದ ಜನರಿಗೆ ಕಲ್ಪ ವೃಕ್ಷದಂತೆ ಇರುವೆ. (ಅಲ್ಪ-ಅಜ್ಞಾನಿಗಳು-ದೈವಭಕ್ತರು ಆದರೆ ಮಂದ ಮತಿಗಳು), **ಕಲ್ಪ ಕಲ್ಪದ** = ಅನಂತಾನಂತ ಕಲ್ಪಗಳಿಂದ (ಅನಾದ್ಯನಂತ

ಕಾಲದಿಂದ), **ಅಹಿತಲ್ಪ** = ಶೇಷ ಶಯನನಾದ ಶ್ರೀ ಹರಿಯೇ (ಅಹಿ–ಸರ್ಪ-ಶೇಷದೇವರು. ತಲ್ಪ-ಶಯನ-ಮಲಗಿರುವವನು), **ನಿನ್ನ ಸಂಕಲ್ಪವನು ಅನುಸರಿಸಿ** = ಶ್ರೀ ಹರಿಯ ಇಚ್ಛೆಯೇ ಅವನ ಸಂಕಲ್ಪವು. ಅವನು ಸತ್ಯಸಂಕಲ್ಪನು.

ತನ್ನಿಂದೆ ಸೃಷ್ಟವಾದ ಸತ್ಯ ಭೂತವಾದ ಚರಾಚರಾತ್ಮಕವಾದ ಈ ಜಗತ್ತಿನಲ್ಲಿ ಸಕಲವೂ ಅವನ ಸಂಕಲ್ಪದಂತೆಯೇ ನಡೆಯುವುದು. ಅನ್ಯಥಾ ಆಗಲು ಸಾಧ್ಯವೇ ಇಲ್ಲ, **ನಡೆವೊ ಜನಕೆ** = ನಿನ್ನ ಸಂಕಲ್ಪಾನುಸಾರವಾಗಿ ನಡೆಯುವ ಭಕ್ತರ ವೃಂದಕ್ಕೆ, (ನಿನ್ನ ಚಿತ್ತ–ಎನ್ನ ಭಾಗ್ಯ–ಎಂಬುದೇ ಭಗವದ್ಭಕ್ತರ ಜೀವನದ ತಾರಕ ಮಂತ್ರವು), **ಕಲ್ಪತರು ನೀನೆಂದು** = ಸಕಲ ಮನೋಭಿಲಾಷೆಗಳನ್ನು ಸಲ್ಲಿಸುವ ಕಲ್ಪವೃಕ್ಷ ಸದೃಶನು ನೀನಾಗಿದ್ದೀಯೆ-ಎಂದು ತಿಳಿದು, **ಸಂತಸದಿ** = ಪರಮ ಸಂತೋಷದಿಂದ, **ಅನುದಿನ** = ಎಡಬಿಡದೇ ನಿತ್ಯವೂ, **ಮನದೊಳಗೆ** = ತಮ್ಮ ಮನಸ್ಸಿನಲ್ಲಿ, **ಸ್ವಲ್ಪವಾದರೂ ವಿಕಲ್ಪ ಮಾಡದವನಾ** = ಲವ ಲೇಶವಾದರೂ ಅನ್ಯ ಚಿಂತನೆ ಮಾಡದವನ (ನಾನೇ ಸರ್ವಕ್ಕೂ ಕರ್ತನೆಂಬುವನು ಮನೋವಿಕಲ್ಪವುಳ್ಳವನು.)

ಅವನ ಮನಸ್ಸು (ಅನ್ಯಾಕ್ರಾಂತವಾಗಿ ವಿಕಲ್ಪವನ್ನು ಹೊಂದಿರುವುದು). ಅಂದರೆ ನೀನೇ ಶರಣಾಗತವತ್ಸಲನೆಂದು ದೃಢವಾಗಿ ನಂಬಿ ನಿನ್ನ ಸಂಕಲ್ಪಾನುಸಾರ ನಡೆಯುತ್ತಿರುವ ಭಕ್ತನನ್ನು ಅನ್ಯರಿಗೆ ಅಲ್ಪರಿಸಬೇಡವೆಂದು ಪ್ರಾರ್ಥಿಸಿದ್ದಾರೆ.

**ನಿನ್ನ ಧ್ಯಾನವಗೈದು** = ನಿನ್ನ ಮೂರ್ತಿಯನ್ನು ಮನಸ್ಸಿನಲ್ಲಿ ಸ್ಥಾಪಿಸಿ, ನಿನ್ನನ್ನೇ ಸದಾ ಸ್ಮರಣೆ ಮಾಡುತ್ತಿರುವ, **ನಿನ್ನ ಪಾದವ ಭಜಿಸಿ** = ನಿನ್ನ ಚರಣಾರವಿಂದಗಳನ್ನೇ ನಂಬಿ, ನಿನ್ನ ಗುಣಸ್ತೋಮಗಳನ್ನು ನಿರಂತರವೂ ಕೊಂಡಾಡುತ್ತಿರುವ, **ನಿನ್ನ ನಾಮದ ಸ್ಮರಣೆ** = ನಿನ್ನ ಅನಂತ ನಾಮಗಳನ್ನು ನಿತ್ಯ ಮನಸಾ ಸ್ಮರಿಸುತ್ತಿರುವ, (ನಾಮಧ್ಯಾನಾ ನಿರತನಾಗಿರುವ), **ಅನ್ಯ ದೇವರ ನಾಮ** = ನಿನ್ನನ್ನು ಬಿಟ್ಟು, ಉಳಿದ ದೇವತೆ

ಗಳನ್ನು ಮನಸ್ಸಿನಲ್ಲಿ ನೆನೆಯದೇ, ಅಂದರೆ ಶ್ರೀ ಹರಿಯೇ ಸರ್ವೋತ್ತಮ ನೆಂಬ ದೃಢವಾದ ಭಾವನೆ ಇಲ್ಲದೇ ಕೇವಲ ಕಾಮಿತಾರ್ಥಗಳಿಗಾಗಿ ಇತರ ದೇವತೆಗಳನ್ನು ಮನಸ್ಸಿನಲ್ಲಿ ಸ್ಮರಿಸದೇ, **ನಿನ್ನ ಚರಣವನ್ನು ನೆರೆನಂಬಿದ ವನಾ** = ನೀನೇ ಸರ್ವೋತ್ತಮ ದೇವತೆ ಎಂದು ದೃಢವಾಗಿ ನಂಬಿ, ನಿನ್ನ ಪಾದಾರವಿಂದಗಳನ್ನು ನಿರಂತರವೂ ನೆನೆಯುತ್ತಿರುವವನನ್ನು ಕೈ ಬಿಡಬೇಡ.

**ನಿನ್ನ ಸೇವೆಯ ಮಾಡಿ** = ನಾನಾ ರೀತಿಗಳಲ್ಲಿ ನಿನ್ನನ್ನೇ ನಂಬಿ ಕೊಂಡು ಸೇವೆ ಸಲ್ಲಿಸುತ್ತಾ, **ನಿನ್ನ ಸ್ತೋತ್ರವಗೈದು** = ನನ್ನ ನಾಲಿಗೆ ಯಿಂದ ನಿನ್ನನ್ನೇ ಯಾವಾಗಲೂ ಕೊಂಡಾಡುತ್ತಾ, **ನಿನ್ನ ಪದಯುಗ ಪದುಮವಾಶ್ರಯಿಸೀ** = ನಿನ್ನ ಚರಣ ಕಮಲ ದ್ವಂದ್ವಗಳನ್ನೇ ಆಶ್ರಯಿಸಿ, ನಿನಗೇ ಪೂರ್ಣ ಶರಣಾಗತನಾಗಿರುವ, **ಮನ್ನದಲಿ ಭಜಿಪರ** = ಮನಸ್ಸಿ ನಲ್ಲಿ ಕೊಂಡಾಡುತ್ತಾ ಹಿಗ್ಗುತ್ತಿರುವವರಿಗೆ, **ಅನನ್ಯ ಶರಣಾಗು ಎನಿಸಿ** = ನನ್ನ ಹೊರತು ಬೇರೆ ಗತಿ ಇಲ್ಲ ಎಂದೆನಿಸಿ, **ಅನ್ಯರನು ಯಾಚಿಸದಿಪ್ಪ ನರನಾ** = ನಿನ್ನ ಹೊರತು ಮತ್ತೆ ಇನ್ನಾರನ್ನೂ ಬೇಡದಂಥಾ ಈ ಮಾನವ ನನ್ನು ನೀ ಕೈ ಬಿಡುವುದುಚಿತವೇ ? ಅನನ್ಯ ಶರಣಾಗತಿಯನ್ನು ಇಲ್ಲಿ ಪ್ರಸ್ತಾಪಿಸಿದ್ದಾರೆ.

**ಮಧ್ವಮತದಲಿ ಪುಟ್ಟಿ** = ಆಚಾರ್ಯ ಮಧ್ವರ ಮತದಲ್ಲಿ ಜನಿಸಿ (ವೈಷ್ಣವ ಜನ್ಮವನ್ನು ತಾಳಿ), **ಮಧ್ವಶಾಸ್ತ್ರವ ನೋಡಿ** = ತ್ರೈಲೋ ಕ್ಯಾಚಾರ್ಯರಾದ ಗುರು ಮಧ್ವರ ಶಾಸ್ತ್ರಗಳನ್ನು ಅವಲೋಕಿಸಿ, ಗುರು ದ್ವಾರಾ ಅಧ್ಯಯನ ಮಾಡೀ, **ಮಧ್ವಮತವನು ಅನುಸರಿಸಿದಾ** = ಮಧ್ವ ಮತ ದೀಕ್ಷಾ ಬದ್ಧನಾಗಿ, ಆ ತತ್ತ್ವಗಳನ್ನು ಜೀವನದಲ್ಲಿ ಅನುಷ್ಠಾನ ಮಾಡುತ್ತಾ, **ಮಧ್ವದ್ವೇಷಿಗಳೊಡನೆ** ಮಧ್ವ ಮತವನ್ನೂ ಒಪ್ಪದ ಮಿಥ್ಯಾವಾದಿಗಳ ಸಂಗಡ, **ಬದ್ಧ ದ್ವೇಷವನೆ ಮಾಡಿ** = ಗಾಢವಾದ ದ್ವೇಷ ಭಾವನೆಯಿಂದೊಡಗೂಡಿ. (ಅಂದರೆ ಅನ್ಯ ಮತಗಳ ನಿರಾಕರಣಪೂರ್ವಕ ಸ್ವಮತಾನುಷ್ಠಾನ), **ಮಧ್ವರಾಯರ ಪಾದ** = ಶ್ರೀ ಮದಾನಂದ ತೀರ್ಥರ

ಚರಣಾರವಿಂದಗಳನ್ನು ಸೇರಿ, ಆಶ್ರಯಿಸಿ, ಇರುತಿಹನನ್ನು ಉಪೇಕ್ಷಿಸುವುದು ನಿನಗೆ ತರವೇ ?.

**ನಾಥ**=ಸರ್ವ ಜಗತ್ತಿಗೂ ಪ್ರಭುವಾದ ನಿನ್ನ, **ಪಾದ ಪಾಥೋಜ ಯುಗವನು**=ಚರಣಾರವಿಂದ ಯುಗಳಗಳನ್ನು (ಪಾದ-ಚರಣ ಪಾಥೋಜ -ಕಮಲ. ಯುಗ-ಎರಡು ಚರಣಗಳು), **ಪ್ರೀತಿ ಪೂರ್ವಕ ಭಜಿಪ ಜನರಾ** ಭಕ್ತಿ ಪುರಸ್ಸರವಾಗಿ ಕೊಂಡಾಡುವ ಏಕಾಂತ ಭಕ್ತರ, **ವ್ರ್ಯಾಥದೊಳಗೆ**= ಸಮೂಹದಲ್ಲಿ (ಸಂಗದಲ್ಲಿ), **ಇಟ್ಟು ಪೊರೆ**=ಎನ್ನನ್ನು ಇಟ್ಟು ಸಂರಕ್ಷಿಸು, **ನೀ ದಾತಾ**=ಸಕಲ ಲೋಕಕ್ಕೂ ನೀನೇ ದಾತನು.



**೭೮**

**ಕೀರ್ತನ-೩೯**

**(ರಮಾಕಾಂತವಿಠ್ಠಲಾಂಕಿತ)**

**(ಲೋಕನೀತಿ ಸಾಹಿತ್ಯ)**

**ರಾಗ-ಕಾಂಬೋದಿ** **ಝಂಪೆತಾಳ**

**ಅನು**ಭವಕೆ **ತಂ**ದಿತ್ತೆ ಅನಿಮಿಶೇಷ || ||ಪ||

ತನುವಿಸನಾ ಬಾಂಧವರು ಋಣ ರೂಪರೆಂಬುದನು || ||ಅ||

ಅನುಸರಿಸಿ ಆದರಿಸಿ ಉಪಚರಿಸುತಿರೆ ಅವರು
ಅನುಮೋದಿಸುತ್ತ ಬಲು ಹರುಷ ತಾಳುವರು
ಅನುವು ತಪ್ಪಿದ ಕ್ಷಣವೆ ಬಿನುಗು ಮಾತುಗಳಿಂದ
ಗುಣಹೀನರಂತಾಡಿಕೊಳುತ ದೂರಾಗುವರು || ||೧||

ಧನ-ಕನಕ ವಸ್ತುಗಳು ಅನುಕೂಲವಿದ್ದಾಗ
ಗುಣಿಸುವರು ಬಾಂಧವ್ಯ ಘನ ಪ್ರೀತಿಯಿಂದಾ
ವಿನಯದಿಂ ಸೇರುವರು ತನ್ನಿಮಿತ್ತವು ತೊಲಗೆ
ಕ್ಷಣ ನಿಲ್ಲದಾ ಪ್ರೀತಿ ತೃಣಕೆ ಸಮ ಕಾಣುವರು ॥ ॥೨॥

ಜನುಮ ಜನುಮಗಳಿಂದ ಅನುಸರಿಸಿ ಬಂದಿಹರು
ಜನುಮ ಹಲವನು ಪೊತ್ತೆ ಇವರಿಗಾಗಿ
ಋಣದ ನೆಲೆಗೇ ಇನ್ನೂ ಎಣೆಗಾಣೆನೋ ದೇವ
ಸೆಣೆಸುತಿಹ ಋಣಬಾಧೆ ಪರಿಹರಿಸಿ ಕಾಯೋ ॥ ॥೩॥

ನಾನೊಲ್ಲೆ ನಾನೊಲ್ಲೆ ಈ ಬಂಧು ಬಳಗ ಸುಖ
ಕಾಣದಾಯ್ತುದರೊಳಗೆ ತಿಲಮಾತ್ರ ಹರುಷ
ಸ್ವಾನುಭವದಿಂದೆಮ್ಮ ಹಿರಿಯರಾಡಿದ ವಚನ
ಜ್ಞಾನ ಗೋಚರವಾಯ್ತೋ ಮಾನನಿಧಿಯೋ ॥ ॥೪॥

ಚಿಂತೆ ಮಾಡಲಿ ಯೇಕೆ ಜನನಿ ಜನಕನು ನೀನೆ
ಕಂತುಪಿತ ನಿನ್ನವರೆ ಬಂಧುವರ್ಗ
ಎಂತೆಂಬ ಚಿಂತೆಯು ಸಂತಸದಿ ಎನಗಿತ್ತು
ದಂತಿವರದಾ ರಮಾಕಾಂತವಿಠ್ಠಲ ಸಲಹೋ ॥ ॥೫॥



**ಅರ್ಥವಿವರಣೆ :**

ಪ್ರಸಕ್ತ ಕೀರ್ತನ ಸಾಹಿತ್ಯವು ಕೀರ್ತಿ ಶೇಷರಾದ ರಮಾಕಾಂತವಿಠ್ಠಲಾಂಕಿತ ದಾಸರಿಂದ (ಶ್ರೀ ಸಿ. ಕೃಷ್ಣರಾಯರು) ರಚಿತವಾಗಿದೆ. ಇದರಲ್ಲಿ ನಮ್ಮ ಶರೀರ ಸಂಬಂಧಿಗಳಾದ ಬಂಧು ಬಾಂಧವರಿಂದ ನಮಗಿರುವ ನಂಟುತನದ ಅಸ್ಥಿರತ್ವವನ್ನು ಪ್ರತಿಪಾದಿಸುವ **ಲೋಕನೀತಿ** ಇದೆ.

**ಅನುಭವಕೆ ತಂದಿತ್ತೆ** = ನನ್ನ ಅನುಭವಕ್ಕೆ ವಿಷಯವನ್ನಾಗಿ ಮಾಡಿದೆ ಶಾಸ್ತ್ರಾಧ್ಯಯನ ಗತ ವಿಷಯಗಳಿಗಿಂತಲೂ ನಮ್ಮ ಆತ್ಮಾನುಭವಕ್ಕೆ ಬರುವ ವಿಷಯಗಳ ಮಹತ್ವ ಅಧಿಕತರವು. ಆತ್ಮಾನುಭವಕ್ಕೆ ಬಾರದ ಆಧ್ಯಾತ್ಮಿಕ ಜ್ಞಾನ ಗುಣವು, **ಅನಿಮಿಶೇಷ** = ದೇವೋತ್ತಮನಾದ **ಶ್ರೀ ಹರಿ.** (ಅನಿಮಿಷರು = ರೆಪ್ಪೆ ಇಲ್ಲದವರು. ನಿದ್ರಾಹೀನರಾದ ದೇವತೆಗಳು. **ಈಶ** = ಅವರಿಗೆ ನಿಯಾಮಕನಾದ ಶ್ರೀ ಪರಮಾತ್ಮ), **ತನುವಿನಾ ಬಾಂಧವರು** = ಶರೀರ ಸಂಬಂಧಿಗಳಾದ ತಂದೆ-ತಾಯಿ-ಸಹೋದರ-ಸಹೋದರಿಯರು-ಪತ್ನೀ-ಪುತ್ರರು ಇತ್ಯಾದಿ ನೆಂಟರು.

**ಉಪಚರಿಸುತಿರೆ** = ಅವರಿಗೆ ನಾವು ಚೆನ್ನಾಗಿ ನೋಡಿಕೊಂಡು, ಉಪಚಾರ ಮಾಡುತ್ತಿರುವವರೆಗೂ, **ಅವರು ಅನುಮೋದಿಸುತ್ತ** = ಆ ಬಾಂಧವರು ನಮ್ಮ ಒಳ್ಳೆಯತನವನ್ನು ಹೊಗಳುತ್ತಾ, (ಸರಿ ಎಂದು ಹೇಳುತ್ತಾ), **ಬಲು ಹರುಷ ತಾಳುವರು** = ತುಂಬಾ ಆನಂದ ಪಡುವರು. ಅಂದರೆ ನೆಂಟರು ನಾವು ಉಪಚರಿಸುವ ಪರ್ಯಂತ, ನಮ್ಮನ್ನು ಅನುಸರಿಸಿರುವರು, **ಅನುವು ತಪ್ಪಿದ ಕ್ಷಣವೆ** = ಆ ಆತ್ಮೀಯತೆ (ಉಪಚಾರ) ತಪ್ಪಿದ ಕೂಡಲೇ, **ಬಿನಗು ಮಾತುಗಳಿಂದ** = ಕೀಳು (ಕ್ಷುದ್ರವಾದ) ವಚನಗಳಿಂದ, **ಗುಣಹೀನರಂತೆ ಆಡಿ** = ನಮ್ಮಲ್ಲಿ ಗುಣ ವಿಶೇಷಗಳಾವುವೂ ಇಲ್ಲವೇ ಇಲ್ಲವೆಂದು ಆಡಿ ಕೊಳ್ಳುವರು.

**ದೂರಾಗುವರು** = ನಮ್ಮಿಂದ ಜಾರಿಕೊಳ್ಳುವರು. ನಮ್ಮಲ್ಲಿ ಧನವಿರುವವರೆಗೂ, ಎಲ್ಲರೂ ನೆಂಟರಿಷ್ಟರು. ನಿರ್ಗತಿಕರಾದ ತಕ್ಷಣ ಕ್ಷುದ್ರ ಮಾತುಗಳನ್ನಾಡಿ, ದೂರಾಗುವರು. ಇದು ಅನುಭವ ಸಿದ್ಧವಾದ ವಿಷಯ.

**ಧನ ಕನಕ ವಸ್ತುಗಳು** = ದ್ರವ್ಯಾನುಕೂಲ (ಸಂಪತ್ತು), ಒಡವೆ ವಸ್ತುಗಳು, **ಅನುಕೂಲವಿದ್ದಾಗ** = ಧನ, ಸಂಪತ್ತುಗಳ ಆನುಕೂಲ್ಯ ಇರುವ ಪರ್ಯಂತ, **ಗುಣಿಸುವರು ಬಾಂಧವ್ಯ** = ನಮ್ಮ ನೆಂಟತನವನ್ನು ಎಣಿಸುತ್ತಾರೆ, **ಘನ ಪ್ರೀತಿಯಿಂದಾ** = ಆಳವಾದ (ನಿಬಿಡವಾದ) ವಿಶ್ವಾಸ

ದಿಂದ, ನಮ್ಮನ್ನು ಕಾಣುವರು, **ವಿನಯದಿಂ ಸೇರುವರು** = ಇಲ್ಲದ ವಿನಯದ ವಿಡಂಬನೆಗೈಯುತ್ತಾ ನಮ್ಮೊಡನೆ ಸಹವಾಸ ಮಾಡುವರು.

**ತನ್ನಿಮಿತ್ತವು ತೊಲಗೆ** = ಅದಕ್ಕೆ ಕಾರಣವಾದ ಸಾಮಗ್ರಿ ವಿಶೇಷಗಳು ಬಿಟ್ಟು ಹೋದ ತಕ್ಷಣ, **ಕ್ಷಣನಿಲ್ಲದಾ ಪ್ರೀತಿ** = ಎಡಬಿಡದೆ ಅವರು ನಮ್ಮ ಮೇಲೆ ತೋರುತ್ತಿದ್ದ ವಿಶ್ವಾಸವು, **ತೃಣಕೆ ಸಮ ಕಾಣುವರು** = ಪರಿಹಾರವಾಗಿ ನಮ್ಮನ್ನು ಹುಲ್ಲು ಕಡ್ಡಿಗಿಂತ ಕಡಿಮೆಯಾಗಿ ಕಾಣುವರು. ಭಾಗ್ಯವಿರುವವರೆಗೂ ನೆಂಟಸ್ಥನ. ದಾರಿದ್ರ್ಯ ಬಂದೊದಗಿದರೆ ತಿರಸ್ಕಾರ ದೃಷ್ಟಿ, **ಜನುಮ ಜನುಮಗಳಿಂದ** = ಹಿಂದಿನ ಅನೇಕ ಜನ್ಮಾಂತರ ಪರಂಪರೆಗಳಿಂದ, **ಅನುಸರಿಸಿ ಬಂದಿಹರು** = ನಮ್ಮನ್ನು ಅನುಸರಿಸಿ ಬಂದಿರುವ ಶರೀರ ಸಂಬಂಧಿಗಳು.

**ಇವರಿಗಾಗಿ ಜನುಮ ಹಲವನು ವೊತ್ತ** = ಆ ಋಣಾನುಬಂಧ ರೂಪವಾದ ತನು ಸಂಬಂಧದಿಂದ ಅನೇಕ ಜನ್ಮಗಳಲ್ಲಿ ಜನಿಸಿ ಬಂದೆ, **ಋಣದ ನೆಲೆಗೇ** = ಋಣಾನುಬಂಧ ರೂಪವಾದ ಈ ಬಾಂಧವ್ಯಕ್ಕೆ, **ಇನ್ನೂ ಎಣೆಗಾಣೆನೋ ದೇವ** = ಹೇ ದೇವಾದಿದೇವ ! ಇಷ್ಟು ಜನ್ಮಗಳೆತ್ತಿ ಬಂದರೂ ನೆಲಗಟ್ಟು ಕಾಣದಿದ್ದಾಗಿದ್ದೇನೆ. ಅದರ ನೆಲೆ ನನಗೆ ಇನ್ನೂ ಅರಿವಾಗಿಲ್ಲ.

**ಸೆಣೆಸುತಿಹ** = ನನ್ನೊಡನೆ ಹೋರಾಡುತ್ತಿರುವ (ಬಿಡಿಸಿಕೊಳ್ಳಲು ಸಾಧ್ಯವಾಗದೇ ಋಣದ ಸುಳಿಯಲ್ಲಿ ಸಿಲುಕಿರುತಕ್ಕ), **ಋಣಬಾಧೆ** = ಋಣ ರೂಪವಾದ ಈ ತಾಪವನ್ನು, **ಪರಿಹರಿಸಿ ಕಾಯೋ** = ಬಿಡಿಸಿ ನನ್ನನ್ನು ಸಂರಕ್ಷಿಸು. ಈ ಋಣ ಬಂಧನವನ್ನು ಕಡಿ, **ಈ ಬಂಧು ಬಳಗ ಸುಖ** = ಇಂತಹ ಬಂಧು ಬಾಂಧವರ ವರ್ಗದಿಂದ ದೊರೆಯುವ ಸಂತೋಷವನ್ನು, **ನಾನೊಲ್ಲೆ ನಾನೊಲ್ಲೆ** = ನನಗೆಂದೆಂದಿಗೂ ಬೇಡ. ಇದು ನನ್ನ ಸತ್ಸಾಧನೆಗೆ ಪ್ರತಿ ಬಂಧಕವು.

**ಇದರೊಳಗೆ** = ಈ ಬಂಧು ಬಾಂಧವರ ಸುಖದಲ್ಲಿ, **ತಿಲಮಾತ್ರ ಹರುಷ ಕಾಣದಾಯ್ತು** = ಎಳ್ಳಷ್ಟೂ ಆನಂದವನ್ನು ಕಾಣಲಿಲ್ಲ, **ಸ್ವಾನುಭವದಿಂದ** = ಸ್ವಂತ ಅನುಭವದಿಂದ, **ಎಮ್ಮ ಹಿರಿಯರು ಆಡಿದ ವಚನ** = ನನ್ನ ಗುರು ಹಿರಿಯರು ಹೇಳಿದ ಹಿತದ ನುಡಿಗಳು, **ಜ್ಞಾನ ಗೋಚರ**

**ವಾಯ್ತೋ** = ನನ್ನ ಅರಿವಿಗೆ ಬಂದಿವೆ, **ಮಾನ ನಿಧಿಯೇ** - ಸಜ್ಜನರಿಗೆ ಸ್ಥಾನ ಮಾನಗಳನ್ನು ಒದಗಿಸಿ ಕೊಡುವ ಕರುಣಾಮೂರ್ತಿಯೇ, **ಚಿಂತೆ ಮಾಡಲಿ ಏಕೆ** = ಇನ್ನು ಏತಕ್ಕೋಸ್ಕರ ಚಿಂತಿಸಲಿ ?, **ಜನನಿ ಜನಕ ನೀನೆ** = ಎನಗೆ ಪರಮಾಪ್ತ ಬಂಧುವಾದ (ಬಿಂಬರೂಪೀ ಶ್ರೀ ಹರಿ) **ತಾಯಿ** ತಂದೆ ನೀನೇ ಆಗಿದ್ದಿಯೆ !, **ಕಂತುಪಿತ** = ಮನ್ಮಥ ಜನಕನಾದ ಶ್ರೀ ಹರಿಯೇ (ಶ್ರೀ ಹರಿಯ ಮನಸ್ಸಿನಿಂದ ಜಾತನು-ಮನ್ಮಥನು), **ನಿನ್ನವರೆ** = ನಿನ್ನ ಏಕಾಂತ ಭಕ್ತರೇ, **ಬಂಧುವರ್ಗ ಎಂತೆಂಬ** = ನನ್ನ ಪಾಲಿಗೆ ಬಂಧು ಬಾಂಧವರೆಂಬುವ, **ಚಿಂತನೆಯು** ಸ್ಮರಣೆಯನ್ನು, **ಸಂತಸದಿ ಎನಗಿತ್ತು** ದಯದಿಂದ ಎನಗೆ ಕೊಟ್ಟು, **ದಂತಿವರದಾ** = ಗಜರಾಜನನ್ನು ಸಲಹಿದ ಶ್ರೀ ಹರಿಯೇ ನನ್ನನ್ನು ಕಾಪಾಡಿ ಸಲಹು.



**೭೯**

**ಕೀರ್ತನೆ-೮೦**

**(ಪುರಂದರವಿಠ್ಠಲಾಂಕಿತ)**

**(ಶ್ರೀ ಕೃಷ್ಣ ಲೀಲಾ)**

**ರಾಗ-ವರಾಳಿ** **ಅಟತಾಳ**

**ಅಕ್ಕ** ನಂದಗೋಪನ ಅರಮನೆಯೊಳಗೊಬ್ಬ
ಅಕ್ರೂರ ಬಂದನಂತೆ ॥ ||ಪ||

ಹೊಕ್ಕು ಬಳಕೆಯಿಲ್ಲ ಹೊಸಬನು ಇವನಂತೆ
ಇಕ್ಕೋ ಬಾಗಿಲ ಮುಂದೆ ಈಗ ರಥವ ಕಂಡೆ ॥ ||ಅ||

ಮಧುರಾಪಟ್ಟಣವಂತೆ ಮಾವನ ಮನೆಯಂತೆ
ನದಿಯು ದಾಟಲು ಬೇಕಂತೆ
ಎದುರು ಆರಿಲ್ಲವಂತೆ ಏನೆಂಬೆ ಏಣಾಕ್ಷಿ
ಉದಯದಿ ಪಯಣವಂತೆ ॥ ||೧||

ಬಳ್ಳಿ ವೇಳೆಗಳಂತೆ ಬಿಲ್ಲು ಹಬ್ಬಗಳಂತೆ
ಎಲ್ಲಾ ಬೀದಿ ಸಿಂಗರವಂತೆ
ಮಲ್ಲರ ಕೂಟವಂತೆ ಮತ್ತೆ ಕಾಳಗವಂತೆ
ಅಲ್ಲಿ ತಾಯ್ತಂದೆಗಳ ಕಾಲಿಗೆ ನಿಗಳವಂತೆ ॥ ||೨||

ಮತ್ತೆ ಪಾಂಡವರ ಮೋಹದ ಸೋದರರಂತೆ
ಅತ್ತೆಯ ಮಕ್ಕಳಂತೆ
ಸುತ್ತ ಶತ್ರುಗಳಂತೆ ಸಕಲ ಕಾರ್ಯಗಳಂತೆ
ಚಿತ್ತಜನಯ್ಯನ ಚಿತ್ತ ಎರಡಾಯ್ತಂತೆ ॥ ||೩||

ಅಲ್ಲಿ ಪುಟ್ಟಿದನಂತೆ ಅರಸನಳಿಯನಂತೆ
ಇಲ್ಲಿಗೆ ಬಂದನಂತೆ
ಕಳ್ಳ ಕಪಟನಂತೆ ಎಂದಿಗೂ ಹೀಗಂತೆ
ನಿಲ್ಲದೆ ಯಶೋದೆಗೆ ಕಣ್ಣ ನೀರಂತೆ ॥ ||೪||

ತಾಳಲಾರೆವು ನಾವು ಪುರಂದರವಿಠ್ಠಲನ
ಕಾಣದೆ ನಿಲ್ಲಲಾರೆವೆ
ಕಾಲದಲೊಂದಾಗಿ ಕಾಮಿನಿಯರು ಕೂಡಿ
ಆಲಸ್ಯವಿಲ್ಲದೆ ಆಣೆಯಿಡುವ ಬನ್ನಿ ॥ ||೫||



**ಅರ್ಥವಿವರಣೆ :**

ಇದೊಂದು ಶ್ರೀ ಪುರಂದರ ದಾಸವರ್ಯರ ಸುಂದರ ಸಾಹಿತ್ಯ ಕೃತಿ. ನಂದಗೋಕುಲಕ್ಕೆ ಕಂಸನಿಂದ ಪ್ರೇಷಿತನಾಗಿ ಅಕ್ರೂರನು ಬಲರಾಮ ಕೃಷ್ಣರನ್ನು ಮಧುರೆಗೆ ಕರೆದೊಯ್ಯಲು ಬಂದ ಸುಂದರ ಸನ್ನಿವೇಶ.

ಅಕ್ರೂರನು ಶ್ರೀ ಕೃಷ್ಣನ ಏಕಾಂತ ಭಕ್ತ ವೃಂದದವರಲ್ಲಿ ಒಬ್ಬನು. ಯದುವಂಶದ ಶ್ವಫಲ್ಕನ ಪುತ್ರನು. ಅಕ್ರೂರನ ತಾಯಿ-ಗಾಂದಿನಿ. ಕಂಸನ ಅಷ್ಟ ಮಂತ್ರಿಗಳಲ್ಲಿ ಒಬ್ಬನು. ಆಹುಕನ ಪುತ್ರಿಯಾದ ಭುವನು ಎಂಬಾಕೆಯನ್ನು ವಿವಾಹವಾಗಿದ್ದನು. ಕಂಸನು ಬಿಲ್ಲು ಹಬ್ಬದ ನೆಪದಲ್ಲಿ ಬಲರಾಮ ಕೃಷ್ಣರನ್ನು ನಂದಗೋಕುಲದಿಂದ ಮಧುರಾ ಪಟ್ಟಣಕ್ಕೆ ತರುವಂತೆ ಅಜ್ಞಾಪಿಸಿ, ಅಕ್ರೂರನನ್ನು ಕಳುಹಿಸಿದ ಪ್ರಸಂಗ ವಿಶೇಷವಿದು.

**ಅಕ್ಕ** = ಅಕ್ರೂರನು ನಂದಗೋಕುಲಕ್ಕೆ ಬಂದಿದ್ದಾನೆಂಬ ವಿಷಯ ಗೋಪಿಕಾ ಸ್ತ್ರೀಯರಿಗೆ ತಿಳಿಯಿತು. ಕೂಡಲೇ ಅವರೆಲ್ಲರೂ ಒಟ್ಟು ಸೇರಿ, ಅನ್ಯೋನ್ಯವಾಗಿ ಆ ವಿಷಯದ ಬಗ್ಗೆ ತಮ್ಮ ತಮ್ಮಲ್ಲಿ ಸಂಭಾಷಿಸುತ್ತಾರೆ, **ನಂದಗೋಪನ** = ಗೋಕುಲದ ಅರಸು ವೈಶ್ಯ ಜಾತಿಯಲ್ಲಿ ಜನಿಸಿದವ ಶ್ರೀ ಕೃಷ್ಣನ ಸಾಕು ತಂದೆ ಯಶೋದಾದೇವಿಯ (ಗೋಪಿಯ) ಪತಿ. ಅವನ ಮನೆಗೆ ಅಕ್ರೂರ ಬಂದು ಹಿಂದಿನ ರಾತ್ರಿ ತಂಗಿದ್ದಾನೆಂಬ ಸುದ್ದಿಯ ಬಗ್ಗೆ ಪ್ರಸ್ತಾಪ.

**ಹೊಕ್ಕು ಬಳಕೆಯಲ್ಲಿ** = ಸಂಬಂಧದಲ್ಲಿ (ವಾವೆಯಲ್ಲಿ), **ಹೊಸ ಬನು ಇವನಂತೆ** = ಹೊಸ ಬಂಧುವಂತೆ ಈತನ ಪರಿಚಯ ನಮಗೆಲ್ಲಾ ಈಗ ಹೊಸದು. **ಇಕ್ಕೋ** = ಈಗ ತಾನೇ, ನಂದಗೋಪನ ಮನೆಯ ಮಹಾ ದ್ವಾರದ ಮುಂದೆ ಈತನ ರಥವನ್ನು ನಾನೇ ನೋಡಿದೆ !, **ಮಧುರಾ ಪಟ್ಟಣವಂತೆ** = ಮಧುರೆಯು ಕಂಸನ ರಾಜಧಾನಿ. ತಂದೆಯಾದ ಶೂರಸೇನನನ್ನು ಬಂಧಿಸಿ, ಕಾರಾಗೃಹದಲ್ಲಿಟ್ಟು ಸಿಂಹಾಸನವನ್ನೇರಿದ ದುಷ್ಟ

ಕಂಸ ಯಮುನಾ ನದಿಯ ಒಂದು **ಪಾರ್ಶ್ವ**ದಲ್ಲಿ **ಮಧುರಾ** ಪಟ್ಟಣ. ಎದುರು **ದಡ**ದಲ್ಲಿ ನಂದ**ಗೋ**ಕುಲ.

**ಮಾವನ ಮನೆಯಂತೆ** = **ಕಂಸ**ನು ಶ್ರೀ **ಕೃ**ಷ್ಣನ ಸೋದರ ಮಾವ ನಂತೆ ಕಂಸನ **ತಂ**ಗಿ ದೇವಕಿ. ದೇವಕೀ ವಸುದೇವರ ಪುತ್ರನೇ ಯದುಕುಲ ಲಲಾಮನಾದ ಶ್ರೀ ಕೃಷ್ಣನು, **ನದಿಯು ದಾಟಲು ಬೇಕಂತೆ** - ಯಮುನಾ ನದಿಯನ್ನು ದಾಟಿ, ರಾಮಕೃಷ್ಣರನ್ನು ಮಧುರೆಗೆ ಕರೆದೊಯ್ಯಲು ಅಕ್ರೂ ರನು ಆಗಮಿಸಿದ್ದಾನಂತೆ.

**ಎದುರು ಆರಿಲ್ಲವಂತೆ** = ಅಸದೃಶ ಪರಾಕ್ರಮಿಯು, **ಏನೆಂಬ ಏಣಾಕ್ಷಿ** = ಏನೆಂದು ಹೇಳಲಿ ? ಏಣಾಕ್ಷಿ–ಜಿಂಕೆಯ ಕಣ್ಣುಗಳಂತೆ ಸುಂದರ ವಾದ ನೇತ್ರವುಳ್ಳ ಗೋಪಿಕಾಸ್ತ್ರೀಯರು, **ಉದಯದಿ ಪಯಣವಂತೆ** = ಅಕ್ರೂರನು ಶ್ರೀ ರಾಮಕೃಷ್ಣರನ್ನು ಕರೆದುಕೊಂಡು ನಾಳೆ ಸೂರ್ಯೋದ ಯಕ್ಕೆ ಮುಂಚೆಯೇ ಮಧುರೆಗೆ ಹೊರಡುವವನಂತೆ, **ಬಳ್ಳಿ ಹೇಳೆಗಳಂತೆ** = ಮಧುರಾ ಪಟ್ಟಣದಲ್ಲಿ ಶುಭ ಸಂದರ್ಭವಂತೆ, **ಬಿಲ್ಲು ಹಬ್ಬಗಳಂತೆ** = ಕಂಸನು ಧನುರ್ಹಬ್ಬದ ನೆವದಿಂದ ಶ್ರೀ ರಾಮಕೃಷ್ಣನನ್ನು ಕರೆಸಿಕೊಳ್ಳುತ್ತಾ ನಂತೆ.

**ಎಲ್ಲಾ ಬೀದಿ ಸಿಂಗರವಂತೆ** = ಮಧುರಾ ನಗರಿಯ ಸಮಸ್ತ ರಾಜ ಬೀದಿಗಳು ಅಲಂಕೃತವಾಗಿವೆಯಂತೆ, **ಮಲ್ಲರ ಕೂಟವಂತೆ** - ಬಿಲ್ಲು ಹಬ್ಬದ ಸಮಾರಂಭದಲ್ಲಿ ಜಗಜಟ್ಟಿಗಳ ಕುಸ್ತಿ ಪ್ರದರ್ಶನವಂತೆ, (ಮಲ್ಲರು–ಪರಾ ಕ್ರಮ ಶಾಲಿಗಳಾದ ಜಟ್ಟಿಗಳು. ಕೂಟ-ಸಮೂಹ–ವೃಂದ), **ಮತ್ತೆ ಕಾಳಗವಂತೆ** = ಅಲ್ಲಿ ಕುಸ್ತಿಗಳ ಪಂದ್ಯವಂತೆ, **ಅಲ್ಲಿ ತಾಯ್ತಂದೆಗಳ ಕಾಲಿಗೆ ನಿಗಳವಂತೆ** = ಮಧುರಾ ನಗರಿಯ ತುರಂಗದಲ್ಲಿ ಶ್ರೀ ಕೃಷ್ಣನ ಮಾತಾ ಪಿತೃಗಳಾದ ದೇವಕೀ–ವಸುದೇವರನ್ನು ಕಾಲಿಗೆ ಬೇಡಿ ಹಾಕಿ ಬಂಧಿ ಸಿದ್ದಾರಂತೆ. ಹಾಗೆಯೇ ಕಂಸಾಸುರನು ತನ್ನ ತಂದೆಯಾದ ಉಗ್ರಸೇನ

ನನ್ನು ಕಾರಾಗೃಹದಲ್ಲಿ ಬಂಧಿಸಿ ಇಟ್ಟಿದ್ದಾನಂತೆ, **ಮತ್ತೆ ಪಾಂಡವರ ಮೋಹದ ಸೋದರರಂತೆ** = ಅಲ್ಲದೆ ಪಂಚ ಪಾಂಡವರು ಪ್ರೀತಿಯ ಸಹೋದರರು.

**ಅತ್ತೆಯ ಮಕ್ಕಳಂತೆ** = ಶ್ರೀ ಕೃಷ್ಣನ ಸೋದರತ್ತೆ-ಕುಂತೀದೇವಿ ಪಾಂಡವರು ಕುಂತೀ ಸುತರಂತೆ, **ಸುತ್ತ ಶತ್ರುಗಳಂತೆ** = ಎಲ್ಲೆಲ್ಲಿಯೂ ಶ್ರೀ ಕೃಷ್ಣನಿಗೆ ಶತ್ರುಗಳೇ ಸುತ್ತುವರಿದಿದ್ದಾರಂತೆ, **ಸಕಲ ಕಾರ್ಯಗಳಂತೆ** = ಅಲ್ಲಿ ಸಮಸ್ತ ವಿಧವಾದ ವ್ಯಾಪಾರ ವಿಶೇಷಗಳಿವೆ ಎಂತೆ, **ಚಿತ್ತ ಜನಯ್ಯನ** = ಶ್ರೀ ಕೃಷ್ಣನ (ಚಿತ್ತ-ವಿರಾಟ ಪುರುಷನ ಮನಸ್ಸು. ಚಿತ್ತಜ-ಶ್ರೀ ಹರಿಯ ಮನಸ್ಸಿನಿಂದ ಉತ್ಪತ್ತಿಯಾದವನು ಮನ್ಮಥ. ಚಿತ್ತಜನಯ್ಯ-ಮನ್ಮಥನ ಪಿತನಾದ ಶ್ರೀ ಹರಿ. ಪ್ರದ್ಯುಮ್ನನೇ ಮನ್ಮಥನ ಅವತಾರ. ಶ್ರೀ ಕೃಷ್ಣನು ಪ್ರದ್ಯುಮ್ನನ ಪಿತನು. ಇದರಿಂದ ಚಿತ್ತಜನಯ್ಯನು), **ಚಿತ್ತ ಎರಡಾಯ್ತಂತೆ** = ಶ್ರೀ ಹರಿಯ ಚಿತ್ತ (ಇಚ್ಛಾರೂಪವಾದ ಸಂಕಲ್ಪ) ಇಟ್ಟಿಗೆಯಂತೆ ಒಂದು ಮಧುರಾ ಪಟ್ಟಣಕ್ಕೆ ಆಗಮನ. ಇನ್ನೊಂದು ತದ್ವಾರಾ ಕಂಸನ ವಧೆ.

**ಅಲ್ಲಿ ಪುಟ್ಟಿದನಂತೆ** = ಶ್ರೀ ಕೃಷ್ಣನು ಜನಿಸಿದ್ದು ಆ ಮಧುರಾ ಪಟ್ಟಣವೇ ಅಂತೆ, **ಅರಸನ ಅಳಿಯನಂತೆ** = ಮಧುರಾಧಿಪತಿಯಾದ ಕಂಸಾಸುರನಿಗೆ ಶ್ರೀ ಕೃಷ್ಣನು ಸೋದರಳಿಯನಾಗಬೇಕಂತೆ, **ಇಲ್ಲಿಗೆ ಬಂದನಂತೆ** = ಮಧುರಾ ನಗರಿಯಿಂದ ಈ ನಂದಗೋಕುಲಕ್ಕೆ ವಸುದೇವನು ಕರೆದು ತಂದನಂತೆ, **ಕಳ್ಳರ ಕಪಟನಂತೆ** = ಗೋಪಿಕಾಸ್ತ್ರೀಯರ ಗೃಹಗಳನ್ನೂ ಪೊಕ್ಕು ಹಾಲು-ಬೆಣ್ಣೆಗಳ ಚೋರನಂತೆ ಕಪಟ ನಾಟಕವಾಡಿದನಂತೆ.

**ಎಂದಿಗೂ ಹೀಗಂತೆ** = ಇಲ್ಲಿ ಎರಡು ಅರ್ಥ. ಒಂದು-ಅನಾದ್ಯನಂತ ಕಾಲದಿಂದಲೂ ಶ್ರೀ ಪರಮಾತ್ಮನು ಕಪಟ ನಾಟಕ ಸೂತ್ರಧಾರಿಯು. ಎರಡನೆಯದು. -ತುಂಟ ಕೃಷ್ಣನು ಇದೇ ರೀತಿಯಲ್ಲಿ ಎಡಬಿಡದೆ ಪಾಲು-ನವನೀತ ಚೋರನಂತೆ, **ನಿಲ್ಲದೆ ಯಶೋದೆಗೆ ಕಣ್ಣೀರಂತೆ** = ಕೃಷ್ಣನ

ತುಂಟತನವನ್ನು ತಾಳಲಾರದ ಗೋಪಸ್ತ್ರೀಯರು ಒಬ್ಬೊಬ್ಬರಾಗಿ ಬಂದು ಕೃಷ್ಣನ ಕೃತ್ಯಗಳನ್ನು ಕುರಿತು ಚಾಡಿ ಹೇಳಿದಾಗ, ಯಶೋದೆಯು ವ್ಯಥೆ ಅಷ್ಟಿಷ್ಟಲ್ಲವಂತೆ.

**ತಾಳಲಾರೆವು ನಾವು** = ಶ್ರೀ ಕೃಷ್ಣನ ವಿಯೋಗವನ್ನು ನಾವೆಂದೂ ಸಹಿಸಲಾರೆವು, **ಪುರಂದರ ವಿಠ್ಠಲನ ಕಾಣದೇ ನಿಲ್ಲಲಾರವೆ** = ಶ್ರೀ ಕೃಷ್ಣನನ್ನು ಕಾಣದೇ ಒಂದು ಕ್ಷಣವೂ ನಾವಿರಲಾರೆವು, **ಕಾಲದಲಿ ಒಂದಾಗಿ** = ಸ್ವಲ್ಪವೂ ಕಾಲ ವಿಳಂಬ ಮಾಡದೆ, **ಕಾಮಿನಿಯರು ಕೂಡಿ** = ಸುಂದರ ಸ್ತ್ರೀಯರಾದ ಗೋಪಸ್ತ್ರೀಯರೆಲ್ಲಾ ಒಂದುಗೂಡಿ, **ಆಲಸ್ಯವಿಲ್ಲದೆ** = ಬೇಸರವಿಲ್ಲದೆ, **ಆಣೆಯಿಡುವ ಬನ್ನಿ** = "ನೀನು ನಮ್ಮನ್ನು ಬಿಟ್ಟು, ಅಗಲಿ ಹೋದರೆ ನಮ್ಮ ಮೇಲಿನ ಆಣೆ"-ಎಂದು ಆಣೆ ಮಾಡುವ ಬನ್ನಿ-ಎಂದು ಸಕಲ ಗೋಪಸ್ತ್ರೀಯರು ನೆರೆದಿದ್ದಾರೆ.



## ೭೦

### ಕೀರ್ತನೆ-೩೭

### (ವಿಜಯವಿಠ್ಠಲಾಂಕಿತ)

### ಶ್ರೀ ಹರಿಯ ಮಹಾತ್ಮೆ

**ರಾಗ-ಷಂತುವರಾಳಿ** **ಅಟ್ಟತಾಳ**

ಅಭಯ ಗಿರಿಯವಾಸ ಶ್ರೀನಿವಾಸನು ನಮಗೆ
ಶುಭವೀವ ನಿರುತ ಮಂದಹಾಸನೋ ॥ ॥ಪ॥

ಧೇನಿಪರ ಮನಕೆ ಚಿಂತಾಮಣಿಯೋ ಸ್ವಾಮಿ
ನೀನೆ ಗತಿ ಯೆಂಬರಿಗೆ ಹೊಣೆಯೋ
ಜ್ಞಾನಮಯ ಸಂದಣಿಯೊ ಪುಣ್ಯ
ಕಾನನ ನಿವಾಸ ಸುರಖಣಿಯೋ ॥ ॥೧॥

ಶರಣರಿಗೆ ವಜ್ರ ಪಂಜರನೋ-ದುಷ್ಟ
ದುರುಳ ದೈತ್ಯರಿಗೆ ಝು ಝರ್ಝರನೋ
ದುರಿತ ಕದಳಿಗೆ ಕುಂಜರನೊ ಸ್ವಾಮಿ
ಉರಗತಲ್ಪನಾದ ಸಿರಿವರನೋ ॥ ॥೨॥

ಪರಮೇಷ್ಠಿ ಶಿವರೊಳಗಿಪ್ಪನೋ–ಇಂದು
ಮರುತನ ಪೆಗಲೇರಿ ಬಪ್ಪನೋ
ಶರಣರಿಗೊರವೇಯೆ ತಪ್ಪನೋ-ನಮ್ಮ
ಸಿರಿ ವಿಜಯವಿಠ್ಠಲ ತಿಮ್ಮಪ್ಪನೋ ॥ ॥೩॥



**ಅರ್ಥವಿವರಣೆ :**

ಭೃಗಂಶ ಸಂಭೂತರಾದ ಶ್ರೀ ವಿಜಯ ದಾಸವರೇಣ್ಯರ ದಿವ್ಯ ಸುಂದರ ಕೀರ್ತನ ಸಾಹಿತ್ಯವಿದು. ಪ್ರಸಕ್ತ ಕೀರ್ತನೆಯಲ್ಲಿ ದಾಸರಾಯರು. ಸಪ್ತಗಿರಿ ನಿವಾಸನಾದ ಶ್ರೀ ವೆಂಕಟೇಶನ ಕಾರುಣ್ಯಾತಿಶಯವನ್ನು ಮುಕ್ತ ಕಂಠದಿಂದ ಕೊಂಡಾಡಿದ್ದಾರೆ.

**ಅಭಯ** = ಭಕ್ತ ಜನರಿಗೆ ಸದಾ ಅಭಯಪ್ರದಾಯಕನು, **ಗಿರಿಯ ವಾಸ** = ಅಂತಹ ಅಭಯಪ್ರದನಾದ ಅಚ್ಯುತನು ಶೇಷ ಗಿರಿಯಲ್ಲಿ **ವಾಸ**

ವಾಗಿದ್ದಾನೆ. ಅವನ ಪರಮ ಪಾವನವಾದ ಸನ್ನಿಧಿಯಿಂದ ಶೇಷಗಿರಿಯೂ "ಅಭಯಗಿರಿ"-ಎನಿಸಿದೆ, **ಶ್ರೀನಿವಾಸನು** = ನಿತ್ಯಾವಿನಿಯೋಗಿಯಾದ ಶ್ರೀ ಲಕ್ಷ್ಮೀದೇವಿಯನ್ನು ಸದಾ ತನ್ನ ವಕ್ಷ ಸ್ಥಳದಲ್ಲಿ ಧರಿಸಿರುವ ಶ್ರೀ ಹರಿ (ಶ್ರೀ ವತ್ಸ ವಕ್ಷಾಂಕಿತನು), **ಶುಭವೀವ**=ಭಕ್ತ ಜನ ಸಂದೋಹಕ್ಕೆ ಬಂದು ಒದಗುತ್ತಿರುವ ದುರಿತಗಳನ್ನು ಪರಿಹರಿಸಿ, ಸಂರಕ್ಷಿಸಿ ಮಂಗಳ ವನ್ನುಂಟು ಮಾಡುವ ಜಗನ್ಮಂಗಳ ಮೂರ್ತಿ.

**ಮಂದ ಹಾಸನೋ**=ಸದಾ ಶ್ರೀ ಹರಿಯ ಕಿರುತುಟಿಗಳ ಮೇಲೆ ಮಂದಹಾಸವು ಲಾಸ್ಯ ವಾಡುತ್ತಿರುವುದು ಇದು ಶ್ರೀ ಹರಿಯ ಅನುಗ್ರಹ ಹಾಗೂ ಭಕ್ತರ ಮೇಲೆ ಇಟ್ಟಿರುವ ಕಾರುಣ್ಯದ ಸಾಂಕೇತ, **ಚಿಂತಾ ಮಣಿಯೋ** = ಸಮುದ್ರ ಮಥನ ಕಾಲದಲ್ಲಿ"ಚಿಂತಾಮಣಿ"-ಎಂಬ ಅನರ್ಘ್ಯ ರತ್ನವು ದೊರೆಯಿತು. ಅದು ತನ್ನನ್ನು ಸೇವಿಸುವವರಿಗೆ ಸಕಲ ಅಭೀಷ್ಟ ಗಳನ್ನು ಕೊಡುವ ದಿವ್ಯ ರತ್ನ. ಅಂತೆಯೇ ತನ್ನನ್ನು ಮನಸ್ಸಿನಲ್ಲಿ ಸದಾ ಧ್ಯಾನಿಸುತ್ತಿರುವ ಸಾಧಕರ ಪಾಲಿಗೆ ಚಿಂತಾಮಣಿ ಸದೃಶನು.

**ಹೊಣೆಯೋ** = "ಅನ್ಯಥಾ ಶರಣಂ ನಾಸ್ತಿ ತ್ವಮೇವ ಶರಣಂಮಮ" -ಎಂದು ಸೇವಿಸುವ ಭಕ್ತರ ಸಂರಕ್ಷಣಾ ಜವಾಬ್ದಾರಿಯನ್ನು (ಹೊಣೆ) ಸದಾ ಹೊತ್ತಿರುವ ಕರುಣಾಮಯನು, **ಜ್ಞಾನಮಯ ಸಂದಣಿಯೋ** =ಅತ್ಯಂತ ಸ್ವಚ್ಛವಾದ (ಲೋಕ ವಿಲಕ್ಷಣವಾದ) ಜ್ಞಾನಮಯನೋ (ಜ್ಞಾನದಿಂದ ನಿಬಿಡವಾದ ದೇಹವುಳ್ಳವನು ಶ್ರೀಹರಿಯ ದೇಹವೇ ಜ್ಞಾನಾ ನಂದಮಯವು. ಜ್ಞಾನಪೂರ್ಣ ಸ್ವರೂಪನು), **ಪುಣ್ಯಕಾನನ ನಿವಾಸ** =ಪುಣ್ಯ ಪುರುಷರಲ್ಲಿ ಸದಾ ಸನ್ನಿಹಿತನಾಗಿರುವವನು. (ಇಲ್ಲಿ ಕಾನನ- ಎಂಬ ಶಬ್ದಕ್ಕೆ ಕಾಡು ಎಂತ ಅರ್ಥೈಸಬಾರದು. ಅರಣ್ಯವು ಹೇಗೆ ಉನ್ನತ ವೃಕ್ಷಗಳಿಂದ ನಿಬಿಡವಾಗಿ, ಅಂದರೆ ಸಾಂದ್ರವಾಗಿರುವುದೋ, ಅಂತೆಯೇ ಪುಣ್ಯವನ್ನೇ ನಿಧಿಯನ್ನಾಗಿ ಉಳ್ಳ ಸಜ್ಜನರಲ್ಲಿ ಸದಾ ಇರುವವನು).

**ಸುರಖಣಿಯೋ** = ದೇವೋತ್ತಮನಾದವನೋ–(ಕ್ಷರಾಕ್ಷರ ಪುರುಷರಿಗಿಂತಲೂ ಅತ್ಯಂತ ಶ್ರೇಷ್ಠನಾದವನು), **ಶರಣರಿಗೆ** = ತನ್ನ ಮೊರೆ ಹೊಕ್ಕ ಭಕ್ತ ಜನ ವೃಂದಕ್ಕೆ, **ವಜ್ರ ಪಂಜರನೋ** = ಸಂರಕ್ಷಕನು (ವಜ್ರದ ಪಂಜರದಲ್ಲಿ ಇರತಕ್ಕವರಿಗೆ ಇತರರ ಯಾರ ಭಯವೂ ಇಲ್ಲ ವಜ್ರ ಪಂಜರವು ಅಭೇದ್ಯ), **ದುಷ್ಟ ದುರುಳ ದೈತ್ಯರಿಗೆ** = ದೈತ್ಯರೂ ದುಷ್ಟ ಸ್ವಭಾವದವರೂ ಹೌದು ಮತ್ತು ತಮೋಯೋಗ್ಯರೂ ಹೌದು (ದುರುಳರು-ಪರರಿಗೆ ಪೀಡೆ ಕೊಡುವವರು), **ಝುಝರನೋ** = ಅಂತಹ ದುಷ್ಟ ದುರುಳ ದೈತ್ಯರಿಗೆ ಅತಿ ಭಯಂಕರನು. ದೈತ್ಯಾದಿಯು ಶ್ರೀ ಹರಿಯನ್ನು ಕಂಡರೆ ಅವರ ಎದೆ ಝಲ್ಲೆನಿಸುವುದು–(ಹೃದಯ ವಿದ್ರಾವಕನು), **ದುರಿತ ಕರಳಿಗೆ ಕುಂಜರನೋ** = ಪಾಪಗಳೆಂಬ ಬಾಳೇ ಗಿಡದ ವನಕ್ಕೆ ಮದಗಜ ಸದೃಶನು. ಆನೆಯು ಬಾಳೇ ವನವನ್ನು ಹೊಕ್ಕು, ಸರ್ವನಾಶ ಮಾಡುವಂತೆ, ಶ್ರೀ ಹರಿಯು (ನರಸಿಂಹನು) ದೈತ್ಯರ ಪಾಲಿಗೆ ಸರ್ವನಾಶಕನು.

**ಉರಗ ತಲ್ಪನಾದ** - ಶೇಷ ಶಾಯಿಯಾದವನು. (ಉರಗ–ಸರ್ಪ. ಉರ–ಎದೆ-ಗ-ಗಮನ. ಸರ್ಪವು ಎದೆಯ ವರ್ತುಳಾಕಾರವಾದ ಮೂಳೆಗಳ ಚಲನೆಯಿಂದ ಹರಿಯುವುದು–ಸರಿ (ಸೃಪಜಾತಿ), **ಸಿರಿವರನೋ** = ಶ್ರೀ ಲಕ್ಷ್ಮೀದೇವಿಗೆ ಅನುಗ್ರಹ ಹಾಗೂ ಆನಂದ ಪ್ರದನು. (ಇಲ್ಲಿನ ಶಬ್ದ ಚಮತ್ಕಾರದಿಂದ, ದಾಸರಾಯರು. ತಾರತಮ್ಯವನ್ನು ಹೇಗೆ ನಿರೂಪಿಸಿದ್ದಾರೆ–ನೋಡುವುದು).

**ಪರಮೇಷ್ಠಿ** = ಜೀವ ಕೋಟಿಯಲ್ಲಿಯೇ ಅತ್ಯಂತ ಹಿರಿಯರೂ ಮತ್ತು ಶ್ರೀ ಹರಿಯ ಜ್ಯೇಷ್ಠ ಪುತ್ರರೆನಿಸಿದ ಚತುರ್ಮುಖ ಬ್ರಹ್ಮದೇವರು, **ಶಿವನೊಳಗಿಪ್ಪವನೋ** = ರುದ್ರ ದೇವರಲ್ಲಿ ಅಂತರ್ಯಾಮಿಯಾಗಿರುವವನು. ಅಂದರೆ ಬ್ರಹ್ಮ ರುದ್ರಾಂತರ್ಗತ ಭಗವದ್ರೂಪಗಳ ಚಿಂತನೆ, **ಇಂದು** = ಈ ದಿನ ಈ ಉತ್ಸವದಲ್ಲಿ, **ಮರುತನ ಹೆಗಲೇರಿ** = ವಾಯು ವಾಹನನಾಗಿ (ಅಂದು ತಿರುಪತಿಯಲ್ಲಿ ಹನುಮಂತೋತ್ಸವ ಎಂದು ಕಾಣಿಸುತ್ತದೆ. ಈ ಕೀರ್ತನ ಪ್ರಸಂಗದಿಂದ). ಶ್ರೀ ಹರಿಯ ವಾಹನಗಳು ಎರಡು ಪ್ರಕಾರ,

ಒಂದು ಗರುಡದೇವರು. ಇನ್ನೊಂದು ಶ್ರೀ ವಾಯುದೇವರು ಇದರಿಂದ ಶ್ರೀ ಪರಮಾತ್ಮನು ಗರುಡ ವಾಹನನು ಮತ್ತು ವಾಯು ವಾಹನನೂ ಆಗಿದ್ದಾನೆ.

**ಶರಣರಿ ವರೆವೀಯೆ ತಪ್ಪನೋ** = ತನ್ನನ್ನೇ ಸದಾ ನಂಬಿ ಭಜಿಸುತ್ತಿರುವ ತನಗೆ ಶರಣು ಹೊಕ್ಕ ಭಕ್ತ ಜನರಿಗೆ ವರಪ್ರದಾನ ಮಾಡುವುದರಲ್ಲಿ, ಅನುಗ್ರಹಿಸುವುದರಲ್ಲಿ ಎಂದೆಂದಿಗೂ ತಪ್ಪಿಸುವುದಿಲ್ಲ ಸದಾ ವರಪ್ರದನಾಗಿದ್ದಾನೆ, **ತಿಮ್ಮಪ್ಪನೋ** = ತಿರುಪತಿಯ ಶ್ರೀನಿವಾಸ.



## ೭೧

### ಕೀರ್ತನೆ–೪೨

### ಶ್ರೀ ವೆಂಕಟೇಶ ಮಹಾತ್ಮ್ಯೆ

### (ಅಂಕಿತ–ಭೀಮೇಶ ಕೃಷ್ಣ)

**ರಾಗ–ಮೋಹನ** **ಆದಿತಾಳ**

ಅಪ್ಪ ವೆಂಕೋಬನ ನೇತ್ರದಲಿ ನೋಡಿ ಪವಿತ್ರಳಾದೆನೋ ಇಂದಿಗೆ ||ಪ||

ತಪ್ಪುಗಳೆಲ್ಲ ನಿನಗರ್ಪಿಸುವೆ ನಾನೀಗ
ಒಪ್ಪಿಕೋಬೇಕೊ ತಿಮ್ಮಪ್ಪ ಕರುಣಾನಿಧಿಯೆ || ||ಅ||

ಹೆದರದೆ ಭೃಗು ಋಷಿಯು ಒದೆಯ ಪಾದಗಳಿಂದ
ಎದೆಯ ಮೇಲಿರುವ ಲಕ್ಷ್ಮಿ

ಕದನ ಮಾಡುತಲೆ ಕೊಲ್ಲಾಪುರಕೆ ನಡೆ ತರಲು
ಒದಗಿ ವೈಕುಂಠ ಬಿಟ್ಟು
ಯದುನಾಥ ಯಾರಿಲ್ಲದಂತೆ ಗುಡ್ಡವ ನೇರ
ಇದು ನಿನಗೆ ಸದನವಾಯಿತೋ ದೇವ ॥ ॥೧॥

ಹುತ್ತದೊಳಡಗಿ ನೀ ಗುಪ್ತದಿಂದಿರುತಿರಲು
ಉತ್ತಮ ಗೋವು ಬಂದು
ನಿತ್ಯದಲಿ ಕ್ಷೀರವನು ಕರೆಯೆ ಗೋವಳನಿಂದ
ನೆತ್ತಿಯ ನೊಡೆದುಕೊಂಡು
ಸಿಟ್ಟಿನಿಂದಲಿ ಚೋಳರಾಯಗೆ ಶಾಪವನು
ಕೊಟ್ಟು ಕಿರೀಟವನು ಇಟ್ಟು ಮೆರೆಯುವ ದೇವ ॥ ॥೨॥

ಮಾಯಾ ರಮಣನೆ ನಿನ್ನ ಗಾಯದೌಷಧಕ್ಹೋಗಿ
ಭೂರಮಣಸ್ವರಾಹನಿಂದ
ನೂರು ಪಾದ ಭೂಮಿ ಕೊಟ್ಟರೆ ಸಾಕೆಂದು-
ಪಾಯದಿಂದದ ನ್ಯಾಪಿಸಿ
ತಾಯಿ ಬಕುಳಾ ದೇವಿಯಿಂದ ಪೂ
ಜೆಯಗೊಂಬೋ ಶ್ರೀ ಯರಸನು ನಿನಗೆ ಸರಿಯೇ-ದೇವ ॥ ॥೩॥

ನಾಟಕಧಾರಿ ಕಿರಾತರೂಪವ ಧರಿಸಿ
ಬೇಟೆಗೆನುತಲಿ ಪೋಗಲು
ತೋಟದಲಿ ಚೆಲ್ವೆ ಪದ್ಮಾವತಿಯ ಕಡೆಗಣ್ಣ
ನೋಟದಲಿ ಮನನೋಲಿಸಿ
ಬೂಟಕತನದಿ ಜಗಳಾಟವನ್ನೆ ಮಾಡಿ
ಪಾಟು ಬಟ್ಟು ಕಲ್ಲಲೇ-ಟು ತಿಂದೆಯೋ–ದೇವ ॥ ॥೪॥

ಗದಗದನೆ ನಡುಗುತಲಿ ಕುದುರೆಯನು ಕಳಕೊಂಡು
ಪದ್ಮಾವತಿ ವಾರ್ತೆಯನ್ನು ಬಳಿಯ

ಲಿದ್ದ ಬಕುಳ ಮಾಲಿಕೆಗೆ ಬೋಧಿಸಿ ಕಳಿ
ಸಿದಾಕಾಶನಲ್ಲಿ ಚದುರ ಮಾತಿನ
ಚಪಲ ಕೊರವಂಜಿ ನೀನಾಗಿ ಕಣಿಯು
ಹೇಳಲು ಎಲ್ಲಿ ಕಲಿತೆಯೋ-ಮಹದೇವ ॥ ॥೩॥

ಬಂಧು ಬಳಗವ ಕೂಡಿ ಭಾರಿ ಸಾಲವ ಮಾಡಿ
ಕೊಂಡು ಕರವೀರದಿಂದೆ
ಅಂಡಲೆದು ಕರೆಸಿ ಕಾಣುತಲಿ ಲಕ್ಷ್ಮಿಯನಪ್ಪಿ
ಕೊಂಡು ಪರಮ್ಹರುಷದಿಂದ
ಮುಂದಗ ಮನೆಯ ನಿನ್ನ ಮಾತು ಲಾಲಿಸಿ ಮಾಡಿ
ಕೊಂಡೆ ಪದ್ಮಾವತಿಯ ಅಂದೆಯೋ ಎಲೆ–ದೇವ ॥ ॥೬॥

ಆಕಾಶರಾಜ ಅನೇಕ ಹರುಷದಿ ಮಾಡೆ
ತಾ ಕನ್ಯಾ ದಾನವನ್ನು
ಹಾಕಿದ ರತ್ನ ಮಾಣಿಕ್ಯದ ಕಿರೀಟವನು
ಬೇಕಾದಾಭರಣ ಭಾಗ್ಯ
ಸಾಕಾಗದೇನೊ ಬಡವರ ಕಾಡಿ ಬೇಡುವುದು
ಶ್ರೀಕಾಂತ ನಿನಗೆ ಸರಿಯೆ–ದೇವ ॥ ॥೭॥

ಹೇಮ ಗೋಪುರದಿ ವಿಮಾನ ಶ್ರೀನಿವಾಸ
ದೇವರನು ನೋಡಿ ನಮಿಸಿ
ಕಾಮಿಸಿ ಕಂಡೆ ಹೊನ್ನೊಸ್ತಿಲು ಗರುಡ
ಗಂಬದ ಸುತ್ತ ಪ್ರಾಕಾರವೂ
ಸ್ವಾಮಿ ಪುಷ್ಕರಣಿಯಲಿ ಸ್ನಾನ ಪಾನವ ಮಾಡಿ
ನೋಡಿದೆನು ನಿನ್ನ ಭಕುತರ–ದೇವ ॥ ॥೮॥

ಪನ್ನಗಾದ್ರಿ ವೆಂಕಟನ್ನ ರಥಶೃಂಗಾರ
ವರ್ಣಿಸಲಳವೆ ನಮಗೆ
ಕಣ್ಣಾರ ಕಂಡೆ ಗರುಡೋತ್ಸವದಲಂಕಾರ
ಇನ್ನೆಲ್ಲೂ ಕಾಣೆ ಜಗದಿ
ಅನ್ನಪೂರ್ಣೆಯು ನೋಡೆ ಅಧಿಕ ಗಂಟೆಯು ನಾದ
ಎನ್ನ ಕಿವಿಗಾನಂದವೋ–ದೇವ ॥ ॥೯॥

ಪಾದದಲ್ಲೊಪ್ಪೋ ಪಾಗಡ ರುಳಿ ಕಿರುಗೆಜ್ಜೆ
ಮೇಲೆಲವೊ ಪೀತಾಂಬರ
ನೀಲ ಮಾಣಿಕದ ಉಡಿದಾರವೋ ವೈ ಜಯಂತೀ
ಮಾಲೆ ಶ್ರೀ ವತ್ಸದ್ಹಾರ
ಮೇಲಾದ ಸರಿಗೆ ಸರ ಪದಕವೊ ಕಮಲ–
ದಳಾಯತಾಕ್ಷನ ನೋಡಿದೆ-ದೇವಾ ॥ ॥೧೦॥

ಕರಗಳಲ್ಲಿಟ್ಟು ಕಂಕಣ ಕಡಗ ಭುಜ ಕೀರ್ತಿ
ವರ ಶಂಖ ಚಕ್ರ ಧಾರಿ
ಗಿರಿಯೆ ಭೂ ವೈಕುಂಠವೆಂದು ತೋರುತ ನಿಂತ
ಶಿರದಿ ಕಿರೀಟ ಧರಿಸಿ
ಬಿಳಿಯ ತ್ರಿನಾಮ ಭೀಮೇಶ ಕೃಷ್ಣನ ಮುಖದಿ
ಹೊಳೆವ ಮೂರುತಿಯ ನೋಡಿ–ಹೇ ದೇವಾ ॥ ॥೧೧॥



**ಅರ್ಥವಿವರಣೆ :**

ಶ್ರೀ ಹರಪನಹಳ್ಳಿ ಭೀಮವ್ವನವ ಸುಂದರ ಕೀರ್ತನ ಸಾಹಿತ್ಯವಿದು. ಪ್ರಸಕ್ತ ಕೀರ್ತನೆಯಲ್ಲಿ ಸಪ್ತಗಿರಿ ಶ್ರೀನಿವಾಸನ ದರ್ಶನ ಭಾಗ್ಯದ ಸುಂದರವಾದ ವಿವರಣೆ ಇದೆ.

ಕೀರ್ತನಕಾರರು ಬಳ್ಳಾರಿ ಜಿಲ್ಲೆಯ ಹರಪನಹಳ್ಳಿಯವರು ಹೆಸರು-ಭೀಮವ್ವ. ಜನನ :-6-7-1823. (ಭಾನುವಾರ). ಸ್ವಭಾನು ಸಂವತ್ಸರದ ಜ್ಯೇಷ್ಠ ಬಹುಳ ತ್ರಯೋದಶಿಯಂದು ಜನಿಸಿದರು. ಈಕೆಯ ತಂದೆ-ರಘುನಾಥಾಚಾರ್ಯ. ತಾಯಿ-ರಾಘವಮ್ಮ. ಕೌಂಡಿನ್ಯ ಗೋತ್ರ ಸಂಜಾತರು. ಯಜುರ್ವೇದಿಗಳು.

ಶ್ರೀ ರಾಘವೇಂದ್ರ ಸ್ವಾಮಿಗಳ ಮಠದ ಅನುಯಾಯಿಗಳು ಅವರ ಚೊಚ್ಚಲು ಪುತ್ರಿಯಾದ ಈಕೆಯ ಹೆಸರು ಕಮಲಾಕ್ಷಿ ಕ್ರಮೇಣ ಆಕೆಯ ಹೆಸರು—ಭೀಮಾಬಾಯಿ ಎಂದಾಯಿತು. ಮುಂದೆ-ಭೀಮವ್ವನೆಂಬ ವಾಡಿಕೆಯ ಹೆಸರೇ ನಿಂತಿತು. ಹುಟ್ಟಿದ ಮಗುವಿಗೆ ಕೆಲವು ಕಾಲ ಮೈ ತುಂಬಾ ಚಕ್ರಗಳೂ, ಕಾಲುಗಳಲ್ಲಿ ಪದ್ಮಗಳೂ ಕಾಣುತ್ತಿದ್ದುವಂತೆ.

ಭೀಮವ್ವನ ತಾತ—(ತಾಯಿಯ ತಂದೆ)-ಶ್ರೀ ಜೋಯಿಸ ವೆಂಕಪ್ಪಾಚಾರ್ಯರು ಚಿಕ್ಕಂದಿನಿಂದಲೂ ಹರಿದಾಸರ ಕೀರ್ತನೆಗಳಲ್ಲಿ ಆಸಕ್ತಳಾಗಿದ್ದು, ತನ್ಮಯಳಾಗುತ್ತಿದ್ದಳು ಮಗುವು ತಾನು ಕೇವಲ ಒಂದು ವರ್ಷವಾಗಿದ್ದಾಗ, ತೊಟ್ಟಿಲಿನಲ್ಲಿ ಮಲಗಿದ್ದಾಗ, ಕೃಷ್ಣ ಸರ್ಪವೊಂದು ಜಂತಿಯಿಂದ ಇಳಿದು ಬಂದು, ಮಗುವಿನ ಮೇಲೆ ಮಲಗಿತ್ತಂತೆ ಮನೆಯವರು ಓಡಿ ಬಂದು ಭಯ ಭೀತರಾಗಿ, ಮಗುವನ್ನು ಹೊರಗೆ ಎತ್ತಿಕೊಂಡು ಹೋದರಂತೆ ಚಿಕ್ಕಂದಿನಲ್ಲಿ ನಡೆದ ವಿಶಿಷ್ಟವಾದ ಘಟನೆ ಇದು.

ಭೀಮವ್ವನವರಿಗೆ ಹನ್ನೊಂದು ವರ್ಷದವಳಿದ್ದಾಗ, ರಾಮದುರ್ಗ ತಾಲ್ಲೂಕಿನ ಹರೇಸಮುದ್ರ ಗ್ರಾಮದ ಕುಲಕರ್ಣಿಗಳ ವಂಶದ ಗೋಪಾಲಪ್ಪನವರ ಮರಿಮಗ—ಮುನಿಯಪ್ಪನವರೊಂದಿಗೆ ವಿವಾಹವಾಯಿತು. ಅತ್ತೆ ಮನೆಯನ್ನು ಭೀಮವ್ವ ಸೇರಿದಳು.

ಅತ್ತೆಯ ಮನೆಯ ನಾಮ—ಕೃಷ್ಣಾಬಾಯಿ ಎಂದು. ಎರಡು ನಾಮಗಳನ್ನು ಸೇರಿಸಿ "ಭೀಮೇಶಕೃಷ್ಣ"—ಎಂಬ ಅಂಕಿತನಾಮದಿಂದ ಸಹಸ್ರಾರು ಕೀರ್ತನೆಗಳನ್ನು ರಚಿಸಿ, ಹಾಡಿ ಕೊಂಡಾಡಿದ ಹರಿದಾಸ ಮಹಿಳಾಮಣಿ

ಹರಪನಹಳ್ಳಿ ಭೀಮವ್ವನವರು. ಶುಭ ಕೃತ್–ನಾಮ ಸಂವತ್ಸರದ ಪುಷ್ಯ ಶುದ್ಧ ತ್ರಯೋದಶೀ ಆದಿತ್ಯವಾರ–ಮುಕ್ಕೋಟಿ ದ್ವಾದಶೀ ಶುಭದಿನ ದಂದು. ಹರಿ ಕೀರ್ತನ ಮಾಡುತ್ತಾ, ಹರಿ ಪದವನ್ನು ಸೇರಿದ ಪುಣ್ಯ ಜೀವಿ ಭೀಮವ್ವ (11–1–1903).



★

**ಅಪ್ಪ** = ಜಗಜ್ಜನಕನಾದ **ಶ್ರೀ ಹರಿ** ಚರಾಚರಾತ್ಮಕವಾದ ಜಗತ್ತಿನ ಸೃಷ್ಟಿಗೆ ಮೂಲ ಕಾರಣನು. ಶ್ರೀ ಹರಿಯು, **ವೆಂಕೋಬನ** = ವೆಂಕಟೇಶ ಮೂರ್ತಿಯನ್ನು (ಶ್ರೀನಿವಾಸನನ್ನು), **ನೇತ್ರದಲಿ** = ನನ್ನ ಕಣ್ತುಂಬಾ, **ಪವಿತ್ರಳಾದೆನೋ** = ಈ ದಿನ ಶ್ರೀನಿವಾಸನ ದರ್ಶನ ಭಾಗ್ಯ ದಿಂದ ಪುನೀತಳಾದೆ. ಶ್ರೀ ಹರಿಯ ದರ್ಶನ ಮತ್ತು ಸ್ಮರಣೆಯಿಂದ ಸಜ್ಜನರ ಸಕಲ ಪಾಪಗಳು ಪರಿಹಾರವಾಗಿ, ಮನಸ್ಸು ಪವಿತ್ರವಾಗುವುದು.

**ತಪ್ಪುಗಳೆಲ್ಲ ನಿನಗರ್ಪಿಸುವೆ** = ನನ್ನ ದುಷ್ಕರ್ಮದ ಫಲರೂಪವಾದ ದೋಷಗಳು-ತಪ್ಪುಗಳೆಲ್ಲಕ್ಕೂ ನೀನೇ ಪ್ರೇರಕ. ಜಗದ್ವಿಲಕ್ಷಣನಾದ ಜಗದೀಶನು ನಿರ್ದೋಷನು. ಜೀವಕೃತ ಕರ್ಮ ಫಲಗಳಿಂದ ಅವನಿಗೆ ಲೇಪ ವಿಲ್ಲ. ದ್ವಂದ್ವ ಕರ್ಮಗಳಿಗೂ ಕರ್ಮಾಂತರ್ಗತನಾದ ಕಮಲಾ ರಮಣನೇ ಮುಖ್ಯ ಪ್ರೇರಕನು. ಈ ಮಹಾನುಸಂಧಾನವೇ ಕರ್ಮಾರ್ಪಣೆಯ ಮರ್ಮವು.

**ತಿಮ್ಮಪ್ಪ** = ತಿಮ್ಮರಾಯ ಶ್ರೀನಿವಾಸನಿಗೆ ತಿಮ್ಮಪ್ಪನೆಂದು ಹೆಸರು ಅಂದರೆ ಸಜ್ಜನರ ಸಕಲ ಪಾಪ ಪರಿಹಾರಕನು. (ವೇಂಕಟ–ಎಂಬ ಶಬ್ದಾರ್ಥವು), **ಕರುಣಾನಿಧಿಯು** = ಶ್ರೀ ಹರಿಯು ದಯಾ ಸಾಗರನು. ಅವನ ಕಾರುಣ್ಯ ವಿಶೇಷದಿಂದಲೇ ಜೀವರ ಕರ್ಮವಿಮೋಚನೆ ತದ್ದ್ವಾರಾ ಅವರವರ ನಿಜಗತಿ ಪ್ರಾಪ್ತಿ.

**ಹೆದರದೆ** = ಅಳುಕದೆ-ಯಾವ ಸಂಕೋಚವಿಲ್ಲದೇ, **ಭೃಗು ಋಷಿಯು** = ಶ್ರೀ ನಾರದರ ಆದೇಶದ ಪ್ರಕಾರ, ಭೃಗು ಮುನಿಯು ಸತ್ರಯಾಗ ಕ್ಷೇತ್ರದಿಂದ ನೇರವಾಗಿ ಹೊರಟು ಕೈಲಾಸ–ಸತ್ಯ ಲೋಕಗಳಿಗೆ ಹೋಗಿ, ಅವರನ್ನು ಪರೀಕ್ಷಿಸಿ, ನಂತರ ವೈಕುಂಠಕ್ಕೆ ತೆರಳಿ ಹರಿಯೇ ಸರ್ವೋತ್ತಮ ದೇವತಾ–ಎಂದು ಜಗತ್ತಿಗೆ ಸಾರಿದ ಧೀರ ಮುನಿ ಪುಂಗವನು ಭೃಗು ಋಷಿಯು, **ಒದೆಯೆ ಪಾದಗಳಿಂದ** = ಶ್ರೀ ಹರಿಯ ವಕ್ಷ ತಾಡನ ಮಾಡಲು ಇದಕ್ಕೆ ಭೃಗು ಋಷಿಯ ಎಡಗಾಲಿನಲ್ಲಿದ್ದ ಒಬ್ಬ ದೈತ್ಯನ ಆವೇಶವೇ ಕಾರಣ. (ಪುರಾಣೋಕ್ತ). ಈ ವಿಷಯ ಬ್ರಹ್ಮಾಂಡ ಪುರಾಣದಲ್ಲಿ ಉಕ್ತವಾಗಿಲ್ಲ ಅನ್ಯ ಪುರಾಣೋಕ್ತಿಯು.

**ಎದೆಯ ಮೇಲಿರುವ ಲಕ್ಷ್ಮಿ** = ಶ್ರೀ ಹರಿಯು ಶ್ರೀ ವತ್ಸಾವಕ್ಷಾಂಕಿತನೂ ಅವನ ಎದೆಯ ಎಡ ಪಾರ್ಶ್ವದಲ್ಲಿ ಸ್ವಚ್ಛ ರೋಮಗಳಿಂದ ಆವೃತವಾದ ವರ್ತುಲಾಕಾರವಾದ ಭಾಗವಿದೆ. ಮಚ್ಚೆಯಂತಿರುವ ಆ ಭಾಗವು ಶ್ರೀ ರಮಾ ನಿವಾಸವು. ಇದರಿಂದ ಶ್ರೀ ಲಕ್ಷ್ಮೀದೇವಿಯು ನಿತ್ಯಾವಿನಿಯೋಗಿ ಯಾಗಿದ್ದಾಳೆ, **ಕದನ ಮಾಡುವವಿದೆ** = ಭೃಗು ಋಷಿಯ ಪಾದ ತಾಡವದ ನೆಪದಿಂದ ಶ್ರೀ ಲಕ್ಷ್ಮೀದೇವಿಯು ಕೋಪವನ್ನು ನಟಿಸುತ್ತಾ ವಿಡಂಬನ ಮಾಡಿದ ಪ್ರಸಂಗ ವಿಶೇಷ. ಶ್ರೀ ಲಕ್ಷ್ಮೀನಾರಾಯಣರಿಗೆ ವಿಯೋಗವೆಂಬುದೇ ಎಂದೆಂದಿಗೂ ಇಲ್ಲ. ಪದ್ಮಾವತಿಯ ಕಲ್ಯಾಣ ಮಹೋತ್ಸವಕ್ಕಾಗಿ ಲಕ್ಷ್ಮೀನಾರಾಯಣರು ಹೂಡಿದ ಆಟವಿದು.

**ಕೊಲ್ಲಾಪುರಕೆ ನಡೆ ತರಲು** = ಶ್ರೀ ಲಕ್ಷ್ಮೀದೇವಿಯು ಕರವೀರ ಪುರಕ್ಕೆ ಹೊರಡುತ್ತಿರಲಾಗಿ, **ಒದಗಿ ವೈಕುಂಠವ ಬಿಟ್ಟು** = ಶ್ರೀಲಕ್ಷ್ಮಿಯ ವಿಯೋಗದಿಂದ ದುಃಖಿತನಾದವನಂತೆ ವಿಡಂಬನ ಮಾಡುತ್ತಾ, ಶ್ರೀ ಹರಿಯು ತನ್ನ ಧಾಮವಾದ ವೈಕುಂಠವನ್ನು ಬಿಟ್ಟು, **ಯದುನಾಥ** = ಯದುಕುಲ ಲಲಾಮನಾದ ಶ್ರೀ ಕೃಷ್ಣಾಭಿನ್ನ ಶ್ರೀ ಮನ್ನಾರಾಯಣನು, (ಮುಂದೆ ಶ್ರೀನಿವಾಸನು ತನ್ನ ಗೋತ್ರಾ ಪ್ರವರವನ್ನು ಹೇಳುವಾಗ, ಶ್ರೀ

ಕೃಷ್ಣನ ಗೋತ್ರಾ ಪ್ರವರಗಳನ್ನೇ ತಿಳಿಸುತ್ತಾನೆ. ಇದರಿಂದ ಶ್ರೀ ಕೃಷ್ಣನೇ ಶ್ರೀನಿವಾಸನು ಎಂತ ತಾತ್ಪರ್ಯ).

**ಯಾರಿಲ್ಲದಂತೆ** = ನಿರ್ಜನವಾಗಿದ್ದ, **ಗುಡ್ಡವ ಸೇರೆ** = ಭೂಮಿ ಗಿಳಿದು ಸರ್ಪಗಿರಿಯನ್ನು ಸೇರಿ, **ಇದು ನಿನಗೆ ಸದನವಾಯಿತೋ ದೇವ** = ಎಲೈ ಶ್ರೀ ಹರಿಯೆ ! ಶೇಷಾದ್ರಿಯೇ ನಿನ್ನ ನಿವಾಸ ಸ್ಥಾನವಾಯಿತು. ಇದರಿಂದ ಸಪ್ತಗಿರಿಯೇ ಭೂ ವೈಕುಂಠವೆಂಬ ಸಾಂಕೇತವು.

**ಹುತ್ತದೊಳಡಗಿ** = ಪರ್ವತದ ನೆತ್ತಿಯ ಮೇಲಿದ್ದ ಒಂದು ಹುತ್ತ ದಲ್ಲಿ ಸೇರಿ ಅಲ್ಲಿ ವಾಸಿಸಹತ್ತಿದನು, **ನೀ ಗುಪ್ತದಿಂದ ಇರುತಿರಲು** = ನೀನು ಏಕಾಂಗಿಯಾಗಿ ಯಾರಿಗೂ ಗೋಚರಿಸದಂತೆ ಇರುತ್ತಿರಲಾಗಿ, **ಉತ್ತಮ ಗೋವು ಬಂದು** = ಸರ್ವ ಶ್ರೇಷ್ಠ ಲಕ್ಷಣಗಳಿಂದ ಯುಕ್ತವಾಗಿ ಆಕಳು ಬಂದು (ಬ್ರಹ್ಮದೇವರೇ ಗೋ ರೂಪದಲ್ಲಿ ಸೇವಿಸಿದರು), **ನಿತ್ಯ ದಲಿ ಕ್ಷೀರವನು ಕರೆಯ** = ಪ್ರತಿ ದಿನವೂ ಆ ಹುತ್ತದ ಹತ್ತಿರ ಬಂದು, ಅಮೃತ ತುಲ್ಯವಾದ ಕ್ಷೀರವನ್ನು ಕರೆದು, ಅನಂತಾದ್ರೀಶನಿಗೆ ಕುಡಿಸು ತ್ತಿತ್ತು.

**ಗೋವಳನಿಂದ** = ಚೋಳರಾಜನ ಸೇವಕನಾದ ಗೋಪಾಲನಿಂದ, **ನೆತ್ತಿಯನು ಒಡೆದುಕೊಂಡು** = ಪ್ರಯೋಗಿಸಲ್ಪಟ್ಟ ಕುಠಾರಕ್ಕೆ ತನ್ನ ತಲೆ ಯನ್ನು ಒಡ್ಡಿ, ಗೋವನ್ನು ಪಕ್ಕಕ್ಕೆ ನೂಕಿ, ತಲೆಯನ್ನು ಒಡೆಸಿಕೊಂಡ. ಅಚ್ಛೇದ್ಯ ಅಭೇದ್ಯ ಶರೀರನಾದ ಶ್ರೀ ಹರಿಯು !, **ಸಿಟ್ಟಿನಿಂದಲಿ ಚೋಳ ರಾಯನಿಗೆ ಶಾಪವನು** = ಶಿರೋ ವೇದನೆಯಿಂದ ಕೋಪೋದ್ರಿಕ್ತನಾಗಿ, ಚೋಳರಾಜನಿಗೆ ಪಿಶಾಚಿಯಾಗೆಂದು ಶಾಪವನ್ನಿತ್ತನು.

**ಕೊಟ್ಟು ಕಿರೀಟವನು ಇಟ್ಟು ಮೆರೆಯುವ ದೇವ** = ತನ್ನ ಮಾವ ನಾಗತಕ್ಕ ಆಕಾಶರಾಜನಿಂದ ದತ್ತವಾದ ಕಿರೀಟವನ್ನು ಪ್ರತಿ ಶುಕ್ರವಾರವೂ ನೀನು ಧರಿಸುವಾಗ, ನನ್ನ ದರ್ಶನ ಭಾಗ್ಯದಿಂದ ಆ ಕಾಲದಲ್ಲಿ ನಿನ್ನ

ಪಿಶಾಚಿ ಜನ್ಮವು ಪರಿಹಾರವಾಗುವುದೆಂದು, ಖಿನ್ನನಾದ ಆಕಾಶರಾಜನಿಗೆ ವಿಶಾಪವನ್ನು ಕರುಣಿಸಿದ ಕಾರುಣ್ಯಮೂರ್ತಿ ಆ ಕಂಜದಳಾಯಿತಾಕ್ಷನು !.

**ಮಾಯಾ ರಮಣನೆ** ಮಾಯಾ ನಾಮಕಳಾದ ಶ್ರೀ ಲಕ್ಷ್ಮೀರಮಣನಾದ ವಾಸುದೇವನು, **ಭೂರಮಣ ವರಾಹನಿಂದ** = ತನ್ನದೇ ಆದ (ಅಭೇದ) ಭೂ ವರಾಹ ದೇವರಿಂದ, **ನೂರುಪಾದ ಭೂಮಿ** = ತನ್ನ ಪಾದದಿಂದ ಅಳೆಯಲ್ಪಡುವ ನೂರು ಪ್ರಮಾಣಗಳಷ್ಟು ಭೂ ಪ್ರದೇಶವನ್ನು ದಾನವನ್ನಾಗಿ ಬೇಡಿದ್ದಾನೆ.

(ಶ್ರೀ ವಾಮನರೂಪೀ ಹರಿಯು ಬಲಿ ಚಕ್ರವರ್ತಿಯನ್ನು ಮೂರು ಪಾದದಷ್ಟು ಭೂಮಿಯನ್ನು ದಾನವಾಗಿ ಬೇಡಿದ–ಆದರೆ, ಈ ಪ್ರಸಂಗದಲ್ಲಿ ಸ್ವಾಭಿನ್ನ ರೂಪಗಳಲ್ಲಿಯೇ ರಮಣತ್ವದ ವಿಲಾಸ ವೈಭವವನ್ನು ನೋಡಬಹುದು !), **ಉಪಾಯದಿಂದ ವ್ಯಾಪಿಸಿ** = ಯುಕ್ತಿಯಿಂದ ಬೇಡಿ ದಾನವಾಗಿ ಪಡೆದನು (ಯುಕ್ತ-ಎಂದರೆ, ಭಕ್ತರು ಮೊದಲು ನಿನ್ನ ದರ್ಶನ ಮಾಡಿ, ನಂತರ ತನ್ನ ದರ್ಶನ ಮಾಡಬೇಕು. ಇಲ್ಲದಿದ್ದರೆ ದರ್ಶನದ ಫಲ ಬರುವುದಿಲ್ಲ-ಎಂದು ಭೂ ವರಾಹ ದೇವರಿಗೆ ಶ್ರೀನಿವಾಸನು ಹೇಳಿದ ಯುಕ್ತಿ ಯುಕ್ತವಾದ ಮಾತು), **ತಾಯಿ ಬಕುಳಾ ದೇವಿಯಿಂದ** = ಬೃಹಸ್ಪತ್ಯಾಚಾರ್ಯರು ಶ್ರೀನಿವಾಸನ ಔಷಧೋಪಚಾರ ಸೇವೆಗಾಗಿ "ಬಕುಳಾವತೀ"-ಎಂಬಾಕೆಯನ್ನು ಕಳುಹಿಸಿದ್ದಾರೆ.

ಶ್ರೀ ಕೃಷ್ಣಾವತಾರ ಕಾಲದಲ್ಲಿ ಯಶೋದಾ ದೇವಿಯು ಶ್ರೀ ಕೃಷ್ಣನ ವಿವಾಹಾದಿ ವೈಭವಗಳನ್ನು ನೋಡಿರಲಿಲ್ಲ. ಶ್ರೀ ಹರಿಯ ವರ ಪ್ರಸಾದದಿಂದ ಆ ಯಶೋದೆಯೇ ಕಲಿಯುಗದಲ್ಲಿ ಬಕುಳಾದೇವಿ ಎಂಬ ನಾಮದಿಂದ ಅವತರಿಸಿ, ಶ್ರೀನಿವಾಸನ ಕಲ್ಯಾಣಕ್ಕೆ ಕಾರಣಳಾದಳು.

**ಪೂಜೆಯ ಗೊಂಬೋ** = ಬಕುಳಾ ದೇವಿಯಿಂದ ಸೇವೆಯನ್ನು ನಿತ್ಯವೂ ಕೈಗೊಳ್ಳುತ್ತಿರುವ ಶ್ರೀ ಯರಸನಾದ ಸ್ವರಮಣನು ಅವನಿಗೆ ಜಗತ್ತಿನಲ್ಲಿ ಸರಿಸಮಾರ್ಯಾರು ?.

**ನಾಟಕಧಾರಿ**=ಕಪಟ ನಾಟಕ ಸೂತ್ರಧಾರಿ ಪರಮ ವಿಡಂಬನ ಮೂರ್ತಿ, **ಕಿರಾತರೂಪವ ಧರಿಸಿ**=ಒಮ್ಮೆ ಬೇಟೆಯಾಡುವ ನೆಪದಿಂದ ಬೇಟೆಗಾರನ ವೇಷವನ್ನು ಧರಿಸಿದ್ದಾನೆ, **ತೋಟದಲ್ಲಿ ಚೆಲ್ವೆ**=ರಾಜನ ಉದ್ಯಾನವನದಲ್ಲಿ ಪರಮ ರೂಪ ಸೌಂದರ್ಯಗಳಿಂದ ಶೋಭಿತಳಾದ ಪದ್ಮಾವತಿಯನ್ನು ಕಂಡಿದ್ದಾನೆ.

**ಕಡೆಗಣ್ಣ ನೋಟದಲಿ** ಅವಳೆಡೆಗೆ ಒಮ್ಮೆ ತನ್ನ ಕುಡಿ ನೋಟವನ್ನು ಬೀರಿದ್ದಾನೆ ಆ ಕಮಲದಳಾಯತಾಕ್ಷ !, **ಬೂಟಕತನದಿ** = ಪದ್ಮಾವತಿಯ ಮನಸ್ಸು ಶ್ರೀನಿವಾಸನ ಕುಡಿ ನೋಟದಲ್ಲಿ ಸಿಲುಕಿತು. ಮೋಸದಿಂದ ಅವಳ ಸಖಿಯರೊಡನೆ ಮಾತಿನ ಚಕಮಕಿಯ ರೂಪದಲ್ಲಿ ಕದನವನ್ನೇ ಆರಂಭಿಸಿದ್ದಾನೆ, **ಪಾಡುಪಟ್ಟು**=ಸಖಿಯರು ಬೀರಿದ ಕಲ್ಲೇಟಿನಿಂದ ಅಶ್ವ ಪ್ರಾಣ ಬಿಟ್ಟಿದೆ. ತಾನು ಪಾಡುಪಟ್ಟ !. ಕಲ್ಲಿನ ಏಟು ತಿಂದ ಕಿರಾತರೂಪೀ ಶ್ರೀನಿವಾಸನು. ತನ್ನ ಹಯವನ್ನು ಕಳೆದುಕೊಂಡು, ತಾನು ಪದ್ಮಾವತಿಯಲ್ಲಿ ಅನುರಕ್ತನಾಗಿರುವ ವಾರ್ತೆಯನ್ನು ಬಕುಳಾ ಮಾತೆಗೆ ತಿಳಿಸಿ, ಅವಳನ್ನು ಮುಂಚೆಯೇ ಆಕಾಶ ರಾಜನ ಪಟ್ಟಣಕ್ಕೆ ಕಳುಹಿಸಿದನು.

**ಚದುರ ಮಾತಿನ ಚಪಲ ಕೊರವಂಜಿ ನೀನಾಗಿ**=ತನ್ನ ಕಾರ್ಯವನ್ನು ತಾನೇ ನಿರ್ವಹಿಸುವುದು ಉತ್ತಮ ಪಕ್ಷ ಎಂದು ನಿರ್ಣಯಿಸಿ, ಶ್ರೀನಿವಾಸನು ಕೊರವಂಜಿ ವೇಷವನ್ನು ಧರಿಸಿದನು. ಚಿತ್ರವಿಚಿತ್ರವಾದ ವೇಷಭೂಷಣಗಳಿಂದ ಅಲಂಕೃತನಾಗಿ, ಮೋಡಿಯ ಮಾತುಗಳನ್ನಾಡುತ್ತಾ ಕಣಿಯ ಹೇಳುತ್ತಾ ಆಕಾಶರಾಜನ ಪಟ್ಟಣದತ್ತ ಸಾಗಿದ.

ಇಂತಹ ಕಣಿಯನ್ನು ಹೇಳುವ ಚಾಣ್ಮೆಯನ್ನು ಎಲ್ಲಿ ಕಲಿತೆಯೋ ಸರ್ವಶಬ್ದ ವಾಚ್ಯನಾದ ಶ್ರೀ ಹರಿಯೇ ?-ಎಂದು ಕೀರ್ತನ ಕರ್ತೃಗಳು ಅಚ್ಚರಿಪಡುತ್ತಾರೆ । ಹೇಗಿದೆ ವಿಶ್ವನಾಟಕ ಪರಮಾತ್ಮನ ಲೋಕ ವಿಡಂಬನೆ !.

**ಬಂಧು ಬಳಗವ ಕೂಡಿ**=ಇತ್ತ ಆಕಾಶ ನೃಪನ ಪಟ್ಟಣದಲ್ಲಿ ಅರಮನೆಯಲ್ಲಿ ಪದ್ಮಾವತಿಯ ತಾಯಿ ಧರಣೀದೇವಿ ಚಿಂತಾಕ್ರಾಂತಳಾಗಿದ್ದಾಳೆ. ಬಂಧು ಬಳಗವೆಲ್ಲಾ ನೆರೆದಿದೆ. ಕಣಿಯನ್ನು ಹೇಳಿ, ಪದ್ಮಾವತಿಯನ್ನು ಜಗನ್ಮೋಹಕನಾದ ಜಗದೀಶನಿಗೆ ಕನ್ಯಾದಾನರೂಪದಲ್ಲಿ ಕೊಡುವಂತೆ ಹೇಳಿ, ಕಣ್ಮರೆಯಾದ ಕಂಜವಳಾಯಿತಾಕ್ಷನು.

**ಭಾರಿ ಸಾಲವ ಮಾಡಿ**=ಶ್ರೀನಿವಾಸನು ಕುಬೇರನಿಂದ ಭಾರೀ ಮೊತ್ತದ ಸಾಲವನ್ನು ಪಡೆದು, ತನ್ನ ಅಪಾರವಾದ ಬಂಧು ಬಳಗದಿಂದ ಒಡಗೂಡಿ ಆಗಮಿಸಿದ ಸೂರ್ಯನನ್ನು ಕಳುಹಿಸಿ, ಕರವೀರದಿಂದ ಲಕ್ಷ್ಮೀ ದೇವಿಯನ್ನು ಕರೆಸಿಕೊಂಡು, ಪರಮ ವೈಭವದಿಂದ ಪದ್ಮಾವತಿಯನ್ನು ಲಗ್ನ ಮಾಡಿಕೊಂಡ ಕಲ್ಯಾಣಮೂರ್ತಿ !.

**ಆಕಾಶರಾಜ ಅನೇಕ ಹರುಷದಿ ಮಾಡೆ**=ತನ್ನ ಭಾಗ್ಯ ವಿಶೇಷವನ್ನು ಸ್ಮರಿಸುತ್ತಾ ಆಕಾಶನೃಪತಿಯು ಹರುಷೋಲ್ಲಾಸಗಳಿಂದ ವೈಭವಯುತವಾಗಿ ಸಕಲ ಮಂಗಳ ವಾದ್ಯಗಳೊಡನೆ ಸಾಲಂಕೃತ ಕನ್ಯಾ ದಾನವನ್ನು ಮಾಡಿದನು, **ರತ್ನ ಮಾಣಿಕ್ಯದ ಕಿರೀಟವನ್ನು**=ರತ್ನ ಖಚಿತವಾದ ಭಂಗಾರದ ಕಿರೀಟವನ್ನು ವಿವಾಹದ ಶುಭ ಸಂದರ್ಭದಲ್ಲಿ ಜಾಮಾತನಾದ ಜಾಯಾ ರಮಣನಿಗೆ ಕೊಟ್ಟನು ಆಕಾಶನೃಪತಿ ಇಂತಹ ಭೋಗ ಭಾಗ್ಯಗಳಿದ್ದರೂ ಒಡವರನ್ನು ಕಾಡಿ ಬೇಡುವುದು ನಿನಗೆ ಉಚಿತವೇ ? ಎಂದು ಕೀರ್ತನ ಕರ್ತೃಗಳು ನಿಷ್ಕಿಂಚನರೊಡನನಾದ ನಿರಂಜನನನ್ನು ಪ್ರಶ್ನಿಸುತ್ತಾರೆ.

**ಹೇಮ ಗೋಪುರದಿ**=ಭಂಗಾರದಿಂದ ಶೋಭಾಯಮಾನವಾಗಿರುವ ಗೋಪುರದಲ್ಲಿ, **ವಿಮಾನ ಶ್ರೀನಿವಾಸ ದೇವರನು**=ವಿರಾಜ ಮಾನನಾಗಿರುವ ಕಾಂಚನ ಶ್ರೀನಿವಾಸನನ್ನು ದರ್ಶನಮಾಡಿ (ಪ್ರಾರಂಭದಲ್ಲಿ ವಿಮಾನ ಶ್ರೀನಿವಾಸನ ದರ್ಶನ ನಂತರ ಮೂಲ ದೇವರ ದರ್ಶನ–ಕ್ರಮ ಹೀಗೆ), **ನಮಿಸಿ ಕಾಮಿಸಿ ಕಂಡೆ**=ವಿಮಾನ ಶ್ರೀನಿವಾಸನಿಗೆ ನಮಸ್ಕರಿಸಿ, ಅವನಲ್ಲಿ ಭಕ್ತ ಭಾವವನ್ನು ಇಟ್ಟು, ಅವನ ದರ್ಶನ ಭಾಗ್ಯ ಪಡೆದು.

**ಹೊನ್ನೊಸ್ತಿಲು** - ಚಿನ್ನದ ಹೊಸ್ತಿಲು-ದಾಟಿ, **ಗರುಡ ಗಂಭದ ಸುತ್ತ**=ದೇವರ ಗರ್ಭಗುಡಿಯ ಮುಂಭಾಗದಲ್ಲಿರುವ ಉನ್ನತವಾದ ಗರುಡ ಗಂಭವನ್ನು ಸುತ್ತಿ, ಪ್ರದಕ್ಷಿಣೆಗೈದು, **ಪ್ರಕಾರವೂ**= ದೇವಸ್ಥಾನದ ಸುತ್ತಲೂ ಇರುವ ಪ್ರಾಕಾರದಲ್ಲಿ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ, **ಸ್ವಾಮಿ ಪುಷ್ಕರಣಿಯಲಿ ಸ್ನಾನ ಪಾನವ ಮಾಡಿ**=ಸ್ವಾಮಿ ಪುಷ್ಕರಣೀ ತೀರ್ಥವು ಶ್ರೀನಿವಾಸನ ಪಾದೋದ್ಭವೆಯಾದ ವಿರಜಾನದಿಯ (ಪರಮ ಪವಿತ್ರ ತೀರ್ಥ. ಅದರ ಸ್ನಾನದಿಂದ ವಿರಜಾನದಿ ಸ್ನಾನದ ಫಲವೆಂದು ತಾತ್ಪರ್ಯ).

ಸ್ವಾಮಿ ಪುಷ್ಕರಣಿಯಲ್ಲಿ ಸ್ನಾನವನ್ನು ಮಾಡಿ, ಶುಚಿರ್ಭೂತರಾಗಿ ತೀರ್ಥ ಪ್ರಾಶನವನ್ನು ಮಾಡಿ, **ನೋಡಿದೆನು ನಿನ್ನ ಭಕುತರ ದೇವ**= ನಿನ್ನ ಭಕ್ತರ ಸಮೂಹವನ್ನು ದರ್ಶನಮಾಡಿ ಅವರಲ್ಲಿ ಅಂತಸ್ಥಿತನಾದ ಭಗ ವದ್ರೂಪಗಳಿಗೆ ಮನಸಾ ವಂದಿಸಿ, ಧನ್ಯನಾದೆ.

**ಪನ್ನಗಾದ್ರಿ ವೆಂಕಟನ್ನ** ಶೇಷಾದ್ರಿ ನಿವಾಸನಾದ ಶ್ರೀ ವೆಂಕಟೇಶ ನನ್ನು (ಪನ್ನಗ + ಅದ್ರಿ = ಪನ್ನಗಾದ್ರಿ. ಪನ್ನಗ = ಶೇಷದೇವರು. ಪನ್ನ ಗಾದ್ರಿ–ಶೇಷಾಚಲ) (ವೇ-ಪಾಪಗಳನ್ನು ಕಟ-ಕಟಯತೀತಿ–ಕಡಿದು ಹಾಕು ಪವನು ಅಂದರೆ ಸಜ್ಜನರ ಸಕಲ ಪಾಪಪರಿಹಾರಕನು ಶ್ರೀ ವೆಂಕಟೇಶನು).

**ರಥಶೃಂಗಾರ**=ಅವನು ಏರುವ ಬ್ರಹ್ಮ ರಥದ ಶೃಂಗಾರ ವೈಭವ ವನ್ನು ನನ್ನಿಂದ ವರ್ಣಿಸಲು ಸಾಧ್ಯವೇ ? ವರ್ಣನಾತೀತವು ಆ ದಿವ್ಯ ರಥಾಲಂಕಾರ !, **ಕಣ್ಣಾರೆ ಕಂಡೆ ಗರುಡೋತ್ಸವದ ಅಲಂಕಾರ**= ಗರುಡ ವಾಹನನಾಗಿ ಮೆರೆದು ಬರುತ್ತಿರುವ ಗಗನನೃಪನ ಅಳಿಯನನ್ನು ಕಣ್ತುಂಬಾ ಕಂಡು ಧನ್ಯನಾದೆ, **ಇನ್ನೆಲ್ಲು ಕಾಣೆ ಜಗದಿ** - ಈ ವೈಭವೋ ತ್ಸವವನ್ನು ಜಗತ್ತಿನಲ್ಲಿ ಮತ್ತೆಲ್ಲಿಯೂ ಕಾಣೆ ಇದು ಭೂವೈಕುಂಠವಾದ್ದ ರಿಂದ, ಇಲ್ಲಿನ ವೈಭವ ವಿಲಾಸಗಳು ಅನುಪಮ ಮತ್ತು ಪರಮಾದ್ಭುತ.

**ಪಾದದಲ್ಲಿ ಒಪ್ಪೋ**=ನಿನ್ನ ಚರಣಾರವಿಂದಗಳಲ್ಲಿ ಶೋಭಾಯ ಮಾನವಾಗಿರುವ, **ಪಾಡಗ**=ಕಾಲ್ಗಡಗ, **ರುಳಿ**= ಕಾಲಿನ ಸರಪಳಿ,

**ಕಿರುಗೆಜ್ಜೆ** = ಚರಣ ಸರಪಳಿಗೆ ಕಟ್ಟಿರುವ ಕಿರು ಗಂಟೆಗಳು, **ಮೇಲೆಲವೊ ಪೀತಾಂಬರ** = ನೀನು ಧರಿಸಿರುವ ಹೊಂಬಣ್ಣದ ಅಂಬರ (ಪೀತಾಂಬರ), **ನೀಲ ಮಾಣಿಕದ** = ನೀಲಮಣಿಗಳಿಂದ ಖಚಿತವಾದ, **ಉಡಿದಾರವೋ** = ಸೊಂಟದ ಸುತ್ತಲೂ ಧರಿಸಿರುವ ಉಡಿದಾರ, **ವೈಜಯಂತೀ ಮಾಲೆ** = **ಕೊರಳಿನಲ್ಲಿ** ಧರಿಸಿರುವ ವೈಜಯಂತೀ ಸರ (**ಶ್ರೀ** ಲಕ್ಷ್ಮೀ ಸನ್ನಿಧಾನಯುಕ್ತವಾದದ್ದು).

**ಶ್ರೀ ವತ್ಸದ ಹಾರ** = ಶ್ರೀ ಹರಿಯ ಎಡ ಎದೆಯ **ಮೇಲಿರುವ** ವರ್ತುಳಾಕಾರವಾದ ರೋಮ ರಾಶಿ–ಶ್ರೀ ಲಕ್ಷ್ಮೀದೇವಿಯ ನಿವಾಸಸ್ಥಾನ, **ಮೇಲಾದ ಸರಿಗೆ** = ಧರಿಸಿರುವ ಕಂಠಾಭರಣ (ಕೌಸ್ತುಭ ಮಣಿ-ಬ್ರಹ್ಮ ದೇವರು ಕೌಸ್ತುಭದ ರೂಪದಲ್ಲಿ ಶ್ರೀ ಹರಿಯನ್ನು ಸದಾ ಸೇವಿಸುತ್ತಿರು ವರು), **ಸರಪದಕವೋ** = ಧರಿಸಿರುವ ನಾನಾ ಆಕಾರಯುಕ್ತ ಸರಗಳ ಮಾಲೆ ಮತ್ತು ಸರಗಳ ಕೆಳಗೆ ಝಡಿವ ಪದಕಗಳು, **ಕಮಲದಳಾಯಿತಾಕ್ಷನೆ** = ಕಮಲಪುಷ್ಪದ ದಳಗಳಂತೆ ವಿಶಾಲವಾದ ನೇತ್ರವುಳ್ಳವನು, **ನೋಡಿದೆ ದೇವಾ** = ಅಂತಹ ಸರ್ವಾಭರಣ ಭೂಷಿತನೂ ಸರ್ವಾಲಂಕೃತನೂ ಆದ ಭುವನ ಮೋಹನ ಮೂರ್ತಿಯನ್ನು ನೋಡಿ ಧನ್ಯನಾದೆ.

**ಕರಗಳಲ್ಲಿಟ್ಟು** = ಹಸ್ತದ್ವಯಗಳಲ್ಲಿ ಧರಿಸಿರುವ, **ಕಂಕಣ** = ರಕ್ಷಾ ಸೂತ್ರ, **ಕಡಗ** = ಬಳೆ, **ಭುಜ ಕೀರ್ತಿ** = ಭುಜಕ್ಕೆ ಅಲಂಕರಿಸುವ ಪಟ್ಟಿ, **ವರ ಶಂಖ ಚಕ್ರಧಾರಿ** = ಅತ್ಯಂತ ಶ್ರೇಷ್ಠವಾದ ಶಂಖ ಮತ್ತು ಚಕ್ರಾ ಯುಧಗಳನ್ನು ಧರಿಸಿರುವ, **ಗಿರಿಯೆ** = ಈ ಶೇಷ ಪರ್ವತವೇ, **ಭೂ ವೈಕುಂಠವೆಂದು** = ಭೂಲೋಕದ ವೈಕುಂಠ ಸದೃಶವಾದದ್ದು, **ತೋರುತ ನಿಂತ** = ಲೋಕಕ್ಕೆ ತೋರಿಸಲು ಈ ವರ ಗಿರಿಯಲ್ಲಿ ಬಂದು ನೆಲೆಸಿದ್ದಾನೆ.

**ಶಿರದಿ ಕಿರೀಟವ ಧರಿಸಿ** = ಆಕಾಶನೃಪನು ವಿವಾಹ ಸಂದರ್ಭದಲ್ಲಿ ನೀಡಿದ ದಿವ್ಯ ಕಿರೀಟವನ್ನು ತಲೆಯಲ್ಲಿ ಧರಿಸಿರುವ ಜಗನ್ಮೋಹನನು, **ಬಿಳಿಯ ತ್ರಿನಾಮ** = ಲಲಾಟದಲ್ಲಿ ಧರಿಸಿರುವ ಪುಂಡ್ರಗಳಿಂದ ಸುಶೋಭಿತ ನಾದ, **ಭೀಮೇಶ ಕೃಷ್ಣನ ಮುಖದಿ** = ಭಾರತೀಶರಿಗೆ ನಿಯಾಮಕನಾದ ಕೃಷ್ಣಾತ್ಮಕ ಶ್ರೀ ಹರಿಯ ವದನಾರವಿಂದದಲ್ಲಿ, **ಹೊಳೆವ ಮೂರುತಿಯ** = ದಿವ್ಯವಾಗಿ ಪರಿಶೋಭಿಸುತ್ತಿರುವ ಭವ್ಯ ಮಂಗಳ ಮೂರ್ತಿಯನ್ನು ಸಂದರ್ಶಿಸಿ ಧನ್ಯನಾದೆ.

॥ ಶ್ರೀ ಲಕ್ಷ್ಮೀಪತ್ಯರ್ಪಣಮಸ್ತು ॥

# ತಪ್ಪೋಲೆ

| ಕ್ರಮ ಸಂಖ್ಯೆ | ಪುಟ ಸಂಖ್ಯೆ | ಸಾಲು | ತಪ್ಪು | ಒಪ್ಪು |
|---|---|---|---|---|
| 1 | 1 | 3 | ಭವತ್ | ಭವಂ |
| 2 | 2 | 9 | ಮದಗಜನಗವು | ಮದಗಜಗವು |
| 3 | | 9 | ತಕನ | ತಕ |
| 4 | | 12 | ಯುಗವನು | ಯುಗ್ಮವನು |
| 5 | 3 | 3 | ಜನರ್ಾದನನು | ಜನಾರ್ದನನು |
| 6 | | 4 | ಅಗು | ಅಗ್ರ |
| 7 | | 7 | ಶ್ರೀಕೃಷ್ಣನ | ಶ್ರೀಕೃಷ್ಣನು |
| 8 | | 16 | ವೈತ್ಯನಾದ | ದೈತ್ಯನಾದ |
| 9 | | 20 | ಅರ್ಜುನನ್ನು | ಅರ್ಜುನನನ್ನು |
| 10 | | 21 | ಚಕ್ರದನ್ನು | ಚಕ್ರವನ್ನು |
| 11 | 4 | 3 | ಮಧುರಾಂತಕನ | ಮಧುರಾಂತಕ |
| 12 | 5 | 10 | ವಶ್ಚಾತ್ತಾಪದಿಂದ | ಪಶ್ಚಾತ್ತಾಪದಿಂದ |
| 13 | | 16 | ಬೇಡು ಬಂದಿದ್ರೆ | ಬೋರು ಬಂದಿದ್ರೆ |
| 14 | | 18 | ವಂಡರಾಪುರದ | ಪಂಡರಾಪುರದ |
| 15 | 7 | 5 | ಮಾರುತಿ | ಮೂರುತಿ |
| 16 | | 21 | ಗುರುಗೋಪ | ಗುರುಗೋವ |
| 17 | 9 | 25 | ಗುರುಗೋಪ | ಗುರುಗೋವ |
| 18 | 10 | 1 | ಸುತಸಾರಧಿ | ಸುತಸಾರಥಿ |
| 19 | | 6 | ವಾದ | ರಾದ |
| 20 | | 12 | ಸ್ವಯುವ್ಯಕ್ತ | ಸ್ವಯಂವ್ಯಕ್ತ |
| 21 | | 15 | ಭಕ್ಯರಾಭೀಷ್ಟ | ಭಕ್ತರಾಭೀಷ್ಟ |
| 22 | 12 | 18 | ಪಂಢರಿಕಪುರಿ | ಪಂಢರೀಪುರಿ |

| | | | | |
|---|---|---|---|---|
| 23 | 13 | 1 | ಮತ್ತಿಪನೆ | ಮತ್ತಿವನೆ |
| 24 | 15 | 19 | ಮನೆಮನ | ಮನೆಮನೆ |
| 25 | 17 | 20 | ವಿವಜೀವತನ | ವಿವರ್ಜಿತನ |
| 26 | 18 | 13 | ದಿದ್ದರೆ | ದ್ದರೆ |
| 27 | 20 | 16 | ಶರಣ | ಶರಣು |
| 28 | 21 | 15 | ಮಾನಸನ್ನ | ಮಾನುಷಾನ್ನ |
| 29 | | 15 | ನನ್ನುನ್ನು | ನನ್ನನ್ನು |
| 30 | | 16 | ಮಾನಗುಣಾಂಬುಧಿ | ಮಾನಸಗುಣಾಂಬುಧಿ |
| 31 | 22 | 3 | ಪಂಡರಿಪುರರಾಯಾ | ಫಂಡರಪುರಿರಾಯಾ |
| 32 | 23 | 21 | ವರ್ಜೀರ್ತದುಕೂಲಾ | ವರ್ಜೀತದುಕೂಲಾ |
| 33 | 25 | 6 | ಸುಗಾತ್ರ | ಸುಗಾತ್ರಾ |
| 34 | | 16 | ವನರುಹಭುವ | ವನರುಹಭವ |
| 35 | 27 | 3 | ಪಂಢರಿಪುರರಾಯ | ಫಂಢರಾಪುರಿರಾಯ |
| 36 | | 18 | ಶರೀರಪುಳ್ಳವನು | ಶರೀರವುಳ್ಳವನು |
| 37 | | 16 | ನೂತವ | ನೂತನ |
| 38 | | | ಕೂಡುತ್ತಿನುವ | ಕೂಡುತ್ತಿರುವ |
| 39 | 28 | 4 | ಸಮುರ್ಪ್ರ | ಸಮುದ್ರ |
| 40 | 29 | 2 | ಕಾವಲಸಂಭವರಾದ | ಕಮಲಸಂಭವರಾದ |
| 41 | | 8 | ಭಯಪರಿಹಾರತನು | ಭಯಪರಿಹಾರಕನು |
| 42 | | 11 | ದಿನವ | ದಿನಪ |
| 43 | | 16 | ವನೌಕನಾಥ | ವನೌಕಸನಾಥ |
| 44 | | 17 | ಜಿತಾಸುರಯಾಥ | ಜಿತಾಸುರಯೂಥ |
| 45 | | 18 | ಅನುರ + ಯಾಥ | ಅಸುರ + ಯೂಥ |
| 46 | | 20 | ವಾಕಾಯದಿ | ವಾಕ್ಕಾಯದಿ |
| 47 | 30 | 9 | ತಿದಿಸುರ | ದಿತಿಸುರ |
| 48 | 31 | 6 | ಅಹಿತರನುಳಿಹಿನು | ಅಹಿತರನಳುಹಿದಾ |
| 49 | | 7 | ಪ್ರೇರಿಕ್ಷಿತರಾಗಿ | ಪ್ರೇರಿತರಾಗಿ |

| | | | | |
|---|---|---|---|---|
| 50 | | 10 | ಸರ್ಪಾಸ್ಪ | ಸರ್ಪಾಸ್ತ್ರ |
| 51 | | | ರವಿನಂದನಾಬಿಡ | ರವಿನಂದನಾಬಿಡೆ |
| 52 | | 16 | ಸತ್ತ್ವಪ್ರಚುರದಹಿಗಳಾದ | ಸತ್ತ್ವಪ್ರಚುರದೇಹಿಗಳಾದ |
| 53 | | 20 | ನಕ್ರಕನನ್ನು | ನಕ್ರನನ್ನು |
| 54 | | 21 | ಜಾತಯುಗ | ಜಾತಯುಗ್ಮ |
| 55 | | 24 | ವುತ್ರ | ಪುತ್ರ |
| 56 | 32 | 2 | ದೂತನು | ದೂರನು |
| 57 | | 15 | ಘೂಳಿಗಳ ಗದ್ದ | ಘೂಳಿಗಳ ಗೆದ್ದ |
| 58 | | 19 | ಸ್ವಯುವರವನ್ನು | ಸ್ವಯಂವರವನ್ನು |
| 59 | | 24 | ಶ್ವರೂಪ | ಶಶ್ವರೂಪ |
| 60 | | 25 | ಕೀಳುವಮಾನವ | ಕೀಳುವಮಾನವ |
| 61 | 33 | 8 | ಗುಣಗುಣಾ | ಗುಣಾಗುಣ |
| 62 | 34 | 4 | ಪತ್ಸಾಸುರ | ವತ್ಸಾಸುರ |
| 63 | | 8 | ಪಾದಾಬ್ದ | ಪಾದಾಬ್ಜ |
| 64 | | 9 | ಕ ಬ್ಜಯ | ಕುಬ್ಜೆಯ |
| 65 | | 23 | ಯಿಲ್ಲದ ದೇವತೆಗಳು | ಹಾಕದ ದೇವತೆಗಳು |
| 66 | 35 | 13 | ಈ ಕೇಳು | ಈರೇಳು |
| 67 | | 14 | ಭೀದಿ | ಭೇದಿ |
| 68 | | 15 | ಪ್ರಣನತರ | ಪ್ರಣತರ |
| 69 | 37 | 8 | | ಬ್ರಹ್ಮಾಂಡದಲ್ಲಿ |
| 70 | | | ಈರೇ | ಈರೇಳು |
| 71 | | 17 | ಹೆದರಿದನಂತೆ | ಹೆದರಿದವನಂತೆ |
| 72 | | 23 | ಆಗಣಿತವೋದ | ಅಗಣಿತಮೋದ |
| 73 | 38 | 18 | ಮನಮಾನ ಪೀತನ | ಪವಮಾನ ಪಿತನ |
| 74 | 39 | 5 | ಕೆಂಟುಟಿಯಾ | ಕೆಂದುಟಿಯಾ |
| 75 | | 6 | ನಾಲಿಂಗದೊಳ್ | ನಾಲಿಂಗದೊಳ್ |
| 76 | | 7 | ಕವ್ಯಡಿ | ಕನ್ನಡಿ |

| | | | | |
|---|---|---|---|---|
| 77 | | 8 | ಉದತೇ | ಉದಕೇ |
| 78 | | 11 | ಅಳಿಬಾಲ | ಅಳಿಜಾಲ |
| 79 | | 14 | ಶತಕಂನ | ಶತಕಂಸ |
| 80 | 40 | 11 | ಬೆಳಗುತ್ತಿರುದ | ಬೆಳಗುತ್ತಿರುವ |
| 81 | | 16 | ಅಜ್ಜ | ಅಬ್ಜ |
| 82 | | 24 | ಕಫರ | ಶಫರ |
| 83 | 41 | 4 | ಪೀತಾಂಬರಹನ್ನ | ಪೀತಾಂಬರವನ್ನು |
| 84 | | 22 | ಪಡುಮಾರುಣ | ಪದುಮಾರುಣ |
| 85 | 42 | 2 | ಬಿಡುರಾಭ | ಬಿದುರಾಭ |
| 86 | | 4 | ತುಡಿ | ತುದಿ |
| 87 | | 9 | ಜಾಯಿತನೇತ್ರ | ಜಾಯತನೇತ್ರ |
| 88 | | 12 | ಬೆಳಿಸುವನ | ಬೆಳಗುವನ |
| 89 | | 20 | ದೈತ್ಯಕ | ದೈತ್ಯರ |
| 90 | 45 | 1 | ದಿಟ್ಟ ಕಲ್ಕಾವತಾರ | ದಿಟ್ಟ ಕಲ್ಕ್ಯವತಾರ |
| 91 | 47 | 1 | ಸೊಂಟರ | ಸೊಂಟದ |
| 92 | 48 | 6 | ವಜ್ರಾಂಕುರ | ವಜ್ರಾಂಕುಶ |
| 93 | | 10 | ಗಾರಿಗಮನಾ | ನಾಗಾರಿಗಮನಾ |
| 94 | | 11 | ನಿನ್ನ ಬೆಟ್ಟು | ನಿನ್ನ ಬಿಟ್ಟು |
| 95 | 52 | 9 | ಮಹೊದಯು | ಮಹೋದಯು |
| 96 | | 10 | ವ್ಯಸ್ತಪ್ಯ | ವ್ಯಸ್ತವ್ಯ |
| 97 | 55 | 14 | ಮರಗಳ | ಮಂಗಳ |
| 98 | 56 | 9 | ಆತ್ಮ– | ಆತ್ಮಕ |
| 99 | 57 | 20 | ಮುನಿಶ್ರೇಠ್ಠನಿಗೆ | ಮುನಿಶ್ರೇಷ್ಠನಿಗೆ |
| 100 | | 21 | ಸುತ್ತು | ಸುತ್ತಿ |
| 101 | 58 | 3 | ಚೇತನಾ ಚೇತನ ಗಳಿಗೆ ಪ್ರಭುರ | ಚೇತನಾಽ ಚೇತನಗಳಿಗೆ ಪ್ರಭು |

| | | | | |
|---|---|---|---|---|
| 102 | | 12 | ಗಟ್ಟಿ | ಗಚ್ಚು |
| 103 | | 19 | ದೊಡ್ಡವರಿ | ದೊದ್ದವರಿ |
| 104 | 59 | 1 | ಗಂಡಕಳಕಗಿದ್ದು | ಗಂಡಾಳಾಗಿದ್ದು |
| 105 | | 20 | ಇನ್ನವರಲಿ | ನಿನ್ನವರಲಿ |
| 106 | 60 | 2 | ಇನ್ನೇಲ್ಲಗೆ | ಇನ್ನೆಲ್ಲಿಗೆ |
| 107 | | 12 | ಮಚಾದ್ಯವತಾರದಿ | ಮಚ್ಚ್ಯಾದ್ಯವತಾರದಿ |
| 108 | | 13 | ಇಚ್ಛೈಸಲಿಲ್ಲವೇ | ಇಚ್ಛೈಸಲಿಸಲಿಲ್ಲವೇ |
| 109 | | 14 | ಭಕ್ತತ | ಭಕ್ತರ |
| 110 | 61 | 9 | ಆ ಕಾಲದಲ್ಲಿ | ಒಂದು ಕಾಲದಲ್ಲಿ |
| 111 | 63 | 18 | ಹೆದ್ದ್ವೇಶವಾಸ | ಹೃದ್ದೇಶವಾಸ |
| 112 | 64 | 7 | ಖಂಡುಣಿ | ಬಂಡುಣಿ |
| 113 | | 12 | ರತುಮಾವಲ್ಲಭ | ರಕುಮಾವಲ್ಲಭ |
| 114 | 65 | 5 | ಸುಂದರಕ | ಸುಂದರಕೆ |
| 115 | | 6 | ಕಾಮಾದಿಪು | ಕಾಮಾದಿರಿಪು |
| 116 | | 15 | ಭಗವದ್ರೋಪ | ಭಗವದ್ರೂಪ |
| 117 | 66 | 7 | ಗರುವ | ಗರುಡ |
| 118 | | 11 | ಅನ್ಮದ್ಬಿಂಬನೇ | ಅಸ್ಮದ್ಬಿಂಬನೇ |
| 119 | | 18 | ಬಿನ್ನವ | ಬಿನ್ನಪ |
| 120 | 67 | 10 | ಮೆರವೇ | ಮೆರೆವೇ |
| 121 | | 17 | ಸುಗುತ | ಸುಗತ |
| 122 | 69 | 7 | ಉಪಯ | ಉಪಮ |
| 123 | | 15 | ಮೆರವೇ | ಮೆರೆವೇ |
| 124 | 70 | 8 | ಹರಡಿದ | ಹರಡಿದೆ |
| 125 | | 15 | ಸತ್ಕಲ್ಕ | ಸತ್ಕಲ್ಕಿ |
| 126 | | 20 | ವಿಠ್ಟಲ | ವಿಠ್ಠಲ |
| 127 | 71 | 9 | ಸ್ವಧರ್ಮನೀಪಿ | ಸ್ವಧರ್ಮನೀಪಿತ |
| 128 | 72 | 4 | ಮುಖರೀತೀಕವಾಸ | ಮುಖರೀತೀರವಾಸ |

| | | | | |
|---|---|---|---|---|
| 129 | | 9 | ಪುರಂದರದಾಸ | ಉರಗಾದ್ರಿವಾಸವಿಠಲದಾಸ |
| 130 | | 10 | ಆರಾಧನೇ | ಆರಾಧಿತನೇ ! |
| 131 | 73 | 15 | ಸನ್ಮಾತದ | ಸನ್ಮಾನದ |
| 132 | 74 | 7 | ಯಕೆ ಹಲಿಸುತ | ಯಕ್ಕೆ ಹರಿಸುತ |
| 133 | 75 | 1 | ಸೊಮ್ಮೋಹಿಸುತಲೀ | ಸಮ್ಮೋಹಿಸುತಲೀ |
| 134 | | 5 | ಭತುರ್ಮುಖ | ಭವುರ್ಮುಖ |
| 135 | | 6 | ಠೀ ತೀರವಾಸ | ರೀ ತೀರರವಾಸ |
| 136 | | 6 | ಸ್ವರ್ಣಮುತಿ ನದಿಯು | ಸ್ವರ್ಣಮುಖೀ ನದಿಯು |
| 137 | | 16 | ಜೋಲ್ಪ | ಜೋಲ್ವ |
| 138 | | | ಕಾಂಚನಕಂಠ | ಕಾಂಚನ ಕಟಕ |
| 139 | | 21 | ಲಕ್ಷಸದೇನ್ನವಗುಣ | ಲಕ್ಷಿಸದೆನ್ನವಗುಣ |
| 140 | 76 | 3 | ಭಿಜಿಸಿ ಭವಕಷ್ಟವಹಂಪ | ಭಜಿಸೆಭವಕಷ್ಟಹರಿಪ |
| 141 | 77 | 14 | ಇತರರಿಗೆ ರಮಣನು | ರಮಣನು |
| 142 | | 20 | ಜಂಝಿ | ಜಂಝೆ |
| 143 | | 21 | ನೀಟಹ | ನೀಟಿಹ |
| 144 | 79 | 12 | ಮೆಟ್ಟ | ಮೆಟ್ಟಿ |
| 145 | 81 | 6 | ಕಮಲಸರ್ಸುವ | ಕಮಲಸೂಸುವ |
| 146 | | 11 | ಮಮ–ಪರ | ಮರ್ಮ–ಪರ |
| 147 | 82 | 12 | ಸಾಂಗಾಯಣಾಮ | ಸ್ವಾಂಗಾಯನಾಮ |
| 148 | 84 | 18 | ಬುಧನ | ಬಂಧನ |
| 149 | 85 | 9 | ದಾಸರಿಂದದಿ | ದಾಸರಂದದಿ |
| 150 | | 15 | ಅಂದಿನ ಶಾಲು | ಅಂಚಿನ ಶಾಲು |
| 151 | 87 | 10 | ಸಾರ್ಷಿ | ಸಾರ್ಷ್ಟಿ |
| 152 | 89 | 4 | ಕೃತ್ತಿನಾಸಾದ್ಯರಿಂದ | ಕೃತ್ತಿವಾಸಾದ್ಯರಿಂದ |

| | | | | |
|---|---|---|---|---|
| 153 | 90 | 4 | ಕಾಕ್ಷಗ | ಕಾಕ್ಷ |
| 154 | | 6 | ಕರೆಯಿಂವ | ಕರೆಯಿಸುವ |
| 155 | 91 | 4 | ಕದಂ | ಕಂದಂ |
| 156 | 93 | 9 | ಭಾವಿಂತಾ....ವೃಂದ್ಯೆತ ॥ | ಭಾವಿತಾ–ವೃಂದ್ಯೈಃ ॥ |
| 157 | | 13 | ವಿಷುಲಿಂಗಭಸಿತಾ | ವಿಷ್ಫುಲಿಂಗಭಸಿತಾ |
| 158 | 94 | 16 | ಸ್ವಣ | ಸ್ವರ್ಣ |
| 159 | 95 | 14 | ವೆರ್ವೋತ್ತಮ ಮತ್ವಕ್ಕೆ | ಸರ್ವೋತ್ತಮತ್ವಕ್ಕೆ |
| 160 | | 21 | ಸಕಲಚರಾಚರಾತ್ಮಕವಾದ | ಚರಾಚರಾತ್ಮಕವಾದ |
| 161 | 101 | 7 | ಮಾರುತ ಲೇಸಾದ ತೀರ್ಥ- | ಲೇಸಾದ ಮಾರುತಪಾದ ತೀರ್ಥ |
| 162 | | 19 | ರೌದ್ರಾದಿ | ರೌದ್ರದಿ |
| 163 | 109 | 3 | ದಿಗ್ದನೆ | ದಿಗ್ದಸೆ |
| 164 | 110 | 16 | ರಳನ್ನು | ಕರಳನ್ನು |
| 165 | 113 | 9 | ನೆನೆದು | ನೆಗೆದು |
| 166 | | 10 | ನಾಡಿಗನೆ | ನಾದಿಗನೆ |
| 167 | | 12 | ಮಗ | ಮಿಗೆ |
| 168 | | 14 | ಕೃತಿ | ಕೃತ |
| 169 | 114 | 3 | ಪಟುತ್ಕಾಟದಿ | ಪಟುತ್ಕಟದಿ |
| 170 | | 16 | ತೆಗೆಯ | ತೆಗೆಯೆ |
| 171 | | 22 | ಘುಡು | ಘುಡಿ |
| 172 | 115 | 2 | ಮೇಲೀರಿಸಿ | ಮೇಲಿರಿಸಿ |
| 173 | | 3 | ತರಣಿ ನೋಡಿ | ತರಣಿಯ ನೋಡಿ |
| 175 | | 5 | ನಿಡುಗರಳನು | ನಿಡುಗರುಳನು |
| 176 | | 16 | ಕ್ಲೇಶಭಂಜನೆ | ಕ್ಲೇಶಭಂಜನ |
| 177 | 117 | 7 | ಉರುಭವ | ಉದುಭವ |
| 178 | | 25 | ಅನಾದಿಗನ | ಅನಾದಿಗನೆ |
| 179 | | 19 | ವೈಷವರಾದ್ದರಿಂದ | ವೈಷ್ಣವರಾದ್ದರಿಂದ |

| | | | | |
|---|---|---|---|---|
| 180 | 118 | 21 | ಖರ್ಪದ | ಖರ್ಪರ |
| 181 | | 25 | ಮುಡಿ | ಮೂಡಿ |
| 182 | 119 | 12 | ಕೆಂಜಾಲ್ವೆಯು | ಕೆಂಜ್ವಾಲೆಯು |
| 183 | | 15 | ಸಮಿವುಕ್ಕಿ | ಸಮವುಕ್ಕಿ |
| 184 | 120 | 14 | ಭಕ್ತರಜನರ | ಭಕ್ತಜನರ |
| 185 | | 23 | ನಗಾದಿಗಳ | ನಗಾರಿಗಳ |
| 186 | 122 | 3 | (ಮುಮ | (ಬಹ್ಮ |
| 187 | | 4 | ತುಂದೆಯಿಂದ | ತುಂದಿಯಿಂದ |
| 188 | | 6 | ಜ್ಞಾನಿಗಳನ್ನು | ಜ್ಞಾನಿಗಳು |
| 189 | | 15 | ತಮ್ಮನನ್ನೇ | ತಮ್ಮನ್ನೇ |
| 190 | | 23 | ಮುನೋಪಹಾರನೇ | ಮನೋಹಾರಕನೇ |
| 191 | 124 | 8 | ಪರಿಹಾರ | ಪರಿಹಾರಕ |
| 192 | | 16 | ಹೃತ್ಕ್ಕಮಲ | ಹೃತ್ಕಮಲ |
| 193 | 125 | 10 | ನುಪಮೆಣಾಣೆ | ನುಪಮೆಗಾಣೆ |
| 194 | 126 | 5 | ನಿನಗಣೆ | ನಿನಗೆಣೆ |
| 195 | | 12 | ವಿದ್ಯಮುನನಾದ | ವಿದ್ಯಮಾನನಾದ |
| 196 | 127 | 7 | ಕಫರ ಕೇತು | ಶಫರ ಕೇತು |
| 197 | 130 | 8 | ಮೈನಕಾಪುತ್ರಿಯಾದ | ಮೈನಾಕಪುತ್ರಿಯಾದ |
| 198 | | 12 | ತದ್ವಿರಾ | ತದ್ವಾರಾ |
| 199 | 132 | 12 | ಮೇರಿನಿಗೆ | ಮೇದಿನಿಗೆ |
| 200 | | 13 | ಕೆನ್ನತ್ತರೋ | ಕೆನ್ನೆತ್ತರೋ |
| 201 | | 22 | ಅಗಣ್ಯ | ಅಗ್ರಗಣ್ಯ |
| 202 | 133 | 13 | ಕರಾವಂಬಲ | ಕರಾವಲಂಬ |
| 203 | | 21 | ಶ್ರೀಮದ್ಭಾವತ | ಶ್ರೀಮದ್ಭಾಗವತ |
| 204 | 134 | 1 | ಭಿಡಿಯ | ಭಿಡೆಯ |
| 205 | | 6 | ಚಿನ್ಮ | ಚಿನ್ನ |
| 206 | | 12 | ಸಂಜಯು ಕಾಲವನ್ನು | ಸಂಜೆಯು ಕಾಲವನ್ನು |

| | | | | |
|---|---|---|---|---|
| 207 | | 16 | ಕನ್ನತ್ತರೋ | ಕೆನ್ನೆತ್ತರೋ |
| 208 | | 18 | ಕೆನ್ನೆವರು | ಕೆನ್ನೆತ್ತರು |
| 209 | 136 | 1 | ಅನಾದ್ಯಂತ | ಅನಾದ್ಯನಂತ |
| 210 | | 3 | ತದ್ವಿರಾ | ತದ್ವಾರಾ |
| 211 | | 7 | ಆಲದಡಿಯ | ಆಲದೆಲೆಯ |
| 212 | 137 | 13 | ತಂದು | ತರಿದು |
| 213 | 138 | 10 | ತುಳಿದ | ತುಳಿದ |
| 214 | | 12 | ಫಲಕೆಣೆಗಾಣೆ | ಛಲಕೆಣೆಗಾಣೆ |
| 215 | | 17 | ಸುಮಲಾದಿ | ಸುಮೋದಿ |
| 216 | 139 | 14 | ವಿಧಾಯುಂ | ವಿಧಾತುಂ |
| 217 | 140 | 2 | ನಿನ್ನ | ನನ್ನ |
| 218 | | 11 | ಬಿಂದೆ | ಬಂದೆ |
| 219 | | 16 | ತಂದು | ತರಿದು |
| 220 | | 17 | ತಂದು | ತರಿದು |
| 221 | 141 | 12 | ಶಿಂಶುಮಾದನು | ಶಿಂಶುಮಾರನು |
| 222 | 142 | 16 | ಕೂಮಾರ್ವತಾರ | ಕೂರ್ಮಾವತಾರ |
| 223 | 143 | 13 | ಭಾರ್ಯೆ | ಭಾರ್ಯೆ |
| 224 | 144 | 11 | ಭಿಮಾನನಿಂದ | ಭಿಮಾನದಿಂದ |
| 225 | | 17 | ಮಂಗಳಾತ್ಮರಾದ | ಮಂಗಳಾತ್ಮಕರಾದ |
| 226 | 145 | 3 | ಸುತ ಬಿಚ್ಛರೀರವ | ನುತ ಚಿಚ್ಛರೀರಗ |
| 227 | | 5 | ವಿಟುಧಾರ್ಚಿತ | ವಿಭುದಾರ್ಚಿತ |
| 228 | | 6 | ಶಯನನ | ಶಯನ |
| 229 | | 7 | ದ್ಢಾರ ನಿನ್ನದು | ದ್ವಾರ ನಿನ್ನದು |
| 230 | | 11 | ದೋಷ ವರ್ಜಿತ | ದೋಷ ವಿವರ್ಜಿತ |
| 231 | | 19 | ಮಾತದ್ವಿಗ | ಮಾತರಿಶ್ವಗ |
| 232 | 146 | 8 | ಬಿಚ್ಛರೀಗ | ಚಿಚ್ಛರೀಶಗ |
| 233 | | 15 | ವಿಟುಧಾರ್ಬಿತ | ವಿಭುದಾರ್ಚಿತ |

| | | | | |
|---|---|---|---|---|
| 234 | | 19 | ಮುದ್ಧಾರ ನಿನ್ನದು | ಮುದ್ಭಾರ ನಿನ್ನದು |
| 235 | 147 | 20 | ಮಾತದಿಶ್ವಗ | ಮಾತರಿಶ್ವಗ |
| 236 | 148 | 12 | ಗದ | ಗರ |
| 237 | | 19 | ದಾಸರೆಗಾಗಿ | ದಾಸರಿಗಾಗಿ |
| 238 | | 20 | ಜಗನ್ನಾಥವಿಠ್ಠಲರೀಯೆ | ಜಗನ್ನಾಥವಿಠ್ಠಲರೇಯು |
| 239 | 149 | 4 | ಸುಜನಾಂಬಂಧಿ | ಸುಜನಾಂಬುಧಿ |
| 240 | | 6 | ಸರಿಸುವುದೇ | ಸಲಿಸುವುದೇ |
| 241 | | 8 | ನಿಂದಲಿ ಶೀಘ್ರನಾಗೀ | ನಿಂದತಿ ಶೀಘ್ರವಾಗೀ |
| 242 | | 17 | ಕ್ಷಿತಿಜನಾಬಯುದಿ | ಕ್ಷಿತಿಜನಾಲಯುದಿ |
| 243 | 150 | 1 | ಕೊಲಿಸಿ | ಒಲಿಸಿ |
| 244 | | 5 | ಪ್ರತನಾಮ | ವ್ರತನಾಮ |
| 245 | | 10 | ನೀನೆ | ನಿನ |
| 246 | | 17 | ಯಾನವೆಂಬುದು | ಯಾಸವೆಂಬುದು |
| 247 | | 20 | ಮಹ | ಮಹಾ |
| 248 | | 21 | ರಾಶಾತ್ಮಜ | ರಾಶರಾತ್ಮಜ |
| 249 | | | ಬಣ್ಲಿಸಿ | ಬಣ್ಣಿಸೆ |
| 250 | 151 | 12 | ಬಗೆಯಾದೀಗೆನ್ನ | ಬಗೆಯಾದೀರೆನ್ನ |
| 251 | | 15 | ಪೂರ್ತಿಸಿಮಗೆ | ಪೂರ್ತಿಸಿಮಿಗೆ |
| 252 | | 18 | ಪಾವಿ ಪೊಗಳುವ ದಾಸನೀ | ಪಾಡಿ ಪೊಗಳುವ ದಾಸಗೀ |
| 253 | 152 | 8 | ನಲಿಸುವು | ಸಲಿಸುವು |
| 254 | 153 | 22 | ನಿನ್ನಿಂಥ | ನಿನ್ನಿಂದ |
| 255 | 154 | 14 | ಒಕ್ಕಣೆಯಲ್ಲಿ | ಒಕ್ಕಣೆಯನ್ನು |
| 256 | 156 | 2 | ಸಂಗಡ | ಸಂಗರ |
| 257 | | 6 | ಸುಸ್ಂಕೃತ | ಸುಸಂಸ್ಕೃತ |
| 258 | | 7 | ಕರ್ಮಾ | ಕರ್ಮ |
| 259 | | 9 | ಕಾಮುರ | ಕಾಮುದ |
| 260 | | 14 | ಮಹಾ | ಮಹ |

| | | | | |
|---|---|---|---|---|
| 261 | | 15 | ಕಾನರವಾಗಿ | |
| 262 | 157 | 21 | ನಿನ್ನ ಆರು | |
| 263 | | 25 | ಭಾಗವತೊತ್ತಮ | ಭಾಗವತೋತ್ತಮ |
| 264 | 158 | 1 | ಅಡಿಗೆಡಿಗೆಗೆ | ಅಡಿಗಡಿಗೆ |
| 265 | | | ದೈತ್ಯದಿಂದ | ದೈತ್ಯರಿಂದ |
| 266 | | 15 | ಗುರು | |
| 267 | 159 | 14 | ಸಂತುಪಿತ | ಸಂತುತಿಪ |
| 268 | | 17 | ಇಹರಲ್ಲೂ | ಇಹದಲ್ಲೂ |
| 269 | 160 | 5 | ಕಾಲಾಂತರ್ಗತನನ್ನ | ಕಾಲಾಂತರ್ಗತನು |
| 270 | | 12 | ಕ್ರಿಯೆಯಲ್ಲಿ | ಕ್ರಿಮಿಯಲ್ಲಿ |
| 271 | | 19 | ನಿವಾರಿಸುವ | ವಿಹರಿಸುವ |
| 272 | | 20 | ನಾನೆಂದು | ನಾನೆಂತು |
| 273 | 162 | 1 | ಅಂತಃ ಚಕ್ಷು | ಅಂತಃ ಚಕ್ಷುವಿಗೆ |
| 274 | 164 | 10 | ಮೃತ್ಯುರ್ ಮೃತ್ಯು | ಮೃತ್ಯುರ್ಮೃತ್ಯು |
| 275 | 165 | 2 | ವೃಂದಾನವಿದೆ | ವೃಂದಾವನವಿದೆ |
| 276 | | 21 | ಮೃತ್ಯುರ್ಮೃತ್ಯು | ಮೃತ್ಯುರ್ಮೃತ್ಯು |
| 277 | 169 | 11 | ಕೃತ | ಕ್ರತು |
| 278 | 175 | 1 | ಬಿನ್ನ | ಚಿನ್ನ |
| 279 | 176 | 8 | ಕೂರ್ಮಾವತವಾರೀ | ಕೂರ್ಮಾವತಾರಿ |
| 280 | 178 | 10 | ಸ್ಪೃಜಾಸ್ಪೃಜ್ಯರ | ಸ್ಪೃಜ್ಯಾಸ್ಪೃಜ್ಯರ |
| 281 | 180 | 4 | ಸುರಸುತ | ಸುರನುತ |
| 282 | | 15 | ಕುಂದದಿ | ಕುಂದದ |
| 283 | 181 | 21 | ದಮುಯ | ದಮುನ |
| 284 | 182 | 6 | ಬೊಬ್ಬೆಯ | ಬೊಜ್ಜೆಯ |
| 285 | | 18 | ಸೃಷ್ಟನಲ್ಲಿ | ಸೃಷ್ಟನಲ್ಲ |
| 286 | 188 | 1 | ಅಕರಾದಿ | ಅಕಾರಾದಿ |
| 287 | 189 | 9 | ಸೀಳಂ | ಸೀಳ್ದ |

| | | | | |
|---|---|---|---|---|
| 288 | 194 | 3 | ಕೇದಾರಗಳ | ಕೇದಾರಗೌಳ |
| 289 | 196 | 10 | ಮಾನರಿಯೆ | ನಾನರಿಯೆ |
| 290 | 200 | 6 | ಮಾಸಲ | ಮೀಸಲ |
| 291 | | 14 | ಒಡಮಾಡಿದ್ದಾಳೆ | ಒಡಮೂಡಿದ್ದಾಳೆ |
| 292 | 201 | 15 | ಕರುಣಿಸಿ | ಕರುಣಿಸಿದ |
| 293 | 220 | 18 | ಶಂಕರಾತರ್ಗತ | ಶಂಕರಾಂತರ್ಗತ |
| 294 | 222 | 9 | ಪದವಾದ | ಪರವಾದ |
| 295 | | 12 | ಸೋಲಿಸುವುದು | ಹೋಲಿಸುವುದು |
| 296 | 226 | 20 | ಧ್ವನಾಥ | ಧ್ವಾನಾಥ |
| 297 | 227 | 2 | ಪ್ರದರ್ಶನರಥಾ | ಪ್ರದರ್ಶನಕಥಾ |
| 298 | | 11 | ಮೂಲ | ಮಾಲ |
| 299 | | 22 | ಜಾಪಮಹೀದಾಸೆ | ಜಾತಮಹಿದಾಸಾಜಿ |
| 300 | 229 | 7 | ಕ್ಲೇಮ | ಕ್ಷೇಮ |
| 301 | 230 | 3 | ನಾಗರಕನ್ನಿಕೆ | ಸಾಗರಕನ್ನಿಕೆ |
| 302 | 232 | 2 | ಮಹಿಸಾಸವತಾರ | ಮಹಿದಾಸಾವತಾರ |
| 303 | | 19 | ಜ್ವರಹರಾಯ್ದನೆ | ಜರಹರಾಹ್ವಯನೆ |
| 304 | 234 | 8 | ಜ್ವರಹ | ಜ್ವರವ |
| 305 | | 9 | ಬಯವೇನು | ಭಯವೇನು |
| 306 | | 18 | ಖನ್ನ | ಬನ್ನ |
| 307 | | | ಮೋಟಿಪುದಯ್ಯ | ಮೋಚಿಪುದಯ್ಯ |
| 308 | 235 | 21 | ನಿನ್ನಿಲ್ಲ | ಇನ್ನಿಲ್ಲ |
| 309 | 236 | 11 | ಸುಷಮ್ನ | ಸುಷುಮ್ನಾ |
| 310 | | 13 | ಭೀಷಜ | ಭೇಷಜ |
| 311 | | 18 | ಯಲ್ಲ | ಯಲ್ಲಿ |
| 312 | 237 | 16 | ಸುಮನನಾರ್ಚಿ | ಸುಮನಸಾರ್ಚಿತ |
| 313 | 240 | 12 | ಸುಮನನಾರ್ಚಿತ | ಸುಮನಸಾರ್ಚಿತ |
| 314 | 250 | 19 | ಪರವಿಗೆ | ಪದವಿಗೆ |

| | | | | |
|---|---|---|---|---|
| 315 | 252 | 1 | ಏನಗೊಂದು | ಏನಗೊಂದು |
| 316 | | 20 | ಕುರುಜಾಲಗುಲಿ | ಕುರುಜಾಂಗುಲಿ |
| 317 | 257 | 12 | ದಾಪಂತಕ | ದಾನವಾಂತಕ |
| 318 | | 18 | ಕಂಕಣರೇಯೂರ | ಕಂಕಣಕೇಯೂರ |
| 319 | 261 | 18 | ಮುಕ್ತ | ಮುಕ್ತಿ |
| 320 | 262 | 10 | ಮೋಲ್ಯೆನಿಂದ | ಮೋಲ್ಗೈಯಿಂದ |
| 321 | 263 | 10 | ಅವಿವ್ಯಾದಿ | ಆಧಿವ್ಯಾಧಿ |
| 322 | | 18 | ವಾಯಉಗಳ | ವಾಯುಗಳು |
| 323 | 267 | 12 | ಗೆಲಿಗೆ | ಗೆಲಿದ |
| 324 | 268 | 6 | ವವನ | ವವನು |
| 325 | 271 | 10 | ದೈತ್ಯಾದಿ | ದೈತ್ಯಾರಿ |
| 326 | | 10 | ಈಕೌ | ಈಶೌ |
| 327 | 273 | 9 | ಉವರದಲ್ಲಿ | ಉದರದಲ್ಲಿ |
| 328 | 274 | 16 | ಸದವಾರ | ವದನಾರ |
| 329 | | 19 | ಕುಂದು | ಕುಂಕು |
| 330 | | 20 | ಮಾಂದವ | ಮಾಂಕಿತ |
| 331 | | | ರೇಖಾರಚರಣ | ರೇಖಾಚರಣ |
| 332 | 277 | 1 | ಅನಿರುದಃ | ಅನಿರುದ್ಧಃ |
| 333 | | 3 | ಕೆನಾಪಿ | ಕೇನಾಪಿ |
| 334 | 278 | 22 | ದೇವತೇ | ದೇವತಾ |
| 335 | 280 | 17 | ನಾರಗನೆನ್ನ | ನಾರಗನೆನ್ನೆ |
| 336 | 281 | 4 | ಭಾಗವತ್ತೋ | ಭಾಗವತೋ |
| 337 | 282 | 16 | ಅನಾದ್ಯಂತ | ಅನಾದ್ಯನಂತ |
| 338 | 283 | 11 | ಪರಾರ್ಥಾಂತ | ಪದಾರ್ಥಾಂತ |
| 339 | | 12 | ಮುಟ್ಟ | ಮೆಟ್ಟಿ |
| 340 | | 13 | ಪ್ರೇಷಿತನಾಗಿ | ಪ್ರೇರಿತನಾಗಿ |
| 341 | | 16 | ಕಚ್ಚಿ | ಕಿಚ್ಚು |

| | | | | |
|---|---|---|---|---|
| 342 | 284 | 2 | ಅರ್ಧ | ಅರ್ದ |
| 343 | | 11 | ಚಿಂತನೆಯುನ್ನು | ಚಿಂತನೆಯು |
| 344 | 285 | 21 | ಕಾಲಯುನನ್ನು | ಕಾಲಿಯುನನ್ನು |
| 345 | 287 | 2 | ಸ್ಮರಣೆಯುಂತೆ | ಸ್ಮರಣೆಯಿಂದ |
| 346 | 288 | 9 | ಅಂಧಮನಸ್ಸಿಗೆ | ಅಂಧತಮಸ್ಸಿಗೆ |
| 347 | 292 | 9 | ಇವರ | ಇವನು |
| 348 | 293 | 2 | ಕನಕೇ | ಕನಕಾ |
| 349 | 294 | 5 | ತ್ರಿಣಕೆ | ತಿಣಕಿ |
| 350 | 295 | 23 | ಅಪಾರ | ಆಪಾದ |
| 351 | 296 | 17 | ಮುದದ | ಮುದದಿ |
| 352 | 299 | 3 | ಪಾಸಕ | ಹಾರಕ |
| 353 | 300 | 3 | ಪದನದ | ಪತನದ |
| 354 | | 16 | ಯುವ | ಅವ |
| 355 | 302 | 4 | ಪರಿದ | ತರಿದ |
| 356 | | 7 | ದಾಸುರ | ದಸುರ |
| 357 | 303 | 17 | ವಿಮೋಕ್ಷದ | ವಿಮೋಕ್ಷರ |
| 358 | 305 | 14 | ಪಾರ್ಷದ ದರ | ಪಾರ್ಷದರ |
| 359 | 306 | 7 | ಸದೆ | ಸಿದೆ |
| 360 | 309 | 4 | ಝೂಡಿಸಿ | ಝಾಡಿಸಿ |
| 361 | | 13 | ಘೃತ | ಘೃತ |
| 362 | 310 | 2 | ದುರುವಳನ | ದುರುಳತನವ |
| 363 | | 7 | ಕೂಟರ | ಕೂಬರ |
| 364 | | 13 | ವತ್ಸಾಟಿಕನ | ವತ್ಸಬಕನ |
| 365 | | 25 | ಸಂಸ್ತುತ್ಯವಾಗಿ | ಸಂಸ್ತುತ್ಯನಾಗಿ |
| 366 | 311 | 26 | ರೊಳು | ದೊಳು |
| 367 | 312 | 21 | ಲೇಸನಿ | ಲೇಸನೆ |
| 368 | 313 | 22 | ಚಿರವಲ | ಬರುತಲ |
| 369 | 314 | 21 | ಕ-ಸನ | ಕಂಸನ |
| 370 | 315 | 16 | ಸಲಹರಿಸಿದ | ಸಂಹರಿಸಿದ |
| 371 | 316 | 14 | ನೃಗಾಲ | ಸೃಗಾಲ |

| | | | | |
|---|---|---|---|---|
| 372 | | 23 | ಅಮುಲ ಮುಚುಕುಂಡಲಿಸಿದ– | ಅತುಲ ಮುಚುಕುಂದನಿಂದ |
| 373 | 318 | 4 | ಪುಂಡ್ರಕಾಖ್ಯನ | ಪೌಂಡ್ರಕಾಖ್ಯನ |
| 374 | | 6 | ಮಾಡಿದನ | ಮಾಡಿದ್ದನು |
| 375 | | 22 | ಗೊಂಟೆಯನ್ನೇ | ಗೊಂಬೆಯನ್ನೇ |
| 376 | 321 | 12 | ತಿಪ್ಪಣ್ಣಾರ್ಯ | ತಿಪ್ಪಣ್ಣಾರ್ಯ |
| 377 | 322 | 19 | ಕಲ್ಯಾರಿ | ಕಲ್ಯಾದಿ |
| 378 | 320 | 21 | ಒಂದೊರ್ಥ | ಒಂದರ್ಥ |
| 379 | 324 | 11 | ಪುರಂದರ | ಪುರಂದರರ |
| 380 | 325 | 3 | ರೂಪು | ರೂಪ |
| 381 | | 9 | ಕ್ಷೇತ್ರಸ್ಥವಾದ | ಕ್ಷೇತ್ರಸ್ಥನಾದ |
| 382 | | 10 | ರೂಪ ಕಿಯಾದಿಗಳಲ್ಲಿ | ರೂಪ ಕ್ರಿಯಾದಿಗಳಲ್ಲಿ |
| 383 | 326 | 5 | ಮುರವೈರಿಯ | ಮುರವೈರಿಯು |
| 384 | | 12 | ದೊರೆರೊಡೆ | ದೊರೆತೊಡೆ |
| 385 | 327 | 13 | ವುಡು | ವುದು |
| 389 | | 25 | ಮುರವೈರಿಯ | ಮುರವೈರಿಯು |
| 390 | 330 | 5 | ಮೊರೆಯಿಡವನೋ | ಮೊರೆಯಿಡುವನೋ |
| 391 | 331 | 5 | ನೋಡದಬಾರದ | ನೋಡಬಾರದ |
| 392 | 392 | 9 | ಕೊಂಡಾಗ | ಕೊಂಡಾಡ |
| 393 | | 16 | ಆರಧೀದನ | ಆರದೀಧನ |
| 394 | 333 | 4 | ಸಹಿಸಲಶ್ಯಕವಾದ | ಸಹಿಸಲಶಕ್ಯವಾದ |
| 395 | 334 | 4 | ನನ್ನಿಕರ್ಷವಾದಾಗ | ಸನ್ನಿಕರ್ಷವಾದಾಗ |
| 396 | | 24 | ಕೊನೆಗಾಣಿಸೋ | ಕೊನೆಗಾಣದೆ |
| 397 | 343 | 11 | ಮಹತ್ತಾ | ಮಹತ್ತು |
| 398 | | 16 | ಅದನಲ್ಲಿ | ಅದರಲ್ಲಿ |
| 399 | | 19 | ವ್ಯಾಪ್ತನಾಗಿದ್ದಾದೆ | ವ್ಯಾಪ್ತನಾಗಿದ್ದಾನೆ |
| 400 | | 23 | ಚರಿತಿ | ಚರಿತ |
| 401 | 344 | 20 | ಕಂಠೊಪದಲಿ | ಕಂಠೋಪದಲಿ |
| 402 | 345 | 2 | ಬಾರೆತೆಂದು | ಬಾರೆಂತೆಂದು |

| | | | | |
|---|---|---|---|---|
| 403 | | 6 | ಪ್ರಳಾಂಪಗೈದು | ಪ್ರಳಾಪಮಂಗೈದು |
| 404 | 353 | 23 | ಆಶ್ರವು | ಆಶ್ರಿಹು |
| 405 | 358 | 16 | ವೆಂಕಟೇಶನೆಂದ | ವೆಂಕಟೇಶನೆಂದು |
| 406 | 359 | 24 | ಲಿಪಿಸಿದ | ಲೇಪಿಸಿದ |
| 407 | 360 | 4 | ಕೃತಕೃತನಾದನು | ಕೃತಕೃತ್ಯನಾದನು |
| 408 | | 10 | ದ್ಯೈತ | ದ್ವೈತ |
| 409 | 362 | 14 | ಮರಣಾದಿಗಳಿಲ್ಲಿ | ಮರಣಾದಿಗಳಿಲ್ಲ |
| 410 | | 23 | ದಶರಥಸೂಸು | ದಶರಥಸೂನು |
| 411 | | | ವಸುದೇವಕಿಯು | ವಸುದೇವ ದೇವಕಿಯು |
| 412 | 363 | 7 | ರೂದಿದ | ರೂಪದ |
| 413 | 364 | 6 | ಕಂಠದನೆಂದು | ಕಂದನೆಂದು |
| 414 | | 13 | ಸವಿಶೇಷಾರ್ಥತದಿಂದ | ಸವಿಶೇಷಾರ್ಥದಿಂದ |
| 415 | 366 | 12 | ಜಿನನಿ | ಜನನಿ |
| 416 | 369 | 2 | ಇವರ | ಇತರ |
| 417 | | 3 | ಇನ್ನೇನ್ನನೂ | ಇನ್ನೇನನ್ನೂ |
| 418 | 374 | 13 | ನನ್ನ ಹೊರತು | ನಿನ್ನ ಹೊರತು |
| 419 | 375 | 16 | ತನುವಿನನಾ | ತನುವಿನಾ |
| 420 | 382 | 13 | ಪೇಳಿಗಳಂತೆ | ವೇಳಿಗಳಂತೆ |
| 421 | | 15 | ರಾಮಕೃಷ್ಣನನ್ನು | ರಾಮಕೃಷ್ಣರನ್ನು |
| 422 | 383 | 14 | ಇಟ್ಟಿಗೆಯಂತೆ | ಇಬ್ಬಗೆಯಂತೆ |
| 423 | 385 | 12 | ವೇಯೆ | ವೀಯೆ |
| 424 | 387 | 10 | ಕರ | ಕದ |
| 425 | 388 | 5 | ಶರಣರಿ | ಶರಣರಿಗೆ |
| 426 | 391 | 21 | ಭೀಮವ್ವನವ | ಭೀಮವ್ವನವರ |
| 427 | 394 | 11 | ಲಕ್ಷ್ಮ | ಲಕ್ಷ್ಮಿ |
| 428 | | | ವತ್ಸಾ | ವತ್ಸ |
| 429 | | 14 | ನಿತ್ಯಾವಿನಿ | ನಿತ್ಯಾವಿ |
| 440 | | 15 | ಮಾಡುವವಿದೆ | ಮಾಡುತಲಿ |
| 441 | 398 | 19 | ರೊಡನನಾದ | ರೊಡೆಯನಾದ |

*